ಮೈಸೂರು ವಿದ್ಯಾಭ್ಯಾಸದ ಇಲಾಖೆ

ಕನ್ನಡ

# ಮಧ್ಯಮ ವ್ಯಾಕರಣ



ತೀ. ನಂ. ಶ್ರೀಕಂಠಯ್ಯ, ಎಂ.ಎ.

ನಾಲ್ಕನೆಯ ಮುದ್ರಣ—೪೦,೦೦೦ ಪ್ರತಿಗಳು

ಬೆಂಗಳೂರು:
ಮೈಸೂರು ಸರ್ಕಾರದ ಮುದ್ರಣಾಲಯದ ಸೂಪರಿಂಟೆಂಡೆಂಟರವರಿಂದ
ಮುದ್ರಿಸಲ್ಪಟ್ಟಿತು
1946



# ಮುನ್ನುಡಿ

---

ಮೈಸೂರು ವಿದ್ಯಾಭ್ಯಾಸದ ಇಲಾಖೆಯ ಆಡಳಿತಕ್ಕೆ ಒಳಪಟ್ಟ ಪ್ರಾಥಮಿಕ, ಮಾಧ್ಯಮಿಕ ಮತ್ತು ಹೈಸ್ಕೂಲು ತರಗತಿಗಳಲ್ಲಿ ಓದುವ ವಿದ್ಯಾರ್ಥಿಗಳ ಉಪಯೋಗಕ್ಕೆ ಬೇಕಾದ ಕನ್ನಡ ವ್ಯಾಕರಣಗಳನ್ನು ಸಿದ್ಧಪಡಿಸುವುದಕ್ಕಾಗಿ ಮ|| ರಾ|| ಗಳಾದ ಬೆಳ್ಳಾವೆ ವೆಂಕಟನಾರಾಯಣಪ್ಪ, ಎಂ.ಎ. (ಅಧ್ಯಕ್ಷರು), ಅಸ್ಥಾನ ಮಹಾವಿದ್ವಾನ್ ತಿರುವಳ್ಳೂರು ಶ್ರೀನಿವಾಸ ರಾಘವಾಚಾರ್ಯರು, ಎ. ಎನ್. ನರಸಿಂಹಯ್ಯ, ಎಂ.ಎ., ಎಲ್. ಟಿ. ಪಿ.ಎಚ್.ಡಿ., ಟಿ.ಎಸ್. ವೆಂಕಣ್ಣಯ್ಯ, ಎಂ.ಎ., ಎ.ಆರ್. ಕೃಷ್ಣಶಾಸ್ತ್ರೀ, ಎಂ.ಎ., ಮತ್ತು ತೀ. ನಂ. ಶ್ರೀಕಂಠಯ್ಯ, ಎಂ.ಎ., ಇವರನ್ನೊಳಕೊಂಡ ಒಂದು ಸಮಿತಿಯನ್ನು ಸರ್ಕಾರದವರು ನಿಯಮಿಸಿ, ಈ ಸಮಿತಿಯ ಸಲಹೆಗಳಿಗನುಸಾರವಾಗಿ ಡಾ|| ನರಸಿಂಹಯ್ಯನವರು ಪ್ರಾಥಮಿಕ ತರಗತಿಗಳಿಗಾಗಿಯೂ, ಶ್ರೀಮಾನ್ ಶ್ರೀಕಂಠಯ್ಯನವರು ಮಾಧ್ಯಮಿಕ ತರಗತಿಗಳಿಗಾಗಿಯೂ, ಶ್ರೀಮಾನ್ ವೆಂಕಣ್ಣಯ್ಯನವರು ಹೈಸ್ಕೂಲು ತರಗತಿಗಳಿಗಾಗಿಯೂ ಒಂದೊಂದು ವ್ಯಾಕರಣವನ್ನು ಬರೆಯಬೇಕೆಂದು ಗೊತ್ತುಮಾಡಿದರು. ಶ್ರೀಮಾನ್ ವೆಂಕಟನಾರಾಯಣಪ್ಪನವರು ನಡುವೆ ಸಮಿತಿಯ ಸದಸ್ಯತ್ವವನ್ನು ಕಾರಣಾಂತರದಿಂದ ಬಿಟ್ಟದ್ದರಿಂದ ಶ್ರೀಮಾನ್ ವೆಂಕಣ್ಣಯ್ಯನವರಿಗೆ ಸಮಿತಿಯ ಅಧ್ಯಕ್ಷತೆಯನ್ನು ವಹಿಸಲಾಯಿತು. ಅವರ ಅಧ್ಯಕ್ಷತೆಯ ಕಾಲದಲ್ಲಿ ಕನ್ನಡ ಪ್ರಥಮ ವ್ಯಾಕರಣ ಮಧ್ಯಮ ವ್ಯಾಕರಣಗಳೆರಡೂ ರಚಿತವಾಗಿ ಸಮಿತಿಯ ಒಪ್ಪಿಗೆಯನ್ನು ಪಡೆದು ಪ್ರಕಟನೆಗೆ ಸಿದ್ಧವಾದುವು.

*　　*　　*

ವ್ಯಾಕರಣ ಗ್ರಂಥವು ಕೇವಲ ಸೂತ್ರಗಳ ಪಟ್ಟಿಯಾಗಿರಬಾರದು. ಅದರಲ್ಲಿ ಸೂತ್ರಕ್ಕಿಂತ ಹೆಚ್ಚಾಗಿ ವಿವರಣೆಯೂ ವಿವರಣೆಗಿಂತ ಹೆಚ್ಚಾಗಿ ಉದಾಹರಣೆಯೂ ಬಂದರೆ, ಪಾಠವನ್ನು ಓದತಕ್ಕ ವಿದ್ಯಾರ್ಥಿಗಳಿಗೆ ಕ್ಲೇಶ ಕಡಮೆಯಾಗುತ್ತದೆ; ಆಸಕ್ತಿಯೂ ಬೆಳೆಯಬಹುದು. ಈ ಅಂಶವನ್ನು ಉದ್ದಕ್ಕೂ ದೃಷ್ಟಿಯಲ್ಲಿರಿಸಿಕೊಂಡು ಈ ‘ಕನ್ನಡ ಮಧ್ಯಮ ವ್ಯಾಕರಣ’ವನ್ನು ರಚಿಸಲಾಗಿದೆ. ಉದಾಹರಿಸಬೇಕಾದದ್ದು ಒಂದು ಪದವಾಗಿರಲಿ ಒಂದು ಪ್ರತ್ಯಯವಾಗಿರಲಿ, ಅದನ್ನು ಬಿಡಿಯಾಗಿ ಕೊಡದೆ ವಾಕ್ಯದಲ್ಲಿ

ಹೊಂದಿಸಿಕೊಡುವುದೇ ಇಲ್ಲ ಸಾಮಾನ್ಯವಾಗಿ ಅನುಸರಿಸತಕ್ಕ ಪದ್ಧತಿ. ಈ ಉದಾಹರಣೆಯ ವಾಕ್ಯಗಳಲ್ಲಿ * ಸ್ವಾರಸ್ಯ ವೈವಿಧ್ಯಗಳು ತಪ್ಪದಂತೆ ಆದಷ್ಟುಮಟ್ಟಿಗೂ ನೋಡಿಕೊಳ್ಳಲಾಗಿದೆ.

ಇಲ್ಲಿಯ ವಿಷಯನಿರೂಪಣೆಯಲ್ಲಿ ಕೆಲವು ಅಂಶಗಳು ನೂತನವಾಗಿ ಕಾಣಬಹುದು: ಉದಾಹರಣೆಗೆ—ಪ್ರಥಮಾವಿಭಕ್ತಿಗೆ ಪ್ರತ್ಯಯವನ್ನು ಹೇಳದಿರುವುದು, ಪಂಚಮೀ ವಿಭಕ್ತಿಯನ್ನು ಕೈಬಿಟ್ಟಿರುವುದು, ಗುಣವಾಚಕ ಸಂಖ್ಯಾವಾಚಕ ಕೃದಂತನಾಮ ಮೊದಲಾದುವುಗಳಿಗೆ ವಿಶೇಷಣರೂಪ ಕಾರಕರೂಪಗಳೆಂಬ ಎರಡೆರಡು ರೂಪಗಳನ್ನು ಹೇಳಿರುವುದು, ಸಂಯುಕ್ತ ಕ್ರಿಯಾಪದಗಳನ್ನು ವಿಂಗಡಿಸಿಕೊಟ್ಟಿರುವುದು, ಇತ್ಯಾದಿ. ಹೀಗೆ ನಿರೂಪಿಸಿರುವ ಅಂಶಗಳಿಗೆಲ್ಲ ಕನ್ನಡ ಭಾಷೆಯ ಚರಿತ್ರೆಯಲ್ಲಿ ಆಧಾರವುಂಟು. ಇದರಿಂದ ವಿದ್ಯಾರ್ಥಿಗಳಿಗೆ ಕನ್ನಡ ಮಾತಿನ ರೂಢಿ ಚೆನ್ನಾಗಿ ತಿಳಿಯುವುದಲ್ಲದೆ, ವ್ಯಾಕರಣದ ಪಾಠವೂ ಸುಲಭವಾಗಬಹುದೆಂದು ಈ ಲೇಖಕನ ನಂಬಿಕೆ.

ಪ್ರತಿಯೊಂದು ಅಧ್ಯಾಯದಮೇಲೂ ಪ್ರಶ್ನೆಗಳನ್ನು ಹಾಕಿ, ಅಭ್ಯಾಸಗಳನ್ನು ಮಾಡಿಸಿ ಹೊರತು ವ್ಯಾಕರಣದ ಪಾಠ ಪೂರ್ಣವಾಗುವುದಿಲ್ಲ. ಈ ಪುಸ್ತಕದಲ್ಲಿ ಅಭ್ಯಾಸಗಳನ್ನೂ ಸೇರಿಸಬೇಕೆಂಬ ಉದ್ದೇಶ ಮೊದಲು ಇದ್ದಿತು. ಆದರೆ, ಗ್ರಂಥ ತುಂಬ ದೊಡ್ಡದಾಗುವುದೆಂಬ ಭೀತಿಯಿಂದ ಅದನ್ನು ಬಿಡಬೇಕಾಯಿತು. ಈ ಅಭ್ಯಾಸಗಳನ್ನು ಉಪಾಧ್ಯಾಯರೇ ಸಮಯೋಚಿತವಾಗಿ ಕಲ್ಪಿಸಿಕೊಳ್ಳಬಹುದು.

ತೀ. ನಂ. ಶ್ರೀ.

---

* ಉದಾಹರಣೆಯ ವಾಕ್ಯಗಳಲ್ಲಿ ಎತ್ತಿತೋರಿಸಬೇಕಾದ ಪದ, ಪ್ರತ್ಯಯ ಮೊದಲಾದುವುಗಳನ್ನು ವಾಕ್ಯದ ಮಿಕ್ಕ ಭಾಗಕ್ಕೆ ಉಪಯೋಗಿಸಿರುವುದಕ್ಕಿಂತ ಕೊಂಚ ದೊಡ್ಡದಾದ ಅಕ್ಷರದಲ್ಲಿ ಅಚ್ಚುಮಾಡಿದೆ. ಈ ಎರಡು ಬಗೆಯ ಅಕ್ಷರಗಳಿಗೂ ಗಾತ್ರದಲ್ಲಿ ವ್ಯತ್ಯಾಸ ಕಡಮೆಯಾಗಿರುವುದರಿಂದ ವಾಚಕರು ಸೂಕ್ಷ್ಮವಾಗಿ ಅವಲೋಕಿಸಬೇಕೆಂದು ಕೋರಿಕೆ.

# ವಿಷಯಸೂಚಿಕೆ

# ಕನ್ನಡ ಮಧ್ಯಮ ವ್ಯಾಕರಣ

## ಮೊದಲನೆಯ ಅಧ್ಯಾಯ

### ವಾಕ್ಯ-ಪದ-ವರ್ಣ

೧. ಇಬ್ಬರು ಸೇರಿದರೆ ಸಾಕು, ಮಾತಾಡುವುದಕ್ಕೆ ಪ್ರಾರಂಭ ಮಾಡುತ್ತಾರೆ. ಒಬ್ಬನು ತನಗೆ ತೋರಿದ್ದನ್ನು ಇನ್ನೊಬ್ಬನಿಗೆ ಹೇಳುತ್ತಾನೆ; ತನಗೆ ಬೇಕಾದದ್ದನ್ನು ಇನ್ನೊಬ್ಬನಿಂದ ಕೇಳಿ ತಿಳಿದುಕೊಳ್ಳುತ್ತಾನೆ. ಸಂತೋಷವೋ ಸಂಕಟವೋ ಹೆಚ್ಚಾದಾಗ ಒಬ್ಬೊಬ್ಬನೇ ತನ್ನಲ್ಲಿ ತಾನು ಮಾತಾಡಿಕೊಳ್ಳುವುದೂ ಉಂಟು. ಕೆಳಗೆ ಕೊಟ್ಟಿರುವ ಮಾತುಗಳನ್ನು ನೋಡಿ:

ಹಕ್ಕಿ ಮರದಿಂದ ಹಾರಿತು.
ಶಂಕರನು ಹೊಸ ಟೋಪಿಯನ್ನು ಹಾಕಿಕೊಂಡು ಬಂದಿದ್ದಾನೆ.
ಅಣ್ಣ, ನೀನು ಎಷ್ಟು ಹೊತ್ತಿಗೆ ಬರುತ್ತೀಯೋ?
ಆ ಬೊಂಬೆಯ ಪುಸ್ತಕವನ್ನು ನನಗೆ ತೋರಿಸು.
ಸಿಕ್ಕಿತು ಸಿಕ್ಕಿತು ಬಣ್ಣದ ಗೋಲಿ!
ಅಯ್ಯೋ ಪಟ ಹರಿದುಹೋಯಿತಲ್ಲ!

ಜನರು ಹೀಗೆ ಮಾತುಗಳನ್ನು ಎಷ್ಟೋ ರೀತಿಯಲ್ಲಿ ಉಪಯೋಗಿಸುತ್ತಾರೆ. ಮಾತು ಇಲ್ಲದಿದ್ದರೆ ಒಬ್ಬರ ಅಭಿಪ್ರಾಯವನ್ನು ಮತ್ತೊಬ್ಬರು ತಿಳಿದುಕೊಳ್ಳುವುದು ತುಂಬ ಕಷ್ಟವಾಗುತ್ತಿದ್ದಿತು. ಮಾತಾಡುವುದಕ್ಕೆ ಬಾರದ ಮೂಗರೂ ತಮ್ಮ ಮನಸ್ಸಿನಲ್ಲಿರುವುದನ್ನು ಇನ್ನೊಬ್ಬರಿಗೆ ತಿಳಿಸುವುದಕ್ಕೆ ಎಷ್ಟು ಕಷ್ಟಪಡುತ್ತಾರೆ!

೨. ಹೀಗೆ ನಮ್ಮ ವ್ಯವಹಾರಕ್ಕೆ ಪ್ರತಿದಿನವೂ ಬೇಕಾಗುವ ಮಾತಿನ ಸ್ವರೂಪವೇನು? ನಮ್ಮ ಅಭಿಪ್ರಾಯವನ್ನು ಸರಿಯಾಗಿ ತಿಳಿಸುವುದಕ್ಕೆ ಮಾತುಗಳನ್ನು ಕೂಡಿಸಿ ಉಪಯೋಗಿಸುವುದು ಹೇಗೆ?—ಇವು ಮೊದಲಾದ ವಿಷಯಗಳನ್ನೆಲ್ಲಾ ನಾವು ತಿಳಿದುಕೊಳ್ಳುವುದು ಆವಶ್ಯಕ. ಇದಕ್ಕಾಗಿ ವ್ಯಾಕರಣವನ್ನು ಓದಬೇಕು: ಬಲ್ಲವರು ಮಾತುಗಳನ್ನು ಹೇಗೆ ಉಪಯೋಗಿಸುತ್ತಾರೆ ಎಂಬುದನ್ನು ಗಮನಿಸಬೇಕು; ಸರಿಯಾಗಿ ಮಾತಾಡುವುದನ್ನೂ ಬರೆಯುವುದನ್ನೂ ಅಭ್ಯಾಸಮಾಡಬೇಕು.

೩. ಸಾಮಾನ್ಯವಾಗಿ ನಾವು ಮಾತುಗಳನ್ನು ಒಂಟೊಂಟಿಯಾಗಿ ಬಳಸುವುದಿಲ್ಲ. 'ಹಕ್ಕಿ', 'ಬಂದಿದ್ದಾನೆ', 'ಪುಸ್ತಕವನ್ನು'—ಹೀಗೆ ಒಂದೊಂದೇ ಮಾತನ್ನು ಆಡಿ ನಿಲ್ಲಿಸಿದರೆ, 'ಹಕ್ಕಿ ಏನು ಮಾಡಿತು? 'ಯಾವನು ಬಂದಿದ್ದಾನೆ?' ಪುಸ್ತಕವನ್ನು ಏನು ಮಾಡಬೇಕು?'—ಹೀಗೆ ಪ್ರಶ್ನೆಗಳು ಹುಟ್ಟುತ್ತವೆ. ಆದ್ದರಿಂದ, 'ಹಕ್ಕಿ ಮರದಿಂದ ಹಾರಿತು', 'ಶಂಕರನು ಹೊಸ ಟೋಪಿಯನ್ನು ಹಾಕಿಕೊಂಡು ಬಂದಿದ್ದಾನೆ', 'ಆ ಬೊಂಬೆಯ ಪುಸ್ತಕವನ್ನು ನನಗೆ ತೋರಿಸು' ಎಂಬಂತೆ ಹಲವು

ಮಾತುಗಳನ್ನು ಒಂದು ಪೂರ್ಣವಾದ ಅರ್ಥವು ಬರುವಂತೆ ಗುಂಪಾಗಿ ಸೇರಿಸಿ ಆಡುತ್ತೇವೆ.

೪. ಹೀಗೆ ಪೂರ್ತಿಯಾದ ಅರ್ಥವನ್ನು ಕೊಡುವಂತೆ ಸೇರಿದ ಮಾತುಗಳ ಗುಂಪಿಗೆ **ವಾಕ್ಯ** ಎಂದು ಹೆಸರು.

೫. ವಾಕ್ಯದಲ್ಲಿ ಸೇರಿರುವ ಬಿಡಿ ಮಾತುಗಳನ್ನು ಪದಗಳೆಂದು ಕರೆಯುತ್ತಾರೆ. 'ಹಕ್ಕಿ ಮರದಿಂದ ಹಾರಿತು' ಎಂಬ ವಾಕ್ಯದಲ್ಲಿ 'ಹಕ್ಕಿ', 'ಮರದಿಂದ', 'ಹಾರಿತು' ಎಂಬ ಮೂರು ಪದಗಳಿವೆ. ಮೇಲೆ ಉದಾಹರಣೆಗಾಗಿ ಕೊಟ್ಟಿರತಕ್ಕ ಮಿಕ್ಕ ವಾಕ್ಯಗಳಲ್ಲಿ ಎಷ್ಟೆಷ್ಟು ಪದಗಳಿವೆ? ಎಣಿಸಿ ನೋಡಿ.

೬. ಕೆಳಗೆ ಕೊಟ್ಟಿರುವ ಪದಗಳ ಗುಂಪುಗಳನ್ನು ಈಗ ಗಮನಿಸಿ:

ಆ ಮೇಜಿನ ಕೆಳಗೆ,
ಹೊಸದಾಗಿ ಕಟ್ಟಿದ ಮನೆ,
ಚೆನ್ನಾಗಿ ಕುಣಿಯುತ್ತದೆ,
ನನ್ನ ಟೋಪಿ,
ಹಳ್ಳದ ದಂಡೆಯಲ್ಲಿ ಹೋಗುತ್ತ.

ಇವು ಪದಗಳ ಗುಂಪುಗಳಾದರೂ ವಾಕ್ಯಗಳಲ್ಲ. ಏಕೆಂದರೆ ಇವುಗಳಲ್ಲಿ ಒಂದಾದರೂ ಪೂರ್ತಿಯಾದ ಅರ್ಥವನ್ನು ಕೊಡುವುದಿಲ್ಲ. 'ಆ ಮೇಜಿನ ಕೆಳಗೆ' ಎಂದು ಹೇಳಿ ನಿಲ್ಲಿಸಿದರೆ 'ಏನು ಇದೆ?' ಎಂಬ ಪ್ರಶ್ನೆ ಹುಟ್ಟುತ್ತದೆ. ಮಿಕ್ಕ ಗುಂಪುಗಳ ವಿಷಯವೂ ಹೀಗೆಯೇ. ಆದರೂ ಒಂದೊಂದು ಗುಂಪಿಗೆ ಸೇರಿರುವ ಪದಗಳಲ್ಲೂ ಹೊಂದಿಕೆಯುಳ್ಳ ಅರ್ಥವೊಂದು ಇದ್ದೇ ಇದೆ; ಆ ಅರ್ಥವು ಪೂರ್ಣವಾಗುವುದಕ್ಕೆ ಇನ್ನು ಕೆಲವು ಪದಗಳು ಸೇರಬೇಕು.

೭. ಹೀಗೆ ಅಪೂರ್ಣವಾದರೂ ಹೊಂದಿಕೆಯುಳ್ಳ ಅರ್ಥವನ್ನು ಕೊಡುವ ಪದಗಳ ಗುಂಪಿಗೆ **ಪದಸಮುಚ್ಚಯ** ಎಂದು ಹೆಸರು.

೮. 'ಮೇಜು ಮನೆಗೆ', 'ಕುಣಿಯುತ್ತದೆ ಮರದ', 'ಟೋಪಿ ಕತ್ತಲೆ ಬೇಗ'—ಇವು ಪದಗಳ ಗುಂಪುಗಳಾದರೂ ಪದಸಮುಚ್ಚಯಗಳಲ್ಲ. ಏಕೆಂದರೆ ಈ ಒಂದೊಂದು ಗುಂಪಿನಲ್ಲಿ ಸೇರಿರುವ ಪದಗಳಲ್ಲೂ ಅರ್ಥದಲ್ಲಿ ಯಾವ ಹೊಂದಿಕೆಯೂ ತೋರುವುದಿಲ್ಲ.

೯. ವಾಕ್ಯವು ಪದಗಳಿಂದ ಕೂಡಿರುವ ಹಾಗೆ ಪದವು **ವರ್ಣ**ಗಳಿಂದ ಕೂಡಿರುತ್ತದೆ. ಉದಾಹರಣೆಗೆ 'ಹಕ್ಕಿ', 'ಎಷ್ಟು' ಎಂಬ ಪದಗಳನ್ನು ಬಿಡಿಸಿ ಉಚ್ಚರಿಸಿದರೆ, 'ಹ್—ಅ—ಕ್—ಕ್—ಇ', 'ಎ—ಷ್—ಟ್—ಉ', ಎಂಬ ಬೇರೆ ಬೇರೆ ಅಂಶಗಳು ಬಿಡಿಯಾಗಿ ಕೇಳಿಸುತ್ತವೆ. ಈ ಒಂದೊಂದು ಅಂಶಕ್ಕೂ ವರ್ಣ ಎಂದು ಹೆಸರು. ಎಷ್ಟು ಪ್ರಯತ್ನಪಟ್ಟರೂ ವರ್ಣವನ್ನು ಒಡೆದು ಇನ್ನೂ ಸಣ್ಣ ಭಾಗಗಳಾಗಿ ಮಾಡುವುದಕ್ಕೆ ಆಗುವುದಿಲ್ಲ.

---

## ಎರಡನೆಯ ಅಧ್ಯಾಯ

### ಪ್ರಕೃತಿ–ಪ್ರತ್ಯಯ

೧. ನಿಮ್ಮ ತಂದೆ ಮನೆಯಿಂದ ಹೊರಟಾಗ ನೀನು ಎಲ್ಲಿದ್ದೆ ?
ನಾನು ಸಂಜೆಗೆ ಮುಂಚೆಯೇ ಮನೆಗೆ ಬಂದುಬಿಡುತ್ತೇನೆ.
ಈ ಮನೆಯ ಬಾಗಿಲಿಗೆ ಬೀಗ ಹಾಕಿದೆ.
ನಮ್ಮ ಬೀದಿಯ ಕೊನೆಯ ಮನೆಯಲ್ಲಿ ಯಾರೂ ವಾಸವಾಗಿಲ್ಲ.

ಮೇಲಿನ ವಾಕ್ಯಗಳಲ್ಲಿ ಬಂದಿರುವ ಮನೆಯಿಂದ, ಮನೆಗೆ, ಮನೆಯ ಮನೆಯಲ್ಲಿ, ಎಂಬ ಪದಗಳನ್ನು ನೋಡಿ. 'ಮನೆ' ಎಂಬ ಭಾಗವು ಎಲ್ಲದರಲ್ಲಿಯೂ ಇದೆ. ಇದಕ್ಕೆ –ಇಂದ, –ಗೆ, –ಅ, –ಅಲ್ಲಿ ಎಂಬುವು ಸೇರಿ ವಾಕ್ಯದಲ್ಲಿರುವ ಬೇರೆ ಪದಗಳೊಂದಿಗೆ ಇದಕ್ಕಿರುವ ಸಂಬಧವನ್ನು ತೋರಿಸುತ್ತವೆ. 'ಮನೆ ಹೊರಟಾಗ' 'ಮನೆ ಬಂದು ಬಿಡುತ್ತೇನೆ' ಎಂದು ಹೇಳಿದ್ದರೆ ಈ ಪದಗಳ ಸಂಬಂಧವೇನೆಂಬುದು ಸ್ಪಷ್ಟವಾಗುತ್ತಿರಲಿಲ್ಲ.

೨. ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ, 'ಮನೆ' ಎಂಬ ಮಾತಿಗೆ ಸ್ವತಂತ್ರವಾದ ಅರ್ಥವಿದೆ. ಮನೆ, ಮಠ, ಊರು, ಕೇರಿ ಎಂಬಂತೆ ಅದನ್ನು ಬಿಡಿಯಾಗಿ ಉಪಯೋಗಿಸಬಹುದು. ಆದರೆ ಮೇಲಿನ ಉದಾಹರಣೆಗಳಲ್ಲಿ ಅದಕ್ಕೆ ಸೇರಿರುವ -ಇಂದ, -ಗೆ ಮೊದಲಾದುವುಗಳಿಗೆ ಸ್ವತಂತ್ರವಾದ ಅರ್ಥವಿಲ್ಲ ; ಅವನ್ನು ಬಿಡಿಯಾಗಿ ಉಪಯೋಗಿಸುವುದು ಸಾಧ್ಯವಲ್ಲ. ಸ್ವತಂತ್ರವಾದ ಒಂದು ಶಬ್ದದಮೇಲೆ ಹತ್ತಿದಾಗ ಮಾತ್ರ ಇವಕ್ಕೆ ಒಂದು ಅರ್ಥ ಬರುತ್ತದೆ.

೩. ಹೀಗೆ ಒಂದು ಪದವನ್ನು ಒಡೆದು ನೋಡಿದರೆ, ಅಲ್ಲಿ ಸ್ವತಂತ್ರವಾದ ಅರ್ಥವುಳ್ಳ ಒಂದು ಶಬ್ದವಿರುತ್ತದೆ. ಇದಕ್ಕೆ **ಪ್ರಕೃತಿ** ಎಂದು ಹೆಸರು. ಇದರ ಅರ್ಥವನ್ನು ಸಂದರ್ಭಕ್ಕೆ ತಕ್ಕಂತೆ ಬೇರೆ ಬೇರೆ ರೀತಿಗಳಲ್ಲಿ ಬದಲಾಯಿಸುವುದಕ್ಕಾಗಿ–ಇಂದ, –ಗೆ ಮೊದಲಾದುವು ಸೇರುತ್ತವೆ. ಇವಕ್ಕೆ **ಪ್ರತ್ಯಯ**ಗಳೆಂದು ಹೆಸರು.

೪. ಪ್ರಕೃತಿಯೂ ಪ್ರತ್ಯಯವೂ ಕೂಡಿದರೆ ಪದವಾಗುತ್ತದೆ. ಮೇಲಿನ ಉದಾಹರಣೆಗಳಲ್ಲಿ,

| ಪ್ರಕೃತಿ | | ಪ್ರತ್ಯಯ | | ಪದ |
|---|---|---|---|---|
| ಮನೆ | + | ಇಂದ | = | ಮನೆಯಿಂದ |
| ಮನೆ | + | ಗೆ | = | ಮನೆಗೆ |
| ಮನೆ | + | ಅ | = | ಮನೆಯ |
| ಮನೆ | + | ಅಲ್ಲಿ | = | ಮನೆಯಲ್ಲಿ |

೫. ಮನೆಯ ಬಾಗಿಲಿಗೆ ಬೀಗ ಹಾಕಿದೆ.
ಹ ಯಲ್ಲಿ ಮನೆಗಳು ಕಡಮೆ, ಪಟ್ಟಣದಲ್ಲಿ ಹೆಚ್ಚು.

ಇಲ್ಲಿ ಬಂದಿರುವ ಮನೆಯ, ಮನೆಗಳು ಎಂಬ ಪದಗಳನ್ನು ಹೋಲಿಸಿ. 'ಮನೆ' ಎಂಬುದಕ್ಕೂ 'ಬಾಗಿಲಿಗೆ' ಎಂಬುದಕ್ಕೂ ಇರುವ ಸಂಬಂಧವನ್ನು ತೋರಿಸುವುದಕ್ಕಾಗಿ 'ಮನೆ' ಎಂಬುದಕ್ಕೆ–ಅ ಎಂಬ ಪ್ರತ್ಯಯವು ಸೇರಿದೆ. 'ಮನೆಗಳು' ಎಂಬುದರಲ್ಲಿ –ಗಳು ಎಂಬುದು ಹಲವು ಮನೆ ಎಂಬುದನ್ನು ತೋರಿಸುವುದಕ್ಕೋಸ್ಕರ ಬಂದಿದೆ.

೬. "ಗಾಣಕ್ಕೆ ನಿನ್ನ ಹೆಂಡತಿಯನ್ನೇಕೆ ಕಟ್ಟಿದ್ದೀಯೆ ?" ಎಂದು
ಕೋತಿ ಕೇಳಿತು,
ಗಾಣಿಗನ ಸಂಗಡ ಗುದ್ದಾಡಿ ಒಣ ರೊಟ್ಟಿಯನ್ನು ತಿಂದರಂತೆ.
ಗಾಣಿಗಿತ್ತಿ ಅಯ್ಯೋ ಎಂದರೆ ನೆತ್ತಿ ತಂಪಾದೀತೆ ?

ಇಲ್ಲಿ, 'ಗಾಣಕ್ಕೆ' ಎಂಬುದರಲ್ಲಿ 'ಗಾಣ' ಪ್ರಕೃತಿ; ಇದಕ್ಕೆ—ಕ್ಕೆ ಎಂಬ ಪ್ರತ್ಯಯವು ಸೇರಿ, ವಾಕ್ಯದಲ್ಲಿ ಇದರ ಸಂಬಂಧವೇನೆಂಬುದನ್ನು ತೋರಿಸುತ್ತದೆ.

'ಗಾಣಿಗನ' ; ಇಲ್ಲಿ, ಗಾಣವನ್ನು ಆಡುವವನು ಎಂಬ ಅರ್ಥ ಕೊಡುವುದಕ್ಕಾಗಿ 'ಗಾಣ' ಎಂಬ ಪ್ರಕೃತಿಗೆ '—ಇಗ' ಎಂಬ ಪ್ರತ್ಯಯವು ಸೇರಿ, ಗಾಣ+ಇಗ= 'ಗಾಣಿಗ' ಎಂದು ಆಗಿದ, ಬಳಿಕ 'ಗಾಣಿಗ' ಎನ್ನುವುದೇ ಪ್ರಕೃತಿಯಾಗಿ, ಸಂಬಂಧವನ್ನು ಸೂಚಿಸುವ--ಅ ಎಂಬ ಪ್ರತ ಯವು ಅದಕ್ಕೆ ಹತ್ತಿದೆ.

'ಗಾಣಿಗಿತ್ತಿ' ಎಂಬುದರಲ್ಲಿ 'ಗಾಣಿಗ' ಎಂಬ ಪ್ರಕೃತಿಗೆ ಹೆಣ್ಣು ಎಂಬುದನ್ನು ತೋರಿಸುವ--ಇತ್ತಿ ಎಂಬ ಪ್ರತ್ಯವು ಸೇರಿದೆ.

ಗಾಣ+ ಕ್ಕೆ =ಗಾಣಕ್ಕೆ
ಗಾಣ+ ಇಗ=ಗಾಣಿಗ
ಗಾಣಿಗ+ಅ =ಗಾಣಿಗನ
ಗಾಣಿಗ+ಇತ್ತಿ=ಗಾಣಿಗಿತ್ತಿ

೭. ರಾಮನು ತಂದೆಯ ಮಾತನ್ನು ಉಳಿಸುವುದಕ್ಕಾಗಿ ಕಾಡಿಗ ನಡೆದನು.
ನೀನು ಏಕೆ ಕುಂಟಿಕೊಂಡು ನಡೆಯುತ್ತಿಯೆ ?
ವರ್ಷವರ್ಷವೂ ಮಳೆ ಬೆಳೆ ಚೆನ್ನಾಗಿ ನಡೆಯಲಿ.
ಕಾಡಿನಲ್ಲಿ ನಡೆದು ನಡೆದು ಆ ಹುಡುಗಿಯ ಹೆಜ್ಜೆ ಊದಿಕೊಂಡಿತು
ನಡೆಯುವನು ಎಡವದೆ ಇರುತ್ತಾನೆಯೆ ?

ಮೇಲಿನ ಎಲ್ಲ ವಾಕ್ಯಗಳಲ್ಲೂ 'ನಡೆ' ಎಂಬ ಕೆಲಸವನ್ನು ಳುವ ಶಬ್ದ ಬಂದಿದೆ. ಆದರೆ ಅದಕ್ಕೆ ಬೇರೆಬೇರೆ ಪ್ರತ್ಯಯಗಳು ಸೇರಿ

ಎಷ್ಟೆಷ್ಟು ರೀತಿಯಲ್ಲಿ ಅದರ ಅರ್ಥವನ್ನು ಬದಲಾಯಿಸಿದೆ? ನಡೆದನು= ನಡ + ದ + ಅನು ಇಲ್ಲಿ -ದ ಎನ್ನುವ ಪ್ರತ್ಯಯವು 'ಕೆಲಸ ಹಿಂದೆ ಜರುಗಿತು' ಎನ್ನುವುದನ್ನೂ,—ಅನು ಎನ್ನುವ ಪ್ರತ್ಯಯ 'ಆ ಕೆಲಸವನ್ನು ಮಾಡಿದವನು ಒಬ್ಬ, ಅವನು ಗಂಡಸು' ಎನ್ನುವುದನ್ನೂ ತೋರಿಸುತ್ತವೆ. ಮಿಕ್ಕ ಪದಗಳಲ್ಲೂ ಇದರಂತೆಯೇ ಪ್ರತ್ಯಯಗಳ ಅರ್ಥವನ್ನು ಬಿಡಿಸಿ ನೋಡಬಹುದು.

೮. ಅಂತೂ, ನಾವು ಬಳಸುವ ಮಾತಿನಲ್ಲಿ ಪ್ರಕೃತಿಯ ಅರ್ಥವನ್ನು ಹಲವು ರೀತಿಗಳಲ್ಲಿ ಬದಲಾಯಿಸಬೇಕಾಗುತ್ತದೆ. ಅದಕ್ಕಾಗಿ ಹಲವು ರೀತಿಯ ಪ್ರತ್ಯಯಗಳನ್ನು ಉಪಯೋಗಿಸಬೇಕಾಗುತ್ತದೆ. ಗಾಣ - ಗಾಣಿಗ--ಗಾಣಿಗಿತ್ತಿ ಎಂಬ ಕಡೆ ನೋಡಿದಂತೆ, ಪ್ರತ್ಯಯ ಹತ್ತಿದ ಶಬ್ದವು ಮತ್ತೆ ಪ್ರಕೃತಿಯಾಗಿ ಅದಕ್ಕೆ ಬೇರೊಂದು ಅರ್ಥದಲ್ಲಿ ಬೇರೊಂದು ಪ್ರತ್ಯಯವು ಹತ್ತಬಹುದು. 'ನಡೆದನು' ಎಂಬುದರಲ್ಲಿ ಇರುವಂತೆ, ಪ್ರಕೃತಿಯ ಅರ್ಥವನ್ನು ಬೇರೆ ಬೇರೆ ರೀತಿಗಳಲ್ಲಿ ಬದಲಾಯಿಸುವುದಕ್ಕಾಗಿ ಅದಕ್ಕೆ ಹಲವು ಬೇರೆ ಬೇರೆ ಪ್ರತ್ಯಯಗಳು ಒಂದೇಸಲಕ್ಕೆ ಸೇರಬಹುದು.

---

## ಮೂರನೆಯ ಅಧ್ಯಾಯ.

### ಪದಗಳ ಬಗೆಗಳು

೧. ನಾವು ಆಡುವ ಮಾತುಗಳನ್ನು ಗುಂಪುಗಳಾಗಿ ವಿಂಗಡಿಸಬಹುದು. ಕೆಳಗಿನ ವಾಕ್ಯಗಳನ್ನು ನೋಡಿ:

ಸೀತೆ ಮನೆಗೆ ಹೋದಳು.
ರೈಲು ಎಷ್ಟು ಗಂಟೆಗೆ ಹೊರಡುತ್ತದೆ ?
ಹಾಲಿನ ಬಣ್ಣ ಬಿಳುಪು.
ಅಯ್ಯೋ, ಮಗು ಬಿದ್ದಿತು !
ಅವನು ಚಿತ್ರಪಟವನ್ನು ಥೊಪ್ಪನೆ ಕೆಡವಿದನು.

ಇಲ್ಲಿ ಸೀತೆ, ಮನೆಗೆ, ರೈಲು, ಹಾಲಿನ, ಮಗು ಮೊದಲಾದ ಪದಗಳು ಜನರ ಅಥವಾ ಪದಾರ್ಥಗಳ ಹೆಸರನ್ನು ತಿಳಿಸುತ್ತವೆ. ಬಿಳುಪು ಎಂಬುದು ಒಂದು ವಸ್ತು ಸ್ವಭಾವದ ಹೆಸರನ್ನು ಹೇಳುತ್ತದೆ. ಇಂಥ ಪದಗಳನ್ನು **ನಾಮಪದಗಳೆಂದು** ಕರೆಯುತ್ತಾರೆ. 'ನಾಮ' ಎಂದರೆ ಹೆಸರು. ಹೆಸರನ್ನು ಹೇಳುವ ಪದಗಳೆಲ್ಲ ನಾಮಪದಗಳು.

ಹೋದಳು, ಹೊರಡುತ್ತದೆ, ಬಿದ್ದಿತು ಮೊದಲಾದ ಪದಗಳು ಕೆಲಸವನ್ನು ತಿಳಿಸುತ್ತವೆ. ಇವಕ್ಕೆ **ಕ್ರಿಯಾಪದಗಳೆಂದು** ಹೆಸರು. 'ಕ್ರಿಯೆ' ಎಂದರೆ ಕೆಲಸ, ಕೆಲಸವನ್ನು ಹೇಳುವ ಪದಗಳು ಕ್ರಿಯಾಪದಗಳು.

೨. ಈಗ 'ಮನೆಗೆ' ಎಂಬ ಪದವನ್ನು ನೋಡಿ. ಇದರಲ್ಲಿ ಸೇರಿರುವ '-ಗೆ' ಎಂಬ ಪ್ರತ್ಯಯವನ್ನು ತೆಗೆದು ಹಾಕಿದರೆ ಉಳಿಯುವುದು 'ಮನೆ' ಎಂಬ ಪ್ರಕೃತಿ. ನಾಮಪದದ ಮೂಲದಲ್ಲಿರುವ ಪ್ರಕೃತಿಯನ್ನು **ನಾಮಪ್ರಕೃತಿ** ಎಂದು ಕರೆಯುತ್ತಾರೆ.

ಮೇಲಿನ ಉದಾಹರಣೆಗಳಲ್ಲಿ ಸೀತೆ, ಮನೆ, ರೈಲು, ಘಂಟೆ, ಹಾಲು, ಬಣ್ಣ; ಬಿಳುಪು, ಮಗು, ಚಿತ್ರಪಟ—ಇವೆಲ್ಲ ನಾಮಪ್ರಕೃತಿಗಳು.

೩. ಹೋದಳು, ಹೊರಡುತ್ತದೆ, ಬಿದ್ದಿತು, ಕೆಡವಿದನು ಎಂಬ ಕ್ರಿಯಾಪದಗಳಲ್ಲಿರುವ ಪ್ರತ್ಯಯಗಳನ್ನು ತೆಗೆದುಹಾಕಿದರೆ ಉಳಿಯುವುವು ಹೋಗು, ಹೊರಡು; ಬೀಳು, ಕೆಡವು, ಎಂಬುವು. ಇವನ್ನು ಕ್ರಿಯಾಪ್ರಕೃತಿ ಎನ್ನಬಹುದು; ಆದರೆ ಇವಕ್ಕೆ **ಧಾತು** ಎಂಬ ಹೆಸರೇ ಪ್ರಸಿದ್ಧವಾಗಿದೆ.

೪. ನಾಮಪ್ರಕೃತಿಗಳಿಗೂ ಧಾತುಗಳಿಗೂ ಬೇರೆ ಬೇರೆ ಪ್ರತ್ಯಯಗಳನ್ನು ಹತ್ತಿಸಿ ಬೇರೆ ಬೇರೆ ಪದಗಳನ್ನು ಕಲ್ಪಿಸಬಹುದು.

ಉದಾಹರಣೆ__ಮನೆ, ಮನೆಯನ್ನು, ಮನೆಗಳನ್ನು ಮನೆಗಳಲ್ಲಿ; ಹೊರಡು, ಹೊರಡುತ್ತಾನೆ, ಹೊರಡುವರು, ಹೊರಡಲಿ, ಇತ್ಯಾದಿ. ಈ ಬಗೆಯ ರೂಪಗಳನ್ನು ನಾವು ಹಿಂದಿನ ಅಧ್ಯಾಯದಲ್ಲಿ ನೋಡಿದ್ದೇವೆ.

೫. ಈಗ "ಅಯ್ಯೋ," "ಧೊಪ್ಪನೆ" ಎಂಬ ಪದಗಳನ್ನು ನೋಡಿ.

ಅಯ್ಯೋ, ಮಗು ಬಿದ್ದಿತು!
ಅಯ್ಯೋ, ಅವನಿಗೆ ಕೇಡಾಯಿತೆ;
ಕೂಲಿಯವನು 'ಅಯ್ಯೋ' ಎಂದು ಕೂಗಿಕೊಂಡನು.
ಅವನು ಚಿತ್ರಪಟವನ್ನು ಧೊಪ್ಪನೆ ಕೆಡವಿದನು.
ಕಲ್ಲು ಭಾವಿಯೊಳಕ್ಕೆ ಧೊಪ್ಪನೆ ಬಿದ್ದಿತು.
ಅಗೋ, ತೆಂಗಿನಕಾಯಿಗಳನ್ನು ಕೋತಿ ಧೊಪ್ಪನೆ ಉದುರಿಸುವ ಸದ್ದು ಕೇಳಿಸಿತೆ?

ಅಯ್ಯೋ, ಧೊಪ್ಪನೆ ಎಂಬುವು ಮೇಲೆ ಬೇರೆ ಬೇರೆ ವಾಕ್ಯಗಳಲ್ಲಿ ಬಂದಿದ್ದರೂ ಒಂದೇ ರೂಪದಲ್ಲಿ ನಿಂತಿವೆ. ಅವುಗಳನ್ನು ಅರ್ಥಾನುಸಾರವಾಗಿ ವಾಕ್ಯದ ಬೇರೆ ಪದಗಳೊಡನೆ ಹೊಂದಿಸುವುದಕ್ಕಾಗಿ ಯಾವ ಪ್ರತ್ಯಯವೂ ಹತ್ತಿಲ್ಲ. ಹೀಗೆ ವ್ಯತ್ಯಾಸ ಹೊಂದದೇ ಒಂದೇ ರೂಪದಲ್ಲಿ ನಿಲ್ಲುವ ಪದಗಳಿಗೆ ಅವ್ಯಯಗಳೆಂದು ಹೆಸರು. ಅವ್ಯಯ ಎಂದರೆ ವ್ಯತ್ಯಾಸ ಹೊಂದದಿರುವುದು. ಎಂದು ಅರ್ಥ.

೬. ಹೀಗೆ ಭಾಷೆಯಲ್ಲಿರುವ ಮಾತುಗಳನ್ನು ನಾಮಪ್ರಕೃತಿ, ಧಾತು, ಅವ್ಯಯ ಎಂದು ಮೂರು ಗುಂಪುಗಳಾಗಿ ವಿಂಗಡಿಸಬಹುದು. ನಾಮಪ್ರಕೃತಿಗಳೂ ಧಾತುಗಳೂ ವಾಕ್ಯದಲ್ಲಿ ಬರುವಾಗ ಸಂದರ್ಭಕ್ಕೆ ತಕ್ಕಂತೆ ಬೇರೆ ಬೇರೆ ರೂಪಗಳನ್ನು ಹೊಂದುತ್ತವೆ. ಅವ್ಯಯಗಳು ಒಂದೇ ರೂಪದಲ್ಲಿರುತ್ತವೆ.

೭. ಪದಗಳು ಸೇರಿ ವಾಕ್ಯವಾಗುವುದಷ್ಟೆ. ವಾಕ್ಯದಲ್ಲಿ ಬೇರೆ ಬೇರೆ ಪದಗಳು ಯಾವಯಾವ ಕೆಲಸವನ್ನು ಮಾಡುತ್ತವೆ, ಅವುಗಳಲ್ಲಿ ಒಂದಕ್ಕೊಂದಕ್ಕೆ ಸಂಬಂಧವೇನು ಎಂಬುದನ್ನು ತಿಳಿಸುವುದಕ್ಕಾಗಿ ವಾಕ್ಯದಲ್ಲಿರುವ ಪದಗಳನ್ನು ಬೇರೊಂದು ರೀತಿಯಿಂದ ವಿಂಗಡಿಸುತ್ತಾರೆ. ಈ ಕೆಳಗಿನ ವಾಕ್ಯಗಳನ್ನು ನೋಡಿ:

ಸೀತೆ ಬಿದ್ದಳು. ಕರು ನೆಗೆಯಿತು.

'ಸೀತೆ ಬಿದ್ದಳು' ಎಂಬ ವಾಕ್ಯದಲ್ಲಿ ಎರಡು ಪದಗಳಿವೆ. ಯಾರ ವಿಷಯವನ್ನು ಹೇಳಲು ಹೊರಟ್ಟಿದ್ದೇವೋ ಅವಳನ್ನು 'ಸೀತೆ' ಎಂಬ ಪದವು ತಿಳಿಸುತ್ತದೆ. ಸೀತೆ ಏನು ಮಾಡಿದಳು ಎಂಬುದನ್ನು 'ಬಿದ್ದಳು' ಎಂಬ ಪದವು ತಿಳಿಸುತ್ತದೆ. 'ಕರು ನೆಗೆಯಿತು' ಎಂಬ ವಾಕ್ಯದಲ್ಲೂ ಹೀಗೆಯೇ-

೮. 'ಬಿದ್ದಳು' 'ನೆಗೆಯಿತು' ಎಂಬ ಪದಗಳು ಕೆಲಸವನ್ನು ಹೇಳುವುದರಿಂದ ಇವಕ್ಕೆ **ಕ್ರಿಯಾಪದವೆಂಬ** ಹೆಸರು ಉಂಟೆಂದು ನಾವು ಆಗಲೇ ಓದಿದ್ದೇವೆ. ಕ್ರಿಯಾಪದವು ಹೇಳುವ ಕೆಲಸವನ್ನು ಯಾರು ಮಾಡಿದರು ಅಥವಾ ಯಾವುದು ಮಾಡಿತು ಎಂಬುದನ್ನು ತಿಳಿಸುವ ಪದಕ್ಕೆ **ಕರ್ತೃಪದ** ಎಂದು ಹೆಸರು. ಕರ್ತೃ ಎಂದರೆ ಕೆಲಸಮಾಡತಕ್ಕ ಮನುಷ್ಯ ಅಥವಾ ವಸ್ತು. ಯಾವಳು ಬಿದ್ದಳು ?—ಸೀತೆ; ಯಾವುದು ನೆಗೆಯಿತು ?—ಕರು. ಮೇಲಿನ ವಾಕ್ಯಗಳಲ್ಲಿ ಸೀತೆ, ಕರು ಎಂಬುವು ಕರ್ತೃಪದಗಳು.

೯. ಈಗ, 'ಭೀಮನು ಜರಾಸಂಧನನ್ನು ಕೊಂದನು', 'ಬೆಕ್ಕು ಹಾಲನ್ನು ಕುಡಿಯಿತು' ಎಂಬ ವಾಕ್ಯಗಳನ್ನು ನೋಡಿ. ಇಲ್ಲಿ 'ಭೀಮನು', 'ಬೆಕ್ಕು'—ಕರ್ತೃಪದಗಳು ; 'ಕೊಂಡನು', 'ಕುಡಿಯಿತು'—ಕ್ರಿಯಾಪದಗಳು. 'ಭೀಮನು ಕೊಂದನು', 'ಬೆಕ್ಕು ಕುಡಿಯಿತು' ಎಂದು ಇಷ್ಟೇ ಹೇಳಿದ್ದರೆ ವಾಕ್ಯಗಳ ಅರ್ಥವು ಪೂರ್ಣವಾಗುತ್ತಿರಲಿಲ್ಲ ; ಯಾರನ್ನು ಕೊಂದನು ; ಏನನ್ನು ಕುಡಿಯಿತು ! ಎಂಬ ಪ್ರಶ್ನೆಗಳು ಹುಟ್ಟುತ್ತಿದ್ದುವು. 'ಜರಾಸಂಧನನ್ನು', 'ಹಾಲನ್ನು' ಎಂಬ ಪದಗಳನ್ನು ಸೇರಿಸಿ ಹೇಳಿದರೆ ವಾಕ್ಯದ ಅರ್ಥವು ಪೂರ್ಣವಾಗುತ್ತದೆ. ಈ ಪದಗಳಿಗೆ **ಕರ್ಮಪದ**ಗಳೆಂದು ಹೆಸರು. ಕ್ರಿಯಾಪದವು ಹೇಳುವ ಕೆಲಸಕ್ಕೆ ಯಾವುದು ವಿಷಯವೋ ಅದನ್ನು ಕರ್ಮಪದವು ತಿಳಿಸುತ್ತದೆ.

೧೦. ಎಳೆಯ ಕರು ಥಟ್ಟನೆ ನೆಗೆಯಿತು ;
ಬಲಶಾಲಿಯಾದಭೀಮನು ಜರಾಸಂಧನನ್ನು ಕೊಂದನು.
ಬೆಕ್ಕು ಒಲೆಯಮೇಲಿದ್ದ ಹಾಲನ್ನು ಒಂದು ತೊಟ್ಟೂ ಉಳಿಯದಂತೆ ಕುಡಿಯಿತು.

ಮೇಲಿನ ವಾಕ್ಯಗಳಲ್ಲಿ ದೊಡ್ಡ ಅಕ್ಷರದಲ್ಲಿ ಅಚ್ಚಾಗಿರತಕ್ಕ ಪದಗಳು ಸೇರಿರುವುದರಿಂದ ಆಗಿರುವ ಉಪಯೋಗವನ್ನು ನೋಡಿ. ಸುಮ್ಮನೆ 'ಕರು' ಎನ್ನುವುದಕ್ಕಿಂತಲು 'ಎಳೆಯ ಕರು' ಎಂದರೆ ಕರುವಿನ ವಿಷಯ ಇನ್ನೂ ನಿರುಕಾಗಿ ತಿಳಿಯುತ್ತದೆ ; ಇಲ್ಲಿ 'ಎಳೆಯ' ಎಂಬುದು ಕರುವಿನ ಗುಣವಿಶೇಷವನ್ನು ತೋರಿಸುತ್ತದೆ. 'ಥಟ್ಟನೆ ನೆಗೆಯಿತು' ಎಂಬ ಕಡೆ, ನೆಗೆಯುವ ಕ್ರಿಯೆ ಹೇಗೆ ನಡೆಯಿತೆಂಬ ವಿಶೇಷಾಂಶವು 'ಥಟ್ಟನೆ' ಎಂಬುದರಿಂದ ಗೊತ್ತಾಗುತ್ತದೆ. ಇದರಂತೆಯೇ, 'ಬಲಶಾಲಿಯಾದ' 'ಒಲೆಯ ಮೇಲಿದ್ದ' ಎಂಬ ಪದ ಮುಚ್ಚಯಗಳು 'ಭೀಮನು,' 'ಹಾಲನ್ನು' ಎಂಬ ನಾಮಪದಗಳ ವಿಶೇಷಾಂಶವನ್ನೂ, 'ಒಂದು ತೊಟ್ಟೂ ಉಳಿಯದಂತೆ' ಎಂಬ ಪದಸಮುಚ್ಚಯವು 'ಕುಡಿಯಿತು' ಎಂಬ ಕ್ರಿಯೆಯ ವಿಶೇಷ ರೀತಿಯನ್ನೂ ತಿಳಿಸುತ್ತವೆ.

೧೧. ಹೀಗೆ ಯಾವುದಾದರೂ ಒಂದರ ಗುಣ, ರೀತಿ ಮೊದಲಾದ ವಿಶೇಷವನ್ನು ತಿಳಿಸುವ ಪದಕ್ಕೆ (ಅಥವಾ ಪದಗಳ ಗುಂಪಿಗೆ) **ವಿಶೇಷಣ**ವೆಂದೂ, ಯಾವುದರ ವಿಶೇಷಾಂಶವು ಹೀಗೆ ತಿಳಿಯುವುದೋ ಅದಕ್ಕೆ **ವಿಶೇಷ್ಯ**ವೆಂದೂ ಹೆಸರು.

೧೨. ಮೇಲೆ ಬಂದಿರುವ ವಾಕ್ಯಗಳಲ್ಲಿ,

| ವಿಶೇಷಣ | ವಿಶೇಷ್ಯ |
|---|---|
| ಎಳೆಯ | ಕರು |
| ಥಟ್ಟನೆ | ನೆಗೆಯಿತು |
| ಬಲಶಾಲಿಯಾದ | ಭೀಮನು |
| ಒಲೆಯ ಮೇಲಿದ್ದ | ಹಾಲನ್ನು |
| ಒಂದು ತೊಟ್ಟೂ ಉಳಿಯದಂತೆ | ಕುಡಿಯಿತು |

ಈ ವಿಶೇಷ್ಯಗಳಲ್ಲಿ ಕರು, ಭೀಮನು, ಹಾಲನ್ನು ಎಂಬುವು ನಾಮಪದಗಳು ; ಇವುಗಳ ವಿಶೇಷಣಗಳಿಗೆ **ನಾಮವಿಶೇಷಣ**ಗಳೆಂದು ಹೆಸರು. ನೆಗೆಯಿತು, ಕುಡಿಯಿತು ಎಂಬುವು ಕ್ರಿಯಾಪದಗಳು ; ಇವುಗಳ ವಿಶೇಷಣಗಳಿಗೆ **ಕ್ರಿಯಾ ವಿಶೇಷಣ**ಗಳೆಂದು ಹೆಸರು.

---

## ನಾಲ್ಕನೆಯ ಅಧ್ಯಾಯ

### ವರ್ಣಮಾಲೆ

೧. ನಮಗೆಲ್ಲ ಬಳಕೆಯಾಗಿರುವ 'ಪಾಠಶಾಲೆ' ಎಂಬ ಪದವನ್ನು ನೋಡೋಣ. ಇದರಲ್ಲಿ ಸೇರಿರುವ ವರ್ಣಗಳನ್ನು ಬಿಡಿಸಿ, ಒಂದೊಂದಾಗಿ ಉಚ್ಚರಿಸಿದರೆ, ಪ್-ಆ-ಠ್-ಅ-ಶ್-ಆ-ಲ್-ಎ ಎಂದು ಎಂಟು ವರ್ಣಗಳು ಹೊರಡುತ್ತವೆ. ಹೀಗೆಯೇ, ಉಪಾಧ್ಯಾಯ=ಉ-ಪ್-ಆ-ಧ್-ಯ್-ಆ-ಯ್-ಅ; ಪುಸ್ತಕ=ಪ್-ಉ-ಸ್-ತ್-ಅ-ಕ್-ಅ: ಮೇಜು-ಮ್-ಏ-ಜ್-ಉ. ಪಾಠಶಾಲೆ, ಉಪಾಧ್ಯಾಯ, ಪುಸ್ತಕ, ಮೇಜು ಎಂಬಿವು ಬೇರೆ ಬೇರೆ ಅರ್ಥವುಳ್ಳ ಬೇರೆ ಬೇರೆ ಪದಗಳು. ಆದರೆ ಅವುಗಳಲ್ಲಿ ಅ, ಆ, ಉ, ಎ, ಪ್, ಯ್ ಮೊದಲಾದ ವರ್ಣಗಳು ಮತ್ತೆ ಮತ್ತೆ ಬಂದು ಸೇರಿವೆ. ಭಾಷೆಯಲ್ಲಿರುವ ಪದಗಳು ಹಲವು; ವರ್ಣಗಳು ಕೇವು ಈ ವರ್ಣಗಳನ್ನು ಬೇರೆ ಬೇರೆ ರೀತಿಯಲ್ಲಿ ಜೋಡಿಸಿ ಬೇರೆ ಬೇರೆ ಪದಗಳನ್ನು ಕಟ್ಟುತ್ತೇವೆ. ಕನ್ನಡದಲ್ಲಿ ಇಂಥ ವರ್ಣಗಳು ಒಟ್ಟು ಐವತ್ತು ಇವೆ. ಅವು ಯಾವುವೆಂಬುದನ್ನು ಮುಂದೆ ತಿಳಿಸಲಾಗುತ್ತದೆ.

೨. 'ಪಾಠಶಾಲೆ' ಎಂಬುದರಲ್ಲಿರುವ ವರ್ಣಗಳನ್ನು ಮತ್ತೆ ನೋಡೋಣ: ಪ್-ಆ-ಠ್-ಅ-ಶ್-ಆ-ಲ್-ಎ. ಇವುಗಳಲ್ಲಿ ಆ, ಅ, ಎ ಎಂಬುವನ್ನು ಬಿಡಿಯಾಗಿ ಉಚ್ಚರಿಸಬಹುದು. ಹೀಗೆ ಬಿಡಿಯಾಗಿ ಉಚ್ಚರಿಸಲು ಆಗುವ ವರ್ಣಕ್ಕೆ **ಸ್ವರ** ಎಂದು ಹೆಸರು. ಮೇಲೆ ವಿಂಗಡಿಸಿ ಕೊಟ್ಟಿರತಕ್ಕ ಪದಗಳಲ್ಲಿ ಬಂದಿರುವ ಉ, ಏ, ಎಂಬುವು ಸ್ವರಗಳು.

೩. ಪ್, ಠ್, ಶ್, ಲ್ ಎಂಬ ವರ್ಣಗಳನ್ನು ಸ್ವರಗಳಂತೆ ಬಿಡಿಯಾಗಿ ಉಚ್ಚರಿಸುವುದು ಕಷ್ಟ; ಅವನ್ನು ಸುಲಭವಾಗಿ ಉಚ್ಚರಿಸುವುದಕ್ಕೆ ಪ್+ಅ' ಅಥವಾ 'ಅ+ಪ್' ಎಂಬಂತೆ ಮುಂದಕ್ಕೋ ಹಿಂದಕ್ಕೋ ಒಂದು ಸ್ವರವನ್ನು ಸೇರಿಸಿಕೊಳ್ಳಲೇಬೇಕು. ಹೀಗೆ, ಸ್ವರದ ಸಹಾಯವಿಲ್ಲದೆ ಉಚ್ಚರಿಸಲಾಗದ ವರ್ಣಕ್ಕೆ ವ್ಯಂಜನ ಎಂದು ಹೆಸರು. ಧ್, ಯ್, ಸ್, ತ್, ಕ್, ಮ್, ಜ್ ಮೊದಲಾದುವೆಲ್ಲ ವ್ಯಂಜನಗಳ.

೪. ಒಂದು ವರ್ಣದ ಹೆಸರನ್ನು ಹೇಳುವಾಗ 'ಕಾರ' ಎಂಬುದನ್ನು ಅದರ ಮುಂದೆ ಸೇರಿಸುವುದು ಪದ್ಧತಿ. ಉದಾಹರಣೆಗೆ, ಅಕಾರ=ಅ. ಆಕಾರ=ಆ, ಎಕಾರ=ಎ, ಏಕಾರ=ಏ, ಇತ್ಯಾದಿ.

೫. ವ್ಯಂಜನವನ್ನು ಬಿಡಿಯಾಗಿ ಉಚ್ಚರಿಸುವುದು. ಕಷ್ಟವಷ್ಟೆ. ಅದರ ಹೆಸರನ್ನು ಹೇಳುವಾಗ ಮೊದಲು 'ಅ' ಎಂಬ ಸ್ವರವನ್ನು ಅದಕ್ಕೆ ಕೂಡಿಸಿ ಬಳಿಕ 'ಕಾರ' ಎಂಬುದನ್ನು ಸೇರಿಸುತ್ತಾರೆ. ಉದಾ.—ಪಕಾರ=ಪ್, ಠಕಾರ=ಠ್, ಇತ್ಯಾದಿ.

೬. ಹಂಸ, ದುಃಖ ಎಂಬ ಎರಡು ಪದಗಳನ್ನು ಈಗ ಬಿಡಿಸಿ ನೋಡಿ. ಹಂಸ=ಹ್-ಅ-ಂ-ಸ್-ಅ, ದುಃಖ=ದ್-ಉ-ಃ=ಖ್-ಅ, ಮೊದಲನೆಯದರಲ್ಲಿ ಅಕಾರಕ್ಕೂ ಸಕಾರಕ್ಕೂ ನಡುವೆ ಇರುವ ವರ್ಣಕ್ಕೆ (ಂ) 'ಅನುಸ್ವಾರ' ಎಂದೂ, ಎರಡನೆಯದರಲ್ಲಿ ಉಕಾರಕ್ಕೂ ಖಕಾರಕ್ಕೂ ನಡುವೆ ಇರುವ ವರ್ಣಕ್ಕೆ (ಃ) 'ವಿಸರ್ಗ' ಎಂದೂ ಹೆಸರು. ಸ್ವರದ ಸಹಾಯವಿಲ್ಲದೆ ಇವೆರಡು ವರ್ಣಗಳನ್ನೂ ಉಚ್ಚರಿಸಲು ಸಾಧ್ಯವಿಲ್ಲ; ಅದ ಕಾರಣ ಇವೂ ವ್ಯಂಜನಗಳೇ.

೭. ಸ್ವರಗಳನ್ನೂ ಅನುಸ್ವಾರ ವಿಸರ್ಗಗಳನ್ನೂ ವ್ಯಂಜನಗಳನ್ನೂ ಒಂದು ಕ್ರಮದಲ್ಲಿ ಜೋಡಿಸಿಕೊಡುವ ಪದ್ಧತಿ ಹಿಂದಿನಿಂದ ಬಂದಿದೆ. ಈ ಜೋಡಣೆಗೆ ಕನ್ನಡ ವರ್ಣಮಾಲೆ ಎಂದು ಹೆಸರು. ಅದು ಕೆಳಗೆ ಕೊಟ್ಟಿರುವಂತೆ ಇದೆ :

(ಸ್ವರಗಳು—೧೪)

ಅ ಆ ಇ ಈ ಉ ಊ ಋ ೠ ಎ ಏ ಐ ಒ ಓ ಔ

| (ಅನುಸ್ವಾರ) | (ವಿಸರ್ಗ) |
|---|---|
| (ಅ)ಂ | (ಅ)ಃ |

(ವ್ಯಂಜನಗಳು—೩೪)

| | | | | |
|---|---|---|---|---|
| ಕ್ | ಖ್ | ಗ್ | ಘ್ | ಙ್ |
| ಚ್ | ಛ್ | ಜ್ | ಝ್ | ಞ್ |
| ಟ್ | ಠ್ | ಡ್ | ಢ್ | ಣ್ |
| ತ್ | ಥ್ | ದ್ | ಧ್ | ನ್ |
| ಪ್ | ಫ್ | ಬ್ | ಭ್ | ಮ್ |

ಯ್ ರ್ ಲ್ ವ್ ಶ್ ಸ್ ಹ್ ಳ್

೮. ಇವುಗಳಲ್ಲಿ ಸ್ವರಗಳನ್ನು ಮೊದಲು ತೆಗೆದುಕೊಳ್ಳೋಣ. ಅಳು, ಆಳು—ಈ ಎರಡು ಶಬ್ದಗಳನ್ನು ಉಚ್ಚರಿಸಿ ನೋಡಿ. ಮೊದಲನೆಯದಲ್ಲಿರುವ ಅಕಾರವನ್ನು ಉಚ್ಚರಿಸುವುದಕ್ಕೆ ಕಡಮೆ ಕಾಲವೂ ಎರಡನೆಯದರಲ್ಲಿರುವ ಆಕಾರವನ್ನು ಉಚ್ಚರಿಸುವುದಕ್ಕೆ ಹೆಚ್ಚು ಕಾಲವೂ ಬೇಕಾಗುತ್ತವೆ. ಇ–ಈ–ಉ–ಊ–ಋ–ೠ–ಎ–ಏ–ಒ–ಓ ಎಂಬುವುಗಳಲ್ಲೂ ಹೀಗೆಯೇ. ಈ ರೀತಿಯಾಗಿ ಉಚ್ಚಾರಣೆಗೆ ಕಡಮೆ ಕಾಲ ಬೇಕಾಗುವ ಅ, ಇ, ಉ, ಋ, ಎ, ಒ, ಎಂಬುವಕ್ಕೆ ಹ್ರಸ್ವಸ್ವರಗಳೆಂದೂ, ಉಚ್ಚಾರಣೆಗೆ ಹೆಚ್ಚು ಕಾಲ ಬೇಕಾಗುವ ಆ, ಈ, ಊ, ೠ, ಏ, ಓ ಎಂಬುವಕ್ಕೆ ದೀರ್ಘಸ್ವರಗಳೆಂದೂ ಹೆಸರು. ಹ್ರಸ್ವ ಎಂದರೆ ಮೊಟಕಾದದ್ದು; ದೀರ್ಘ ಎಂದರೆ ಉದ್ದವಾದದ್ದು.

೯. ಇನ್ನು ಐ, ಔ ಎಂಬ ಸ್ವರಗಳು ಉಳಿದುವು. ಇವುಗಳನ್ನು ಎಳೆದು ಉಚ್ಚರಿಸಬೇಕಾಗುವುದರಿಂದ ಇವೂ ದೀರ್ಘಸ್ವರಗಳೇ. ಐರಾವತ

ಐದು; ಔದಾರ್ಯ, ಔಷಧಿ ಎಂಬ ಶಬ್ದಗಳನ್ನು ಉಚ್ಚರಿಸಿ ನೋಡಿ. ಆದರೆ, ಏಕಾರಕ್ಕೆ ಸಮನಾಗಿ ಎಕಾರವೂ, ಓಕಾರಕ್ಕೆ ಸಮನಾಗಿ ಒಕಾರವೂ ಇರುವಂತೆ, ಐಕಾರ ಔಕಾರಗಳಿಗೆ ಸಮನಾಗಿ ಹ್ರಸ್ವಸ್ವರಗಳು ಇಲ್ಲ.

೧೦. ಋ ೠ ಎಂಬ ಸ್ವರಗಳಲ್ಲಿ ೠ ಎಂಬುದು ಕನ್ನಡದಲ್ಲಿ ಬಳಕೆಯಲ್ಲಿಲ್ಲ. ಋ ಎಂಬ ಹ್ರಸ್ವಸ್ವರವು ಮಾತ್ರ ಕೆಲವು ಶಬ್ದಗಳಲ್ಲಿ ದೊರೆಯುತ್ತದೆ. ಉದಾ.—ಋಷಿ, ಋಣ, ಕೃಷ್ಣ, ಕೃಪೆ, ತೃಪ್ತಿ, ಪಿತೃ, ಕರ್ತೃ, ಭ್ರಾತೃ, ಇತ್ಯಾದಿ. ಈ ಶಬ್ದಗಳನ್ನು ರುಷಿ, ರುಣ, ಕ್ರುಷ್ಣ, ಕ್ರಿಷ್ಣ, ಕ್ರುಪೆ, ಪಿತ್ರು—ಈ ರೀತಿಯಾಗಿ ತಪ್ಪಾಗಿ ಬರೆಯಬಾರದು.

೧೧. ವ್ಯಂಜನಗಳಲ್ಲಿ ಕಕಾರದಿಂದ ಮಕಾರದವರೆಗೆ ಇರುವ ಇಪ್ಪತ್ತೈದನ್ನು ನೋಡಿ. ಇವುಗಳನ್ನು ಐದೈದಕ್ಕೆ ಒಂದೊಂದು ವರ್ಗದಂತೆ* ಐದು ವರ್ಗಗಳಾಗಿ ವಿಂಗಡಿಸಿ ಕೊಟ್ಟಿದೆ. ಈ ವರ್ಗಗಳಿಗೆ ಕ್ರಮವಾಗಿ ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗ ಎಂದು ಆಯಾ ವರ್ಗದ ಮೊದಲನೆಯ ವ್ಯಂಜನದ ಹೆಸರನ್ನು ಇಟ್ಟಿದ್ದಾರೆ. ಹೀಗೆ ವರ್ಗಗಳಿಗೆ ಸೇರುವುದರಿಂದ ಈ ೨೫ ವ್ಯಂಜನಗಳಿಗೂ **ವರ್ಗೀಯ ವ್ಯಂಜನ**ಗಳೆಂದು ಹೆಸರು.

೧೨. ಪಡೆ, ಫಲ ; ಬಲ, ಭಯ ; ಇಲ್ಲಿ ಬಂದಿರುವ ಪ್–ಫ್, ಬ್–ಭ್ ಎಂಬ ವ್ಯಂಜನಗಳನ್ನು ನೋಡಿ. ಪ್ ಎಂಬುದನ್ನು ಉಚ್ಚರಿಸುವುದಕ್ಕೆ ಕೊಂಚ ಉಸಿರು ಸಾಕು. ಫ್ ಎಂಬುದನ್ನು ಉಚ್ಚರಿಸುವುದಕ್ಕೆ ಹೆಚ್ಚು ಉಸಿರು ಬೇಕು. ಬ್–ಭ್ ಎಂಬ ವರ್ಣಗಳ ವಿಷಯವೂ ಹೀಗೆಯೇ. ಉಚ್ಚಾರಣೆಯಲ್ಲಿ ಕೊಂಚ ಉಸಿರು ಬೇಕಾಗುವ ಪಕಾರ ಬಕಾರಗಳಿಗೆ **ಅಲ್ಪಪ್ರಾಣ**ಗಳೆಂದೂ, ಹೆಚ್ಚು ಉಸಿರು ಬೇಕಾಗುವ ಫಕಾರ ಭಕಾರಗಳಿಗೆ **ಮಹಾಪ್ರಾಣ**ಗಳೆಂದೂ ಹೆಸರು. (‘ ಪ್ರಾಣ ’ ಎಂದರೆ ‘ ಉಸಿರು ’ ಎಂದು ಅರ್ಥ.)

೧೩. ಈಗ, ಮೊಸಳೆ ಎಂಬ ಶಬ್ದದಲ್ಲಿರುವ ಮಕಾರವನ್ನು ನೋಡಿ. ಇದನ್ನು ಉಚ್ಚರಿಸುವುದಕ್ಕೆ ಮೂಗಿನ ಸಹಾಯ ಬೇಕೇಬೇಕು. ನೆಗಡಿ ಹಿಡಿದು ಮೂಗು ಕಟ್ಟಿಕೊಂಡಾಗ ಈ ವರ್ಣವು ಸರಿಯಾಗಿ ಹೊರಡುವುದಿಲ್ಲ, ಹೀಗೆ ಮೂಗಿನ ಸಹಾಯದಿಂದ ಉಚ್ಚರಿಸಬೇಕಾದ ವರ್ಣಕ್ಕೆ **ಅನುನಾಸಿಕ** ಎಂದು—ಹೆಸರು. (‘ ನಾಸಿಕ ’ ಎಂದರೆ ‘ ಮೂಗು ’ ಎಂದು ಅರ್ಥ.)

೧೪. ಪವರ್ಗದ ವರ್ಣಗಳನ್ನು ಮಾತ್ರ ಮೇಲೆ ಉದಾಹರಣೆಗಾಗಿ ತೆಗೆದುಕೊಂಡೆವು. ಪ್ರತಿಯೊಂದು ವರ್ಗದಲ್ಲೂ ಎರಡು ಅಲ್ಪಪ್ರಾಣ

---

* ವರ್ಗ ಎಂದರೆ ಗುಂಪು.

ಗಳೂ ಎರಡು ಮಹಾಪ್ರಾಣಗಳೂ ಒಂದು ಅನುನಾಸಿಕವೂ ಇರುತ್ತವೆ. ಕೆಳಗಿನ ಪಟ್ಟಿಯಲ್ಲಿ ಅವನ್ನು ವಿಂಗಡಿಸಿ ಕೊಟ್ಟಿದೆ:

| | ಅಲ್ಪಪ್ರಾಣ. | | ಮಹಾಪ್ರಾಣ. | | ಅನುನಾಸಿಕ. |
|---|---|---|---|---|---|
| ಕವರ್ಗ: | ಕ್ | ಗ್ | ಖ್ | ಘ್ | ಙ್ |
| ಚವರ್ಗ: | ಚ್ | ಜ್ | ಛ್ | ಝ್ | ಞ್ |
| ಟವರ್ಗ: | ಟ್ | ಡ್ | ಠ್ | ಢ್ | ಣ್ |
| ತವರ್ಗ: | ತ್ | ದ್ | ಥ್ | ಧ್ | ನ್ |
| ಪವರ್ಗ: | ಪ್ | ಬ್ | ಫ್ | ಭ್ | ಮ್ |

೧೫. ನಾವು ಉಪಯೋಗಿಸುವ ಶಬ್ದಗಳಲ್ಲಿ ಅಲ್ಪಪ್ರಾಣ ಮಹಾ ಣಗಳು ಎಲ್ಲೆಲ್ಲಿ ಬರುತ್ತವೆಂಬುದನ್ನು ಗಮನವಿಟ್ಟು ತಿಳಿದುಕೊಳ್ಳಬೇಕು. ಉದಾಹರಣೆಗೆ—ಭೇದ, ಬೋಧಿಸು ಎಂಬುವು ಸರಿಯಾದ ರೂಪಗಳು. ಇವನ್ನು ಬೇಧ, ಭೋದಿಸು ಎಂಬಂತೆ ತಪ್ಪಾಗಿ ಬರೆಯಬಾರದು.

೧೬. ಯಕಾರದಿಂದ ಳಕಾರದವರೆಗೆ ಇರುವ ಒಂಬತ್ತು ವ್ಯಂಜನಗಳನ್ನು ವರ್ಗಗಳಾಗಿ ವಿಂಗಡಿಸುವುದಿಲ್ಲ. ಇವಕ್ಕೆ **ಅವರ್ಗೀಯ ವ್ಯಂಜನ**ಗಳೆಂದು ಹೆಸರು.

೧೭. ಇವುಗಳಲ್ಲಿ ಶಕಾರ ಷಕಾರ ಸಕಾರಗಳು ಎಲ್ಲೆಲ್ಲಿ ಬರುತ್ತವೆಂಬುದನ್ನು ಎಚ್ಚರಿಕೆಯಿಂದ ನೋಡಿಕೊಳ್ಳಬೇಕು. ಉದಾಹರಣೆಗೆ—ವಿಶೇಷ, ದೇಶ, ಆಸಕ್ತಿ ಮೊದಲಾದುವು ಸರಿಯಾದ ರೂಪಗಳು. ಇವನ್ನು ವಿಷೇಶ, ದೇಷ, ಆಶಕ್ತಿ ಎಂದು ಮಾಡಬಾರದು.

೧೮. ದುಃಖ, ಪುನಃ, ಅಂತಃಕರಣ ಮೊದಲಾದ ಕೆಲವು ಶಬ್ದಗಳಲ್ಲಿ ವಿಸರ್ಗವು ಬರುತ್ತದೆ. ಈ ಶಬ್ದಗಳನ್ನು ದುಖ್ಖ, ಪುನಹ—ಈ ರೀತಿಯಾಗಿ ಬರೆಯಬಾರದು.

೧೯. ಉ–**ದ್ಯೋ**–ಗ, **ಪ್ರ**–ಜೆ, ಲ–**ಕ್ಷ್ಮಿ**, ಮ–**ತ್ಸ್ಯ**; ಇಲ್ಲಿ ಇಲ್ಲಿರುವ ದಪ್ಪ ಅಕ್ಷರಗಳನ್ನು ನೋಡಿ. ದ್ಯೋ = ದ್+ಯ್+ಓ (ಎರಡು ವ್ಯಂಜನಗಳು+ಸ್ವರ), ಪ್ರ = ಪ್+ರ್+ಅ (ಎರಡು ವ್ಯಂಜನಗಳು+ಸ್ವರ), ಕ್ಷ್ಮಿ = ಕ್+ಷ್+ಮ್+ಇ (ಮೂರು ವ್ಯಂಜನಗಳು+ಸ್ವರ), ತ್ಸ್ಯ = ತ್+ಸ್+ಯ್+ಅ (ಮೂರು ವ್ಯಂಜನಗಳು+ಸ್ವರ). ಹೀಗೆ ಎರಡು ಅಥವಾ ಅದಕ್ಕಿಂತ ಹೆಚ್ಚಾದ ಸಂಖ್ಯೆಯ ವ್ಯಂಜನಗಳು ಒಟ್ಟಿಗೆ ಕೂಡಿಕೊಂಡಿದ್ದರೆ **ಸಂಯುಕ್ತಾಕ್ಷರ** ಅಥವಾ **ಒತ್ತಕ್ಷರ** ಎಂದು ಹೆಸರು.

ಶಕ್ತಿ, ಪುತ್ರ, ವಿಶ್ವಾಸ, ಸೂಕ್ಷ್ಮ—ಈ ಶಬ್ದಗಳಲ್ಲೆಲ್ಲಾ ಒಂದೊಂದು ಸಂಯುಕ್ತಾಕ್ಷರವುಂಟು. ಅದು ಯಾವುದು? ಅದು ಏಕೆ ಸಂಯುಕ್ತಾಕ್ಷರವಾಯಿತು?—ಎಂಬುದನ್ನು ಬಿಡಿಸಿ ನೋಡಿ.

## ಐದನೆಯ ಅಧ್ಯಾಯ

### ಸಂಧಿ

೧. ನಾವು ಮಾತನಾಡುವಾಗ ವಾಕ್ಯದಲ್ಲಿರುವ ಪ್ರತಿಯೊಂದು ಪದವನ್ನೂ ಬಿಡಿಸಿ ಬಿಡಿಸಿ ಹೇಳುವುದಿಲ್ಲ. ಆದಷ್ಟು ಮಟ್ಟಿಗೆ ಅವುಗಳನ್ನು ಕೂಡಿಸಿ ತಡವಾಗದಂತೆ ಉಚ್ಚರಿಸುತ್ತೇವೆ. ಹೀಗೆ ಮಾಡುವಾಗ ಒಂದು ಪದದ ಕೊನೆಯ ವರ್ಣವನ್ನು ಮುಂದಿನ ಪದದ ಮೊದಲ ವರ್ಣದೊಂದಿಗೆ ಸೇರಿಸಿ ಹೇಳಬೇಕಾಗುತ್ತದೆ. ಇದರಿಂದ ಕೆಲವು ಕಡೆಗಳಲ್ಲಿ ವ್ಯತ್ಯಾಸಗಳು ಉಂಟಾಗುತ್ತವೆ.

೨. 'ಪುಸ್ತಕವನ್ನು ಕೆಳಗಿಡು,' 'ಅದು ಕುದುರೆಯಲ್ಲ'—ಈ ಎರಡು ವಾಕ್ಯಗಳನ್ನು ನೋಡಿ. ಮೊದಲನೆಯದರಲ್ಲಿರುವ ಪದಗಳನ್ನು ಬಿಡಿಸಿದರೆ 'ಪುಸ್ತಕವನ್ನು' ಕೆಳಗೆ, 'ಇಡು' ಎಂದಾಗುತ್ತದೆ, ಪುಸ್ತಕವನ್ನು+ಕೆಳಗೆ ಎಂಬ ಪದಗಳನ್ನು ಕೂಡಿಸಿ ಹೇಳಿದಾಗ ಏನೂ ವ್ಯತ್ಯಾಸವಾಗಲಿಲ್ಲ. ಆದರೆ, ಕೆಳಗೆ+ಇಡು ಎಂಬ ಪದಗಳು ಸೇರಿದಾಗ 'ಕೆಳಗೆ' ಎಂಬುದರ ಕೊನೆಯ ಎಕಾರವು ಬಿಟ್ಟುಹೋಗಿ, ಕೆಳಗ್+ಇಡು=ಕೆಳಗಿಡು ಎಂದಾಯಿತು. ಹೀಗೆ ಉಚ್ಚಾರಣೆಯ ಕಾಲದಲ್ಲಿ ಒಂದು ವರ್ಣವೇ ಹೋಯಿತು. 'ಅದು ಕುದುರೆಯಲ್ಲ' ಎಂಬ ವಾಕ್ಯವನ್ನು ಬಿಡಿಸಿದರೆ— 'ಅದು, ಕುದುರೆ, ಅಲ್ಲ' ಎಂದು ಆಗುತ್ತದೆ. ಇಲ್ಲಿ ಕೂಡ ಮೊದಲಿನ ಎರಡು ಪದಗಳು ಸೇರುವಾಗ ಯಾವ ವ್ಯತ್ಯಾಸವೂ ಉಂಟಾಗಿಲ್ಲ. ಕುದುರೆ+ಅಲ್ಲ ಎಂಬಿವು ಸೇರುವಾಗ ಮಾತ್ರ 'ಕುದುರೆ' ಎಂಬುದರ ಕೊನೆಯ ಎಕಾರಕ್ಕೂ 'ಅಲ್ಲ' ಎಂಬುದರ ಮೊದಲಿನ ಅಕಾರಕ್ಕೂ ನಡುವೆ 'ಯ್' ಎಂಬ ಹೊಸ ವರ್ಣವು ಬಂದುಸೇರಿ, ಕುದುರೆ+ಯ್+ಅಲ್ಲ= ಕುದುರೆಯಲ್ಲ ಎಂದು ಉಚ್ಚಾರಣೆಯಾಗುತ್ತದೆ.

೩. ಹೀಗೆ, ಉಚ್ಚಾರಣೆಯಲ್ಲಿ ವರ್ಣಗಳು ನಡುವೆ ಕಾಲವಿಳಂಬವಿಲ್ಲದಂತೆ ಕೂಡುವುದಕ್ಕೆ **ಸಂಧಿ**ಯೆಂದೂ, ಸಂಧಿಯಾಗುವಾಗ ಮುಂಚೆ ಇದ್ದ ವರ್ಣವು ಬಿಟ್ಟು ಹೋಗುವುದು. ಹೊಸದೊಂದು ವರ್ಣವು ನಡುವೆ ಬರುವುದು ಈ ಮೊದಲಾದ ವ್ಯತ್ಯಾಸಗಳಿಗೆ **ಸಂಧಿಕಾರ್ಯ**ಗಳೆಂದೂ ಹೆಸರು.

೪. ಒಂದು ಪದಕ್ಕೆ ಮತ್ತೊಂದು ಪದವು ಸೇರುವಾಗ ಮಾತ್ರವೇ ಸಂಧಿಕಾರ್ಯವು ನಡೆಯುವುದಿಲ್ಲ. ಪ್ರಕೃತಿಗೆ ಪ್ರತ್ಯಯವು ಸೇರುವಾಗಲೂ ಅದು ನಡೆಯುತ್ತದೆ. ಕೆಳಗಿನ ಉದಾಹರಣೆಗಳನ್ನು ನೋಡಿ:

| ಪ್ರಕೃತಿ | | ಪ್ರತ್ಯಯ | | |
|---|---|---|---|---|
| ಗಾಣ | + | ಇಗ | = | ಗಾಣಿಗ |
| ಆಡು | + | ಇಸು | = | ಆಡಿಸು |

(ಇವೆರಡು ಕಡೆಗಳಲ್ಲೂ ಪ್ರಕೃತಿಯ ಕೊನೆಯ ಸ್ವರ ಬಿಟ್ಟುಹೋಗಿದೆ.)

ಮನೆ + ಇಂದ = ಮನೆಯಿಂದ
ಹಸು + ಇನ = ಹಸುವಿನ

(ಇವೆರಡು ಕಡೆಗಳಲ್ಲಿ ಪ್ರಕೃತಿಗೂ ಪ್ರತ್ಯಯಕ್ಕೂ ನಡುವೆ ಕ್ರಮವಾಗಿ ಯಕಾರ ವಕಾರಗಳು ಹೊಸದಾಗಿ ಸೇರಿವೆ.)

೫. ಮೇಲೆನೋಡಿದಂತೆ ವಾಕ್ಯದ ಪದಗಳನ್ನೂ ಪ್ರಕೃತಿ ಪ್ರತ್ಯಯಗಳನ್ನೂ ನಾವು ಕೂಡಿಸಿಯೇ ಉಚ್ಚರಿಸಿದರೂ, ಸಂಧಿಕಾರ್ಯಗಳು ನಡೆಯುವುದು; ಕೆಲವೆಡೆಗಳಲ್ಲಿ ಮಾತ್ರ, ಇವು ಯಾವುವು, ಎಲ್ಲಿ ನಡೆಯುತ್ತವೆ ಎಂಬುದನ್ನು ನೋಡೋಣ.

## ಲೋಪ ಸಂಧಿ

೬. ಸ್ವರದ ಮುಂದೆ ಸ್ವರವು ಬಂದರೆ ಸಾಮಾನ್ಯವಾಗಿ ಹಿಂದಿನ ಸ್ವರವು ಬಿಟ್ಟುಹೋಗುತ್ತದೆ. ಹೀಗೆ ವರ್ಣವು ಬಿಟ್ಟುಹೋಗುವುದಕ್ಕೆ **ಲೋಪವೆಂದೂ**, ಈ ಸಂಧಿಗೆ ಲೋಪ ಸಂಧಿಯೆಂದೂ ಹೆಸರು.

ಉದಾಹರಣೆ.

ಪ್ರಕೃತಿ ಪ್ರತ್ಯಯಗಳು ಸೇರುವುದಕ್ಕೆ—

ಊರನ್ನು ಬಿಟ್ಟು ಕಾಡಿಗೆ ಹೋದರೂ ಅವನಿಗೆ ಮನೆಯ ಹಂಬಲು ತಪ್ಪಲಿಲ್ಲ. (ಊರು+ಅನ್ನು, ಕಾಡು+ಇಗೆ)
ನಾಳೆ ಬರುವುದು ಈ ದಿನವೇ ಬರಲಿ. (ಬರು+ಅಲಿ)
ಇದರ ಹೊದಿಕೆ ಎಲ್ಲಿ ಹೋಯಿತು? (ಹೊದೆ+ಇಕೆ)

ಪದಕ್ಕೆ ಪದ ಸೇರುವುದಕ್ಕೆ—

ಹಣದಾಸೆಗೆ ಅವನು ಸೋಲಲಿಲ್ಲ. (ಹಣದ+ಆಸೆಗೆ)
ನಿನಗಲ್ಲದೆ ಬೇರೊಬ್ಬನಿಗೆ ಈ ಕೆಲಸ ಸಾಧ್ಯವಾಗುವುದಿಲ್ಲ. (ನಿನಗೆ+ಅಲ್ಲದೆ, ಬೇರೆ+ಒಬ್ಬನಿಗೆ)
ನಾವೆಲ್ಲರೂ ನಿಮ್ಮ ಶಿಷ್ಯರು (ನಾವು+ಎಲ್ಲರೂ)

೭. ಆದರೆ, ಮಾತು+ಇಲ್ಲ, ಮನೆ+ಇಲ್ಲ ಎಂಬ ಪದಗಳನ್ನು ಕೂಡಿಸಿ. ಮೊದಲನೆಯದರಲ್ಲಿ ಲೋಪಸಂಧಿಯಾಗಿ 'ಮಾತಿಲ್ಲ' ಎಂದು ಆಗುತ್ತದೆ. ಎರಡನೆಯದರಲ್ಲೂ ಲೋಪಸಂಧಿಯನ್ನು ಮಾಡಿ 'ಮನಿಲ್ಲ' ಎಂದು ಉಚ್ಚರಿಸಿದರೆ 'ಮನೆ' ಎಂಬುದರ ಗುರುತು ಸಿಕ್ಕದಂತಾಗಿ ಹೇಳಬೇಕೆಂದಿರುವ ಅರ್ಥವೇ ಗೊತ್ತಾಗುವುದಿಲ್ಲ. ಕುರಿ+ಇದು=ಕುರಿದು, ಗುರು+ಒಬ್ಬನು=ಗುರೊಬ್ಬನು ಎಂದು ಸಂಧಿ ಮಾಡಿದರೂ ಇದೇ ಕಷ್ಟ ಬರುತ್ತದೆ.

ಹೀಗೆ ಹಿಂದಿನ ಪದದ ಗುರುತು ಸಿಕ್ಕದಂತೆ ಆಗುವ ಸಂದರ್ಭಗಳಲ್ಲಿ ಲೋಪಸಂಧಿಯನ್ನು ಮಾಡಬಾರದು.

## ಆಗಮ ಸಂಧಿ

೮. ಹಾಗಾದರೆ ಕುರಿ+ಇದು, ಗುರು+ಒಬ್ಬನು—ಇವುಗಳನ್ನು ಕೂಡಿಸಿದರೆ ಏನಾಗುತ್ತದೆ? ಕುರಿಯಿದು, ಗುರುವೊಬ್ಬನು ಎಂದು ಸಂಧಿಯಾಗುತ್ತದೆ. ಇಲ್ಲಿ ಕ್ರಮವಾಗಿ ಯಕಾರವೂ ವಕಾರವೂ ಹೊಸದಾಗಿ ನಡುವೆ ಸೇರಿವೆ.

ಈ ರೀತಿ, ಹಿಂದೆ ಇಲ್ಲದಿದ್ದ ಒಂದು ವರ್ಣವು ಹೊಸದಾಗಿ ಸೇರುವುದಕ್ಕೆ **ಆಗಮವೆಂದೂ**, ಈ ಸಂಧಿಗೆ **ಆಗಮಸಂಧಿಯೆಂದೂ** ಹೆಸರು, ಲೋಪಸಂಧಿ ಆಗಕೂಡದ ಕಡೆಗಳಲ್ಲಿ ಆಗಮಸಂಧಿಯಾಗುತ್ತದೆ.

೯. ಯಕಾರವು ಎಲ್ಲಿ ಆಗಮವಾಗುತ್ತದೆ, ವಕಾರವು ಎಲ್ಲಿ ಆಗಮವಾಗುತ್ತದೆ ಎಂಬುದನ್ನು ಇನ್ನು ನೋಡೋಣ.

೧೦. ಅ, ಇ, ಈ, ಎ, ಏ, ಐ ಎಂಬ ಸ್ವರಗಳ ಮುಂದೆ ಸ್ವರವು ಬಂದರೆ ನಡುವೆ ಯಕಾರವು ಬರುತ್ತದೆ.

ಉದಾಹರಣೆ.

ಕುರುಬನು ಮಂದೆಯನ್ನು ಕಾಯದೆ ಓಡಿಬಂದನು. (ಕಾ+ಅದೆ)
ಈ ಹಳ್ಳಿಯಲ್ಲಿ ಮನೆಗಳು ಎಷ್ಟು? (ಹಳ್ಳಿ+ಅಲ್ಲಿ)
ಶ್ರೀಹರ್ಷನು ತನ್ನ ತಂಗಿ ರಾಜ್ಯಶ್ರೀಯನ್ನು ಹುಡುಕಿಕೊಂಡು ಹೊರಟನು (ರಾಜ್ಯಶ್ರೀ+ಅನ್ನು)
ಪಟ್ಟಣದವರೆಲ್ಲರೂ ಆತನೇ ತಮ್ಮ ದೊರೆಯೆಂದು ಒಪ್ಪಿಕೊಂಡರು. (ದೊರೆ+ಎಂದು)
ತುಪ್ಪದಲ್ಲಿ ಬೇಯಿಸಿದ ತಿಂಡಿಗಳನ್ನು ಮಾತ್ರ ಇಲ್ಲಿ ಮಾರುತ್ತಾರೆ. (ಬೇ+ಇಸಿದ)
ಸ್ನಾನಮಾಡಿದ ಕೂಡಲೆ ಮೈಯನ್ನು ಚೆನ್ನಾಗಿ ಒರಸಿಕೊಳ್ಳಬೇಕು. (ಮೈ+ಅನ್ನು)

೧೧. ಉ, ಋ ಎಂಬ ಸ್ವರಗಳ ಮುಂದೆ ಸ್ವರವು ಬಂದರೆ ನಡುವೆ ವಕಾರವು ಬರುತ್ತದೆ.

ಉದಾಹರಣೆ.

ಈ ಮಗುವಿಗೆ ಏನು ಹೆಸರು? (ಮಗು+ಇಗೆ)
ಭ್ರಾತೃವೆಂಬ ಶಬ್ದಕ್ಕೆ ಒಡಹುಟ್ಟಿದವನೆಂದು ಅರ್ಥ. (ಭ್ರಾತೃ+ಎಂಬ)

೧೨. ಓ ಎಂಬ ಸ್ವರದ ಮುಂದೆ ಸ್ವರವು ಬಂದರೆ ಕೆಲವು ಕಡೆಗಳಲ್ಲಿ ಯಕಾರವೂ ಕೆಲವು ಕಡೆಗಳಲ್ಲಿ ವಕಾರವೂ ನಡುವೆ ಸೇರುತ್ತವೆ.

ಉದಾಹರಣೆ.

ಯಕಾರಕ್ಕೆ:

ಗಾಳಿಯನ್ನು ಗುದ್ದಿ ಮೈನೋಯಿಸಿಕೊಂಡರು. (ನೋ+ಇಸಿ)

ವಕಾರಕ್ಕೆ:

'ಗೋವಿನ ಕಥೆ' ಸೊಗಸಾದ ಹಾಡು. (ಗೋ+ಇನ)

೧೩. ಕೆಳಗಿನ ಪ್ರಯೋಗಗಳನ್ನು ನೋಡಿ:

ಆ ವೂರಿನಿಂದ ನಾನು ಹೊರಟಾಗ ಆಗಲೇ ನಾಲ್ಕು ಘಂಟೆಯಾಗಿತ್ತು. (ಆ+ಊರಿನಿಂದ)

ಈ ವೂರಿಗೆ ಹೊಸಹಳ್ಳಿ ಯಾವ ದಿಕ್ಕಿನಲ್ಲಿದೆ? (ಈ+ಊರಿಗೆ)

ಮೇಲೆ ಬಂದಿರುವ ಆ ಈ ಎಂಬುವು ಕ್ರಮವಾಗಿ ದೂರದ ಮತ್ತು ಹತ್ತಿರದ ಪದಾರ್ಥಗಳನ್ನು ತೋರಿಸುವ ವಿಶೇಷಣಗಳು, ಇವುಗಳ ಮುಂದೆ ಉ, ಊ, ಒ, ಓ ಎಂಬ ಸ್ವರಗಳು ಬಂದರೆ ನಡುವೆ ವಕಾರವು ಬರುತ್ತದೆ.

ಉದಾಹರಣೆ.

| | |
|---|---|
| ಆ ವುಂಗುರ, | ಈ ವುಂಗುರ. |
| ಆ ವೂಟ, | ಈ ವೂಟ. |
| ಆ ವೊಂಟೆ, | ಈ ವೊಂಟೆ. |
| ಆ ವೋಲೆ, | ಈ ವೋಲೆ |

## ಆದೇಶ ಸಂಧಿ

೧೪. ಮೇಲೆ ಹೇಳಿದ ಸಂಧಿಕಾರ್ಯಗಳೆಲ್ಲ ಸ್ವರಕ್ಕೆ ಸ್ವರವು ಪರವಾದಾಗ ನಡೆಯತಕ್ಕವು. ಸ್ವರದ ಮುಂದೆ ವ್ಯಂಜನವು ಬಂದರೆ ಸಾಮಾನ್ಯವಾಗಿ ಯಾವ ವ್ಯತ್ಯಾಸವೂ ಉಂಟಾಗುವುದಿಲ್ಲ.

ಉದಾಹರಣೆ.

ಸೂರ್ಯನನ್ನು ನೋಡು.
ನನ್ನ ಬುಗುರಿ.

೧೫. ಮಳೆಗಾಲ, ಬೆಟ್ಟದಾವರೆ ಎಂಬ ಪದಗಳನ್ನು ಈಗ ನೋಡಿ. ಇವನ್ನು ಬಿಡಿಸಿದರೆ, ಮಳೆ+ಕಾಲ, ಬೆಟ್ಟ+ತಾವರೆ ಎಂದಾಗುತ್ತದೆ. ಇಲ್ಲಿ 'ಕಾಲ' ಎಂಬ ಪದದ ಆದಿಯ 'ಕ' ಕಾರಕ್ಕೆ ಪ್ರತಿಯಾಗಿ 'ಗ' ಕಾರವೂ, 'ತಾವರೆ' ಎಂಬ ಪದದ ಆದಿಯ 'ತ' ಕಾರಕ್ಕೆ ಪ್ರತಿಯಾಗಿ 'ದ' ಕಾರವೂ ಬಂದಿವೆ. ಹೀಗೆ ಒಂದು ವ್ಯಂಜನದ ಸ್ಥಾನದಲ್ಲಿ ಮತ್ತೊಂದು ಬರುವುದಕ್ಕೆ ಆದೇಶವೆಂದು ಹೆಸರು. ಮಳೆಗಾಲ, ಬೆಟ್ಟದಾವರೆ ಮೊದಲಾದ ಕಡೆಗಳಲ್ಲಿ ಆಗಿರುವುದು **ಆದೇಶ ಸಂಧಿ.**

೧೬. ಕನ್ನಡದಲ್ಲಿ ಆದೇಶಸಂಧಿ ಮುಖ್ಯವಾಗಿ ಸಮಾಸಗಳಲ್ಲಿ ನಡೆಯುತ್ತದೆ. (ಸಮಾಸವೆಂದರೆ ಏನೆಂಬುದನ್ನು ಬೇರೊಂದು ಅಧ್ಯಾಯದಲ್ಲಿ ಮುಂದೆ ಹೇಳಲಾಗುತ್ತದೆ.)

೧೭. ಆದೇಶಸಂಧಿಯಾದಾಗ ಉತ್ತರ ಪದದ* ಆದಿಯಲ್ಲಿರುವ ಕಕಾರ ತಕಾರಗಳಿಗೆ ಕ್ರಮವಾಗಿ ಗಕಾರ ದಕಾರಗಳು ಆದೇಶವಾಗಿ ಬರುತ್ತವೆ.

ಉದಾಹರಣೆ.

ಅಭ್ಯುದಯಕ್ಕೆ ಉದ್ಯೋಗವೇ ಅಡಿಗಲ್ಲು. (ಅಡಿ+ಕಲ್ಲು)
ಈ ಹುಲ್ಲುಗಾವಲಿನಲ್ಲಿ ಯಾರುಬೇಕಾದರೂ ದನಗಳನ್ನು ಮೇಯಿಸಬಹುದು. (ಹುಲ್ಲು+ಕಾವಲು)
ನಿನ್ನ ಕೆಳದುಟಿ ಏಕೆ ಊದಿಕೊಂಡಿದೆ? (ಕೆಳ+ತುಟಿ)

೧೮. ಕೆಲವು ಕಡೆಗಳಲ್ಲಿ ಆದೇಶಸಂಧಿ ಬರುವುದಿಲ್ಲ.

ಉದಾಹರಣೆ.

ತಲೆಕಟ್ಟು (ತಲೆ+ಕಟ್ಟು), ಕೈತಪ್ಪು (ಕೈ+ತಪ್ಪು).

೧೯. ಇದುವರೆಗೆ ಹೇಳಿದ ಸಂಧಿಕಾರ್ಯಗಳೆಲ್ಲ, ಪ್ರಕೃತಿಗೆ ಪ್ರತ್ಯಯವು ಸೇರುವಾಗಲೂ ಸಮಾಸದಲ್ಲೂ ನಿತ್ಯವಾಗಿ ಬರುತ್ತವೆ.

ಉದಾಹರಣೆ.

ಪ್ರಕೃತಿ ಪ್ರತ್ಯಯಗಳು ಸೇರುವಾಗ:

ಕನ್ನಡ + ಇಗ = ಕನ್ನಡಿಗ
ಮನೆ + ಇಂದ = ಮನೆಯಿಂದ
ಗುರು + ಇಗೆ = ಗುರುವಿಗೆ

ಸಮಾಸದಲ್ಲಿ:

ಕಲ್ಲು + ಉಪ್ಪು = ಕಲ್ಲುಪ್ಪು
ಓರೆ + ಕಣ್ಣು = ಓರೆಗಣ್ಣು

ಮನೆಇಂದ, ಕಲ್ಲುಉಪ್ಪು ಎಂದು ಸಂಧಿ ಮಾಡದೆ ಹೇಳಿದರೆ ತಪ್ಪಾಗುತ್ತದೆ.

೨೦. ವಾಕ್ಯದಲ್ಲಿ ಪದಕ್ಕೆ ಪದವು ಸೇರುವಾಗ, ಮಾತಾಡುವವನು ತನಗೆ ಇಚ್ಛೆ ಬಂದರೆ ಸಂಧಿಮಾಡಿ ಹೇಳಬಹುದು; ಇಲ್ಲವಾದರೆ ಪದಗಳನ್ನು ಬಿಡಿಸಿ ಹೇಳಬಹುದು.

---

*ಉತ್ತರ ಪದವೆಂದರೆ ಮುಂದೆ ನಿಲ್ಲುವ ಪದ; ಹಿಂದೆ ನಿಲ್ಲುವ ಪದಕ್ಕೆ 'ಪೂರ್ವಪದ' ಎಂದು ಹೆಸರು. 'ಮಳೆಗಾಲ' ಎಂಬುದರಲ್ಲಿ 'ಮಳೆ' ಪೂರ್ವಪದ; 'ಕಾಲ' ಉತ್ತರ ಪದ.

ಉದಾಹರಣೆ.

ಸಂಧಿಗೆ : ಪೋಲೀಸಿನವನು ಕಳ್ಳನನ್ನು ಗಂಟು ನಿನಗೆಲ್ಲಿ ಸಿಕ್ಕಿತೆಂದು ಕೇಳಿದನು.

ಸಂಧಿ ಮಾಡದಿರುವುದಕ್ಕೆ : ಪೋಲೀಸಿನವನು ಕಳ್ಳನನ್ನು ಗಂಟು ನಿನಗೆ ಎಲ್ಲಿ ಸಿಕ್ಕಿತು ಎಂದು ಕೇಳಿದನು.

ಸಂಧಿಗೆ : ಈ ವೂರಿಗೆ ಹತ್ತಿರದಲ್ಲಿ ಹೊಳೆಯಿದೆಯೆ ?

ಸಂಧಿ ಮಾಡದಿರುವುದಕ್ಕೆ : ಈ ಊರಿಗೆ ಹತ್ತಿರದಲ್ಲಿ ಹೊಳೆ ಇದೆಯೆ ?

೨೧. ನಾವು ಆಡುವ ಮಾತಿನಲ್ಲಿ ಪದಗಳನ್ನು ಬಲುಮಟ್ಟಿಗೆ ಕೂಡಿಸಿ ಹೇಳುತ್ತೇವಾದರೂ, ಬರವಣಿಗೆಯಲ್ಲಿ ಅದಷ್ಟುಮಟ್ಟಿಗೆ ಸಂಧಿ ಮಾಡದೆ ಪದಗಳನ್ನು ಬಿಡಿಸಿ ಬರೆಯುತ್ತೇವೆ.

## ಪ್ರಕೃತಿಭಾವ

೨೨. ಕೆಳಗಿನ ಪ್ರಯೋಗಗಳನ್ನು ನೋಡಿ :

ದೇವರೇ, ಇವರನ್ನು ಕಾಪಾಡು.
ಓಹೋ, ಉಂಗುರ ಸಿಕ್ಕಿತು.

ದೇವರೇ+ಇವರನ್ನು, ಓಹೋ+ಉಂಗುರ ಎಂಬ ಕಡೆಗಳಲ್ಲಿ ಸಂಧಿಕಾರ್ಯ ನಡೆದಿಲ್ಲ; ದೇವರೇ ಯಿವರನ್ನು, ಓಹೋ ವುಂಗುರ—ಹೀಗೆ ಇಲ್ಲಿ ಸಂಧಿಮಾಡಕೂಡದು. ಪದಗಳು ಮೂಲಸ್ಥಿತಿಯಲ್ಲಿ ಹೇಗಿವೆಯೋ ಹಾಗೆಯೇ ಬಿಡಬೇಕು.

ಈ ರೀತಿಯಾಗಿ ಸಂಧಿಕಾರ್ಯವು ನಡೆಯಕೂಡದ ಸಂದರ್ಭಕ್ಕೆ **ಪ್ರಕೃತಿಭಾವ**ವೆಂದು ಹೆಸರು.

೨೩. ಪ್ರಕೃತಿಭಾವವು ತಪ್ಪದೆ ಆಗುವ ಕೆಲವು ಸ್ಥಳಗಳನ್ನು ಕೆಳಗೆ ಸೂಚಿಸಿದೆ :

(೧) ಯಾರನ್ನಾದರೂ ಹೆಸರುಹಿಡಿದು ಕರೆಯುವ ಸಂಬೋಧನೆಯ ರೂಪದ ಮುಂದೆ ಸ್ವರವು ಬಂದರೆ ಸಂಧಿಕಾರ್ಯವಾಗುವುದಿಲ್ಲ.

ಉದಾಹರಣೆ.

ಅಣ್ಣಾ, ಇವನು ನನ್ನನ್ನು ಹೆದರಿಸುತ್ತಾನೆ.
ಗೌರಿ, ಎಲ್ಲಿ ನನ್ನ ಬಾಚಣಿಗೆ ?

(೨) ಮನಸ್ಸಿನ ಭಾವವನ್ನು ಸೂಚಿಸುವ ಅಯ್ಯೋ, ಆಹಾ ಮೊದಲಾದ ಅವ್ಯಯಗಳ ಮುಂದೆ ಸ್ವರವು ಬಂದರೆ ಸಂಧಿ ಕಾರ್ಯವಾಗುವುದಿಲ್ಲ.

ಉದಾಹರಣೆ.

ಆಹಾ, ಇಲ್ಲಿ ತಣ್ಣಗೆ ಗಾಳಿ ಬೀಸುತ್ತಿದೆ
ಅಯ್ಯೋ, ಎಮ್ಮೆಯ ಕರು ತಪ್ಪಿಸಿಕೊಂಡದೆಯಲ್ಲ !

(೩) ಸಂಬಂಧ, ಅವಧಾರಣೆ, ಸಂಶಯ ಮೊದಲಾದುವನ್ನು ಸೂಚಿಸತಕ್ಕ ಊ, ಏ, ಒ, ಓ, ಮೊದಲಾದ ಅವ್ಯಯಗಳ ಮುಂದೆ ಸ್ವರವು ಬಂದರೆ ಸಂಧಿಕಾರ್ಯವಾಗುವುದಿಲ್ಲ.

ಉದಾಹರಣೆ.

ಅವನೂ ಇವನೂ ಎರಡು ಘಂಟೆಯಿಂದ ಜಗಳವಾಡುತ್ತಿದ್ದಾರೆ.
ಆ ಚಿತ್ರವನ್ನು ರಾಮನೇ ಇರಿಸಿಕೊಂಡನು.
ಇಲ್ಲಿರುವ ಗೋಲಿಗಳೆಷ್ಟು? ಐದೋ ಆರೋ?
ರಾಮು ಹೋಗಿದ್ದಾನೋ, ಆ ಕೆಲಸ ಆದಹಾಗೇ ಸರಿ.

---

## ಆರನೆಯ ಅಧ್ಯಾಯ

### ನಾಮಪದದ ಬಗೆಗಳು

೧. ಭಾಷೆಯಲ್ಲಿರುವ ಶಬ್ದಗಳಲ್ಲಿ, ಬಗೆಬಗೆಯ ಹೆಸರುಗಳನ್ನು ತಿಳಿಸತಕ್ಕವುಗಳಿಗೆ ನಾಮಪ್ರಕೃತಿ ಅಥವಾ ನಾಮಪದ ಎಂಬ ಹೆಸರುಬಂದಿದೆ ಯೆಂದು ಹಿಂದೆ ಒಂದು ಅಧ್ಯಾಯದಲ್ಲಿ ನೋಡಿದೆವು. ನಾಮಪದಗಳ ವಿಷಯವನ್ನು ಈಗ ವಿವರವಾಗಿ ತಿಳಿದುಕೊಳ್ಳಬೇಕಾಗಿದೆ. ಮೊದಲು ಇವುಗಳ ಒಳಪಂಗಡಗಳೆಷ್ಟು ಎಂಬುದನ್ನು ಈ ಅಧ್ಯಾಯದಲ್ಲಿ ವಿಚಾರ ಮಾಡೋಣ.

### ನಾಮವಾಚಕ

೨. ಕೆಳಗೆ ಕೊಟ್ಟಿರುವ ಹೆಸರುಗಳನ್ನು ನೋಡಿ:—

ಗಂಡಸು, ಹೆಂಗಸು, ಮಗು, ಸೀತೆ, ಲಕ್ಷ್ಮಣ, ಶಂಕರ, ಮುದುಕಿ, ಆಟಗಾರ, ಸೊಗಸುಗಾತಿ, ಕ್ಷತ್ರಿಯ, ಒಕ್ಕಲಿಗ, ಕನ್ನಡಿಗ—ಇವೆಲ್ಲ ಮನುಷ್ಯರನ್ನು ಹೇಳುತ್ತವೆ;

ಆನೆ, ಕುದುರೆ, ಜಿಂಕೆ, ಮೃಗ—ಇವು ಪ್ರಾಣಿಗಳನ್ನು ಹೇಳುತ್ತವೆ;

ಮರ, ಗಿಡ, ಬಳ್ಳಿ, ಹಲಸು, ತೆಂಗು, ಮಾವು, ಜಾಜಿ, ಹೂವು, ಮೊಗ್ಗು—ಇವು ಗಿಡ, ಮರ ಮೊದಲಾದುವನ್ನು ಹೇಳುತ್ತವೆ;

ಸೂರ್ಯ, ಚಂದ್ರ, ಬೆಟ್ಟ, ನೆಲ, ಮನೆ, ಗುಡಿ, ಮೇಜು, ಕುರ್ಚಿ, ಮಂಚ, ಬಟ್ಟೆ, ಪಾದುಕೆ, ಕಬ್ಬಿಣ, ಚಿನ್ನ, ಕೋಲು, ಗಡಿಯಾರ, ಹಡಗು, ನೀರು, ಗಾಳಿ, ಮಳೆ—ಇವು ಚೈತನ್ಯವಿಲ್ಲದ ಹಲವು ಬಗೆಯ ಪದಾರ್ಥಗಳನ್ನು ಹೇಳುತ್ತವೆ;

ಹಗಲು, ಸಂಜೆ, ತಿಂಗಳು, ವರ್ಷ, ನಿನ್ನೆ ನಾಳೆ—ಇವು ಕಾಲವನ್ನು ತಿಳಿಸುತ್ತವೆ.

ದೂರ, ಹತ್ತಿರ, ಹಿಂದು, ಮುಂದು, ಮೇಲು, ಕೆಳಗು—ಇವು ಸ್ಥಾನವನ್ನೋ ದಿಕ್ಕನ್ನೋ ತಿಳಿಸುತ್ತವೆ;

ಅಂಗುಲ, ಅಡಿ, ಸೇರು, ಬಳ್ಳ, ಮಣ—ಇವು ಅಳತೆಯ ಸಾಧನಗಳನ್ನು ಹೇಳುತ್ತವೆ;

ಬೆಳಕು, ಕತ್ತಲೆ, ಬಿಸಿಲು, ಬೆಳದಿಂಗಳು, ಯುದ್ಧ, ನಿದ್ದೆ, ಸಾವು, ಬದುಕು, ನಗೆ, ಗೋಳು, ಆಟ, ನೋಟ—ಇವು ಒಂದು ಕ್ರಿಯೆ ನಡೆಯುವುದರಿಂದ ಉಂಟಾಗುವ ಸ್ಥಿತಿಯನು ಹೇಳುತ್ತವೆ;

ಬಿಳುಪು, ಕೆಂಪು, ಬಡತನ, ಗೌಡಿಕೆ, ಕುರುಡು, ಕುಂಟು—ಇವು ವಸ್ತುಗಳ ಸ್ವಭಾವವನ್ನು ತಿಳಿಸುತ್ತವೆ.

ರೂಢಿಯಲ್ಲಿ ಎಷ್ಟೋ ಬಗೆಯ ಪದಾರ್ಥಗಳಿಗೂ ವಿಷಯಗಳಿಗೂ ಹೆಸರು ಉಂಟೆಂಬುದು ನಮಗೆ ಇಲ್ಲಿ ಗೊತ್ತಾಗುತ್ತದೆ. ಹೀಗೆ ಬಗೆಬಗೆಯ ಪದಾರ್ಥಗಳ ಅಥವಾ ವಿಷಯಗಳ ಹೆಸರನ್ನು ತಿಳಿಸುವ ನಾಮಪದಕ್ಕೆ ನಾಮವಾಚಕವೆಂದು ಹೆಸರು.

೩. ಅರ್ಥದ ಕಡೆಗೆ ದೃಷ್ಟಿಯಿಟ್ಟು ಈ ನಾಮವಾಚಕಗಳಲ್ಲಿ ಕೆಲವು ಒಳವಿಭಾಗಗಳನ್ನು ಮಾಡಬಹುದು.

೪. ಗಂಡಸು, ಹೆಂಗಸು, ನೆಲ, ಕೊಳ, ಮರ, ಬಳ್ಳಿ—ಮೊದಲಾದುವನ್ನು ನೋಡಿ. ಇವು ಆಯಾ ಪದಾರ್ಥಗಳಿಗೆ ಹಿಂದಿನಿಂದಲೂ ರೂಢಿಯಾಗಿ ಬಂದಿರುವ ಹೆಸರನ್ನು ಹೇಳುತ್ತವೆ. ಇಂಥ ನಾಮವಾಚಕಗಳಿಗೆ **ರೂಢನಾಮ**ಗಳೆಂದು ಹೆಸರು.

೫. ರಾಮ, ಸೀತೆ, ಲಕ್ಷ್ಮಿ, ಕಾವೇರಿ, ಮೈಸೂರು, ನೀಲಗಿರಿ–ಮೊದಲಾದುವನ್ನು ನೋಡಿ. ಇವೆಲ್ಲಾ ಒಬ್ಬ ವ್ಯಕ್ತಿಯನ್ನೋ ಒಂದು ಪ್ರದೇಶವನ್ನೋ ಗುರುತಿಸುವುದಕ್ಕಾಗಿ ಇಟ್ಟ ಹೆಸರುಗಳು. ಇಂಥ ನಾಮವಾಚಕಗಳಿಗೆ **ಅಂಕಿತನಾಮ**ಗಳೆಂದು ಹೆಸರು.

೬. ರೂಢನಾಮಕ್ಕೂ ಅಂಕಿತನಾಮಕ್ಕೂ ಇರುವ ಭೇದವನ್ನು ಈ ಕೆಳಗಿನ ಉದಾಹರಣೆಗಳಿಂದ ತಿಳಿಯಬಹುದು :—

ನಮ್ಮ ದೇಶದ ಪಟ್ಟಣಗಳಲ್ಲಿ ಬೆಂಗಳೂರು ಎಲ್ಲಕ್ಕಿಂತಲೂ ದೊಡ್ಡದು.

ಕಾವೇರಿ, ಹೇಮಾವತಿ, ಶರಾವತಿ ಮೊದಲಾದುವು ಮೈಸೂರಿನ ಮುಖ್ಯವಾದ ನದಿಗಳು.

ನಂದಿಯ ಬೆಟ್ಟದ ಮೇಲಿರುವ ಕೊಳವನ್ನು ಅಮೃತಸರೋವರವೆಂದು ಕರೆಯುತ್ತಾರೆ

'ಗರುಡಮರಿ' ಒಂದು ಚಿಕ್ಕ ಬೆಕ್ಕಿನ ಮರಿ; ನೋಡುವುದಕ್ಕೆ ಬಹು ಅಂದವಾಗಿತ್ತು

ಮೇಲೆ ಗುರುತು ಮಾಡಿರುವ ನಾಮವಾಚಕಗಳಲ್ಲಿ 'ಪಟ್ಟಣ' ಎಂಬ ರೂಢನಾಮವನ್ನೂ 'ಬೆಂಗಳೂರು' ಎಂಬ ಅಂಕಿತನಾಮವನ್ನೂ ನೋಡಿ. 'ಪಟ್ಟಣ' ಎಂಬುದು ಒಂದೇ ಬಗೆಯ ಹಲವು 'ವಸ್ತು' ಗಳನ್ನು ಹೇಳುತ್ತದೆ. ಹೆಚ್ಚಾಗಿ ಮನೆಗಳಿದ್ದು ಹೆಚ್ಚು ಜನರು ವಾಸಮಾಡುವ ಜಾಗಗಳೆಲ್ಲವೂ ಪಟ್ಟಣಗಳೇ. ಆದರೆ 'ಬೆಂಗಳೂರು' ಎನ್ನುವುದು ಅಂಥ ಪಟ್ಟಣಗಳಲ್ಲಿ ಒಂದಕ್ಕೆ ಮಾತ್ರ ಇಟ್ಟ ಹೆಸರು. ಇದರಂತೆಯೇ ನದಿ ಎಂಬುದು ರೂಢನಾಮ : ಕಾವೇರಿ, ಹೇಮಾವತಿ, ಶರಾವತಿ ಮೊದಲಾದುವು ನದಿಯ ಜಾತಿಗೆ ಸೇರಿದ ಬೇರೆ ಬೇರೆ ವಸ್ತುಗಳನ್ನು ಗುರುತಿಸುವುದಕ್ಕಾಗಿ ಇಟ್ಟ ಹೆಸರುಗಳು. ಇವು ಒಂದೊಂದು ನದಿಯನ್ನು ಮಾತ್ರ ತೋರಿಸುತ್ತವೆ.

೭. ಈಗ ಇನ್ನೊಂದು ಬಗೆಯ ನಾಮವಾಚಕಗಳನ್ನು ನೋಡಿ ; ಆಟ, ಬದುಕು, ತಿಳಿವಳಿಕೆ, ಹೊಂದಿಕೆ—ಇವು ಯಾವ ವಸ್ತುವಿನ ಹೆಸರನ್ನೂ ತಿಳಿಸುವುದಿಲ್ಲ; ಒಂದು ಕ್ರಿಯೆ ನಡೆಯುವುದರಿಂದ ಉಂಟಾಗುವ ಸ್ಥಿತಿಯನ್ನು ಹೇಳುತ್ತವೆ. ಉದಾಹರಣೆಗೆ ಆಡುವ ಸ್ಥಿತಿ 'ಆಟ' ; ತಿಳಿಯುವುದರಿಂದ ಉಂಟಾಗುವುದು 'ತಿಳಿವಳಿಕೆ.'

೮. ಬಿಳುಪು, ಬಡತನ, ಕುರುಡು ಎಂಬ ನಾಮವಾಚಕಗಳನ್ನು ನೋಡಿ. ಇವೂ ವಸ್ತುಗಳ ಹೆಸರುಗಳಲ್ಲ; ಇವು ಒಂದು ವಸ್ತುವಿನ ಸ್ವಭಾವವನ್ನೋ ಸ್ಥಿತಿಯನ್ನೋ ತಿಳಿಸುತ್ತವೆ. ಬೆಳ್ಳಗಿರುವ ವಸ್ತುವಿನ ಸ್ವಭಾವ 'ಬಿಳುಪು'; ಬಡವನ ಸ್ಥಿತಿ 'ಬಡತನ'; ಕುರುಡನ ಸ್ಥಿತಿ 'ಕುರುಡು.'

೯. ಹೀಗೆ, ಒಂದು ಕ್ರಿಯೆ ನಡೆಯುವುದರಿಂದ ಉಂಟಾಗುವ ಸ್ಥಿತಿಯನ್ನಾಗಲಿ ಒಂದು ವಸ್ತುವಿನ ಸ್ಥಿತಿ ಸ್ವಭಾವಗಳನ್ನಾಗಲಿ ತಿಳಿಸುವ ನಾಮವಾಚಕಕ್ಕೆ **ಭಾವನಾಮವೆಂದು** ಹೆಸರು. (ಇಲ್ಲಿ ಭಾವ ಎಂದರೆ ಇರುವಿಕೆ, ಸ್ಥಿತಿ ಎಂದು ಅರ್ಥ.)

೧೦. ನಾಮವಾಚಕಗಳಲ್ಲಿ ಮೇಲೆ ನೋಡಿದಂತೆ ರೂಢನಾಮ, ಅಂಕಿತನಾಮ, ಭಾವನಾಮ ಎಂಬ ಮುಖ್ಯವಾದ ಮೂರು ವಿಭಾಗಗಳಿವೆ.

೧೧. ಕುರುಡ, ಕುಂಟ, ಹೆಳವ ಮೊದಲಾದ ನಾಮವಾಚಕಗಳನ್ನು **ಅನ್ವರ್ಥನಾಮ**ಗಳೆಂದು ಕರೆಯುವುದುಂಟು.

೧೨. ಭಾವನಾಮವನ್ನೇ ಒಂದು ಸ್ವತಂತ್ರವಾದ ವರ್ಗವಾಗಿ ಇಟ್ಟುಕೊಂಡು, ಮಿಕ್ಕ ನಾಮವಾಚಕಗಳನ್ನೆಲ್ಲಾ 'ವಸ್ತುವಾಚಕ'ಗಳೆಂದು ಕರೆಯುವುದುಂಟು.

## ಗುಣವಾಚಕ

೧೩. ಕೆಳಗೆ ಗುರುತುಮಾಡಿರುವ ಮಾತುಗಳನ್ನು ನೋಡಿ;—

ನಮ್ಮ ನೆರೆಮನೆಯ ಜನರು ತುಂಬ ಒಳ್ಳೆಯವರು; ನನ್ನನ್ನು ಕಂಡಾಗ ಲೆಲ್ಲ ಕರೆದು ತಿಂಡಿಯನ್ನು ಕೊಡುತ್ತಾರೆ.
ನನ್ನ ಪುಸ್ತಕ ಹೊಸದು; ನಿನ್ನ ಪುಸ್ತಕ ಹಳೆಯದು.
ನಿನಗೆ ಬೊಂಬಾಯಿಗೆ ಹೋಗಿ ಬರುವುದಕ್ಕೆ ಆದ ವೆಚ್ಚ ಎಷ್ಟು?
ಕೆಲವರು ಕತ್ತಲೆಯಲ್ಲಿ ಹೊರಗೆ ಕಾಲಿಡುವುದಕ್ಕೆ ಅಂಜುತ್ತಾರೆ.
ನಿಮ್ಮ ತಂದೆ ನಿನಗೆ ತೆಗೆದು ಕೊಟ್ಟಿರುವ ಪೆಟ್ಟಿಗೆ ಎಂಥದು?
ಇಂಥವನು ಯಾರ ಸಂಗಡವೂ ಸ್ನೇಹದಿಂದ ಬಾಳಲಾರನು.

ಒಳ್ಳೆಯವರು, ಹೊಸದು, ಎಷ್ಟು, ಎಂಥದು—ಈ ಮೊದಲಾದ ಶಬ್ದಗಳೆಲ್ಲ ಒಬ್ಬ ವ್ಯಕ್ತಿಯನ್ನೋ ಒಂದು ಪದಾರ್ಥವನ್ನೋ ತಿಳಿಸುವುದ ರಿಂದ ಇವು ನಾಮಪದಗಳೇ ಸರಿ. ಆದರೆ, ಆಯಾ ವ್ಯಕ್ತಿಯ ಅಥವಾ ಪದಾರ್ಥದ ಯಾವುದಾದರೂ ಒಂದು ಗುಣವನ್ನು ಇವು ಎತ್ತಿ ಹೇಳುತ್ತವೆ. ಆದಕಾರಣ ಇವಕ್ಕೆ **ಗುಣವಾಚಕ**ಗಳೆಂಬ ಹೆಸರು ಬಂದಿದೆ.

೧೪. ಈ ಗುಣವಾಚಕಗಳಲ್ಲಿ ಕೆಲವು ಒಳಭೇದಗಳುಂಟು. ಉದಾಹರಣೆಗೆ–ಒಳ್ಳೆಯವರು, ಹೊಸದು, ಹಳೆಯದು, ಎಂಬ ಶಬ್ದಗಳು

ಸಾಮಾನ್ಯ ರೀತಿಯ ಯಾವುದಾದರೂ ಒಂದು ಗುಣವನ್ನುಳ್ಳ ವಸ್ತುವನ್ನು ತಿಳಿಸುತ್ತವೆ.

೧೫. ಎಷ್ಟು, ಕೆಲವರು ಎಂಬ ಶಬ್ದಗಳು ತಾವು ಹೆಸರು ಹೇಳುವ ವಸ್ತುವಿನ ಪರಿಮಾಣವನ್ನು (ಎಂದರೆ ಅಳತೆಯನ್ನು) ಮುಖ್ಯವಾಗಿ ತೋರಿಸುತ್ತವೆ. ಅಷ್ಟು, ಇಷ್ಟು, ಹಲವು, ಎಲ್ಲವು ಮೊದಲಾದುವೂ ಇದೇ ಬಗೆಯ ಗುಣವಾಚಕಗಳು. (ಇವನ್ನು **ಪರಿಮಾಣವಾಚಕ**ಗಳೆಂದು ಕರೆಯುವುದುಂಟು.)

೧೬. ಎಂಥದು, ಇಂಥವನು ಎಂಬ ಶಬ್ದಗಳು ತಾವು ಹೆಸರು ಹೇಳುವ ವಸ್ತುವಿನ ಗುಣ ಯಾವುದೇ ಆಗಿರಲಿ, ಅದರ ಪ್ರಕಾರವನ್ನು (ಎಂದರೆ ರೀತಿಯನ್ನು) ಹೇಳುತ್ತವೆ. ಅಂಥದು ಎಂಬ ಶಬ್ದವೂ ಇದೇ ಬಗೆಯ ಗುಣವಾಚಕ. (ಇವನ್ನು **ಪ್ರಕಾರವಾಚಕ**ಗಳೆಂದು ಕರೆಯುವುದುಂಟು.)

## ಸಂಖ್ಯಾವಾಚಕ

೧೭. ನಾವು ಎಣಿಕೆ ಮಾಡುವಾಗ ಒಂದು, ಎರಡು, ಮೂರು, ನಾಲ್ಕು, ನೂರು, ಸಾವಿರ, ಕೋಟಿ, ಒಬ್ಬನು, ಇಬ್ಬರು, ಮೊದಲಾದ ನಾಮಪದಗಳನ್ನು ಉಪಯೋಗಿಸುತ್ತೇವೆ. ಸಂಖ್ಯೆ ಮಾಡಿದ ವಸ್ತುಗಳನ್ನು ಇವು ತಿಳಿಸುವುದರಿಂದ ಇವಕ್ಕೆ **ಸಂಖ್ಯಾವಾಚಕ**ಗಳೆಂಬ ಹೆಸರು ಬಂದಿದೆ.

೧೮. ಒಂದನೆಯವನು, ಎರಡನೆಯವಳು, ಮೂರನೆಯದು ಮೊದಲಾದ ಶಬ್ದಗಳನ್ನು ನೋಡಿ. ಸಂಖ್ಯೆಮಾಡಿದ ವಸ್ತುವನ್ನು ಹೇಳುವುದರಿಂದ ಇವೂ ಸಂಖ್ಯಾವಾಚಕಗಳೇ. ಆದರೆ ಬರಿಯ ಎಣಿಕೆಯನ್ನು ಇವು ತಿಳಿಸದೆ, ಎಣಿಕೆಯಲ್ಲಿ ಒಂದು ವಸ್ತು ಯಾವ ಕ್ರಮದಲ್ಲಿ ಅಥವಾ ಸ್ಥಾನದಲ್ಲಿ ಬಂದಿತು ಎಂಬುದನ್ನು ತಿಳಿಸುತ್ತವೆ. ಕೆಳಗಿನ ಉದಾಹರಣೆಗಳನ್ನು ನೋಡಿ :—

ಈ ತರಗತಿಯಲ್ಲಿ ಇಪ್ಪತ್ತು ಮಂದಿ ಹುಡುಗರಿದ್ದಾರೆ ; ಇವರಲ್ಲಿ ಶಾಮಣ್ಣನು ಒಂದನೆಯವನು.

ಜೂಜಿನಲ್ಲಿ ಓಡಿದ ಕುದುರೆಗಳು ಹತ್ತು ; ಅವುಗಳಲ್ಲಿ ಇದು ಎರಡನೆಯದು

## ಸರ್ವನಾಮ

೧೯. ನಾವು ಯಾವುದರ ವಿಷಯವಾಗಿ ಮಾತಾಡುತ್ತೇವೋ ಅದರ ಹೆಸರನ್ನು ಮತ್ತೆ ಮತ್ತೆ ಹೇಳಬೇಕಾಗುತ್ತದೆ ; ಆದರೆ ಒಂದೇ ನಾಮಪದವನ್ನು ಮತ್ತೆ ಮತ್ತೆ ಉಪಯೋಗಿಸಿದರೆ ಬೇಸರವುಂಟಾಗುತ್ತದೆ. ಇಂಥ

ಸಂದರ್ಭಗಳಲ್ಲಿ ಆ ನಾಮಪದಕ್ಕೆ ಬದಲಾಗಿ ಉಪಯೋಗಿಸುವುದಕ್ಕೆ ಬೇರೊಂದು ಬಗೆಯ ಶಬ್ದಗಳುಂಟು. ಉದಾಹರಣೆ :—

ಕೃಷ್ಣಮೂರ್ತಿ ಪೇಟೆಯಿಂದಮನೆಗೆ ಮಧ್ಯಾಹ್ನ ಒಂದು ಗಂಟೆಗೆ ಬಂದನು ; ಅವನು ತುಂಬ ಬಳಲಿದ್ದಂತೆ ತೋರಿತು.

ಹಿಂದೂದೇಶದ ದೊಡ್ಡ ಶತ್ರು ಬಡತನ ; ಅದು ತೊಲಗಬೇಕಾದರೆ ಕೈಗಾರಿಕೆಗಳು ಹೆಚ್ಚಬೇಕು.

ಮೇಲಿನ ವಾಕ್ಯಗಳಲ್ಲಿ ಅವನು, ಅದು ಎಂಬ ಶಬ್ದಗಳು ಕ್ರಮವಾಗಿ ಕೃಷ್ಣಮೂರ್ತಿ, ಬಡತನ ಎಂಬ ನಾಮಪದಗಳಿಗೆ ಬದಲಾಗಿ ಬಂದಿವೆ.

೨೦. ನಾನು ಈ ಊರಿಗೆ ನಿನ್ನೆಯ ದಿನ ಬಂದೆನು.
ಘಂಟೆ ಹೊಡೆದ ಸದ್ದನ್ನು ನೀನು ಕೇಳಿದೆಯಷ್ಟೆ.
ಮಗುವಿನ ಕೈಗೆ ಕಾಸನ್ನು ಯಾರು ಕೊಟ್ಟರು ?

ಈ ವಾಕ್ಯಗಳಲ್ಲಿ ಬಂದಿರುವ ನಾನು, ನೀನು, ಯಾರು ಎಂಬ ಶಬ್ದಗಳನ್ನು ನೋಡಿ. ನಾವು ಹಿಂದೆ ನೋಡಿದ ಉದಾಹರಣೆಗಳಲ್ಲಿ ಅವನು, ಅದು ಎಂಬ ಶಬ್ದಗಳು ಕೃಷ್ಣಮೂರ್ತಿ, ಬಡತನ ಎಂಬ ನಾಮಪದಗಳಿಗೆ ಬದಲಾಗಿ ಬಂದಿವೆ ಎಂದು ಹೇಳುವಂತೆ; ಇಲ್ಲಿ ನಾನು, ನೀನು, ಯಾರು ಎಂಬ ಶಬ್ದಗಳು ಇಂಥಿಂಥ ನಾಮಪದಗಳಿಗೆ ಬದಲಾಗಿ ಬಂದಿವೆ ಎಂದು ಹೇಳುವುದು ಕಷ್ಟ. ಆದರೂ, 'ನಾನು' ಎಂಬುದು ಮಾತಾಡುತ್ತಿರುವವನನ್ನೂ, 'ನೀನು' ಎಂಬುದು ಯಾರೊಂದಿಗೆ ಮಾತಾಡುತ್ತಿದ್ದೇವೋ ಅವನನ್ನೂ, 'ಯಾರು' ಎಂಬುದು ಪ್ರಶ್ನೆಗೆ ವಿಷಯವಾಗಿರುವವರನ್ನೂ ಹೆಸರು ಹೇಳದೆಯೇ ಸೂಚಿಸುತ್ತವೆ.

೨೧. ಹೀಗೆ ಒಂದು ನಾಮಪದದ ಸ್ಥಾನದಲ್ಲಿ ಬರುವ ಶಬ್ದಕ್ಕೂ, ಒಂದು ವಸ್ತುವಿನ (ಅಥವಾ ವಿಷಯದ) ಹೆಸರು ಹೇಳದೆಯೇ ಅದನ್ನು ಸೂಚಿಸುವ ಶಬ್ದಕ್ಕೂ **ಸರ್ವನಾಮವೆಂದು** ಹೆಸರು. ಸರ್ವನಾಮವು ನಾಮಪದದಲ್ಲೇ ಒಂದು ಬಗೆ.

೨೨. ಸರ್ವನಾಮಗಳಲ್ಲಿ ಕೆಲವು ಒಳಭೇದಗಳನ್ನು ನೋಡಬಹುದು. ನಾನು, ನಾವು ಎಂಬುವು ಮಾತಾಡುತ್ತಿರುವವರನ್ನು ಸೂಚಿಸುತ್ತವೆ; ಇವಕ್ಕೆ **ಉತ್ತಮ ಪುರುಷದ** ಸರ್ವನಾಮಗಳೆಂದು ಹೆಸರು. ನೀನು, ನೀವು ಎಂಬುವು ಯಾರೊಂದಿಗೆ ಮಾತಾಡುತ್ತಿದ್ದೇವೋ ಅವರನ್ನು ಸೂಚಿಸುತ್ತವೆ. ಇವು **ಮಧ್ಯಮ ಪುರುಷದ** ಸರ್ವನಾಮಗಳು. ಮಾತಾಡುವವರನ್ನೂ ಯಾರೊಂದಿಗೆ ಮಾತಾಡುತ್ತಾರೋ ಅವರನ್ನೂ ಬಿಟ್ಟು, ಮಿಕ್ಕ ಎಲ್ಲ ಜನರನ್ನೂ ವಸ್ತುಗಳನ್ನೂ ವಿಷಯಗಳನ್ನೂ ಅವನು, ಅವಳು, ಅವರು, ಅದು ಮೊದಲಾದುವು ಸೂಚಿಸುತ್ತವೆ. ಇವಕ್ಕೆ **ಪ್ರಥಮ ಪುರುಷದ** ಸರ್ವ

ನಾಮಗಳೆಂದು ಹೆಸರು ಈ ಮೂರು ಬಗೆಯ ಸರ್ವನಾಮಗಳನ್ನೂ ಒಟ್ಟಿಗೆ **ಪುರುಷವಾಚಕ ಸರ್ವನಾಮಗಳೆಂದು** ಕರೆಯುತ್ತಾರೆ.

೨೩. ಯಾರು, ಯಾವುದು, ಏನು ಮುಂತಾದ ಸರ್ವನಾಮಗಳು ಪ್ರಶ್ನೆಗೆ ವಿಷಯವಾಗಿರುವ ಪದಾರ್ಥಗಳನ್ನು ಸೂಚಿಸುತ್ತವೆ. ಇವು **ಪ್ರಶ್ನಾರ್ಥಕ** ಸರ್ವನಾಮಗಳು.

೨೪. ಇವುಗಳಲ್ಲದೆ, ತಾನು, ತಾವು ಎಂಬ ಸರ್ವನಾಮಗಳು ಬೇರೆ ಉಂಟು. "**ತಾನು** ಕೋಡಗ, ಪರರನ್ನು ಅಣಕಿಸಿತು." "ಆ ಪ್ರಯಾಣಿಕರಿಗೆ **ತಾವು** ಕಳೆದುಕೊಂಡಿದ್ದ ಗಂಟು ಮತ್ತೆ ಸಿಕ್ಕಿತು."—ಈ ಮೊದಲಾದ ಕಡೆಗಳಲ್ಲಿ ಅವು ಬರುತ್ತವೆ. ಇವಕ್ಕೆ **ಆತ್ಮಾರ್ಥಕ** ಸರ್ವನಾಮಗಳೆಂದು ಹೆಸರು.

೨೫. ಅಂತೂ ನಾಮಪದದಲ್ಲಿ ನಾಮವಾಚಕ, ಗುಣವಾಚಕ, ಸಂಖ್ಯಾವಾಚಕ, ಸರ್ವನಾಮ ಎಂದು ನಾಲ್ಕು ಬಗೆಗಳನ್ನು ವಿಂಗಡಿಸಬಹುದು. ಒಂದೊಂದರಲ್ಲೂ ಒಳಭೇದಗಳು ಉಂಟೆಂಬುದನ್ನು ಮೇಲೆ ನೋಡಿದ್ದಾಗಿದೆ.

---

## ಏಳನೆಯ ಅಧ್ಯಾಯ

### ಲಿಂಗ ವಚನಗಳು : ನಾಮವಾಚಕ.

### ೧. ಲಿಂಗ

೧. ಜಟ್ಟಿ ಕಾಳಗದಲ್ಲಿ ಗೆದ್ದನು.
ಸೀತೆ ಕಸೂತಿಯ ಕೆಲಸವನ್ನು ಕಲಿಯುತ್ತಿದ್ದಾಳೆ.
ನಿನ್ನೆಯ ದಿನ ಮಳೆ ಚೆನ್ನಾಗಿ ಬಿದ್ದಿತು.

ಮೇಲಿನ ವಾಕ್ಯಗಳಲ್ಲಿ ಬಂದಿರುವ ಜಟ್ಟಿ, ಸೀತೆ, ಮಳೆ ಎಂಬ ನಾಮಪದಗಳನ್ನು ನೋಡಿ. ಇವುಗಳಲ್ಲಿ 'ಜಟ್ಟಿ' ಎಂಬುದು ಗಂಡಸನ್ನೂ, 'ಸೀತೆ' ಎಂಬುದು ಹೆಂಗಸನ್ನೂ ಹೇಳುತ್ತದೆ. ಹೀಗೆ ಗಂಡಸರನ್ನು ಹೇಳುವ ಪದಗಳಿಗೆ ಪುಲ್ಲಿಂಗವೆಂದೂ, ಹೆಂಗಸರನ್ನು ಹೇಳುವ ಪದಗಳಿಗೆ ಸ್ತ್ರೀಲಿಂಗವೆಂದೂ ಹೆಸರು.

ಉದಾಹರಣೆ.

ಪುಲ್ಲಿಂಗಕ್ಕೆ : ತಂದೆ, ಅಣ್ಣ, ತಮ್ಮ, ಅರಸ, ಹುಡುಗ, ವಿಷ್ಣು, ಶಿವ, ಇತ್ಯಾದಿ
ಸ್ತ್ರೀಲಿಂಗಕ್ಕೆ : ತಾಯಿ, ಅಕ್ಕ, ತಂಗಿ, ಅರಸಿ, ಹುಡುಗಿ, ಲಕ್ಷ್ಮಿ, ಗೌರಿ, ಇತ್ಯಾದಿ.

೨. ಪುಲ್ಲಿಂಗವೂ ಸ್ತ್ರೀಲಿಂಗವೂ ಅಲ್ಲದ ಪದಗಳೆಲ್ಲಾ **ನಪುಂಸಕ ಲಿಂಗ.** ಮೇಲೆ ಉದಾಹರಣೆಗಾಗಿ ಕೊಟ್ಟಿರುವ 'ಮಳೆ' ಎಂಬುದು ನಪುಂಸಕಲಿಂಗದ ಪದ. ಇದರಂತೆಯೇ—ನೆಲ, ಬೆಂಕಿ, ನೀರು, ಕಣ್ಣು, ಹೊಳೆ, ದೊರೆತನ, ಅಂಜಿಕೆ, ಕೆಂಪು, ಬಿಳುಪು ಮೊದಲಾದುವು.

೩. ಈಗ ಕೆಳಗಿನ ವಾಕ್ಯಗಳನ್ನು ನೋಡಿ :

ಈ ಎತ್ತು ಮುದಿಯಾಯಿತು.
ಚೆನ್ನಾಗಿ ಮೇಯಿಸಿದರೆ, ಹಸು ಹೆಚ್ಚಾಗಿ ಹಾಲು ಕೊಡುತ್ತದೆ.

'ಎತ್ತು' ಗಂಡುಜಾತಿಗೆ ಸೇರಿದ ಪ್ರಾಣಿ; 'ಹಸು' ಹೆಣ್ಣು ಜಾತಿಗೆ ಸೇರಿದ ಪ್ರಾಣಿ, ಆದರೆ 'ಎತ್ತು' ಎಂಬುದು ಪುಲ್ಲಿಂಗವಲ್ಲ; 'ಹಸು' ಎಂಬುದು ಸ್ತ್ರೀಲಿಂಗವಲ್ಲ. ಇವೆರಡೂ ನಪುಂಸಕ ಲಿಂಗಕ್ಕೇ ಸೇರಿವೆ. ಪಶುಪಕ್ಷಿ ಮೊದಲಾದುವುಗಳಲ್ಲಿ ಗಂಡು, ಹೆಣ್ಣು ಎಂಬ ಭೇದವಿದ್ದರೂ ಅವುಗಳ ಹೆಸರನ್ನು ಹೇಳುವ ನಾಮಪದಗಳು ಮಾತ್ರ ನಪುಂಸಕ ಲಿಂಗದಲ್ಲಿಯೇ ಇರುತ್ತವೆ.

೪. ಕೆಳಗಿನ ಪ್ರಯೋಗಗಳನ್ನು ನೋಡಿ :

ಮಗು ಆಡುತ್ತಾ ಆಡುತ್ತಾ ಬಾವಿಯ ಬಳಿಗೆ ಹೋಯಿತು.
ಆ ಹಳ್ಳಿಗೆ ಒಂದುಸಲ ಮರಾಟೆಯವರ ದಂಡು ಬಂದಿತು.

'ಮಗು' ಗಂಡೋ ಹೆಣ್ಣೋ ಆಗಿರುತ್ತದೆ: ಆದರೂ ಅದನ್ನು ಹೇಳುವ ಶಬ್ದವು ನಪುಂಸಕಲಿಂಗದಲ್ಲಿರುವುದೇ ರೂಢಿ. ಇದರಂತೆಯೇ 'ಶಿಶು,' 'ಹಸುಳೆ' ಮೊದಲಾದ ಪದಗಳು ಹೀಗೆಯೇ 'ದಂಡು,' 'ಗುಂಪು' ಮೊದಲಾದ ಸಮುದಾಯವನ್ನು ತಿಳಿಸುವ ಶಬ್ದಗಳು ನಪುಂಸಕ ಲಿಂಗದಲ್ಲಿರುತ್ತವೆ.

೫. 'ಮಗು' ವಿನ ಲಿಂಗವನ್ನು ತಿಳಿಸಬೇಕಾದಾಗ ಪುಲ್ಲಿಂಗದಲ್ಲಿ 'ಮಗ' ಎಂಬ ಶಬ್ದವನ್ನೂ ಸ್ತ್ರೀಲಿಂಗದಲ್ಲಿ 'ಮಗಳು' ಎಂಬ ಶಬ್ದ ವನ್ನೂ ಉಪಯೋಗಿಸುತ್ತಾರೆ.

ಉದಾಹರಣೆ.

ಕೃಷ್ಣಪ್ಪನಿಗೆ ನಾಲ್ಕುವರ್ಷದ ಒಬ್ಬ ಮಗನಿದ್ದಾನೆ.
ಈತನ ಕಿರಿಯ ಮಗಳು ಆರು ತಿಂಗಳ ಕೆಳಗೆ ಹುಟ್ಟಿದಳು.

೬. ಕೆಲವು ನಾಮಪದಗಳನ್ನು ಸಂದರ್ಭಕ್ಕೆ ಅನುಸಾರವಾಗಿ ಹಲವು ಲಿಂಗಗಳಲ್ಲಿ ಉಪಯೋಗಿಸುವುದುಂಟು.

ಉದಾಹರಣೆ.

ಅವನ ಜಾತಕದಲ್ಲಿ ಶನಿ ಎಂಟನೆಯ ಕಡೆ ಇದ್ದಾನೆ. (ಪುಲ್ಲಿಂಗ)
ಕಣ್ಣಿಗೆ ಕಾಣಿಸುವ ಗ್ರಹಗಳಲ್ಲಿ ಶನಿಯೇ ಕಡೆಯದು. (ನಪುಂಸಕಲಿಂಗ)
ಆ ಹುಡುಗಿ ಚೆನ್ನಾಗಿ ಹಾಡು ಹೇಳುತ್ತಾಳೆ. (ಸ್ತ್ರೀಲಿಂಗ)
ಹುಡುಗಿ ತುಂಬ ಚಿಕ್ಕದು; ಇದಕ್ಕೆ ಆಗಲೇ ಮದುವೆಯೆ ? (ನಪುಂಸಕಲಿಂಗ)

## ಸ್ತ್ರೀವಾಚಕ ಪ್ರತ್ಯಯಗಳು.

೭. ತಂದೆ, ತಾಯಿ, ಅಣ್ಣ, ತಮ್ಮ, ಅಕ್ಕ, ತಂಗಿ, ಮಾವ, ಅತ್ತೆ —ಈ ಮೊದಲಾದ ನಾಮಪದಗಳಲ್ಲಿ ಯಾವುದು ಪುಲ್ಲಿಂಗ, ಯಾವುದು ಸ್ತ್ರೀಲಿಂಗ ಎಂಬುದನ್ನು ಅವುಗಳ ಅರ್ಥದಿಂದ ಮಾತ್ರ ತಿಳಿಯಬಹುದು. ಈಗ ಕೆಳಗಿನ ಪ್ರಯೋಗಗಳನ್ನು ನೋಡಿ ;

ಮದುವೆಯ ಗಂಡಿನೊಂದಿಗೆ ಬೀಗಿತಿ ಬರಲಿಲ್ಲ; ಬೀಗ ಮಾತ್ರ ಬಂದನು.
ಗಂಡ ಕುರುಡ, ಹೆಂಡತಿ ಕುರುಡಿ; ವರಸಾಮ್ಯ ಚೆನ್ನಾಗಿದೆ.

ಇಲ್ಲಿ ಬೀಗ, ಕುರುಡ ಎಂಬುವಕ್ಕೆ ಬೀಗಿತಿ, ಕುರುಡಿ ಎಂಬುವು ಸ್ತ್ರೀಲಿಂಗದ ರೂಪಗಳೆಂದು ಅವುಗಳಿಗೆ ಹತ್ತಿರುವ ಪ್ರತ್ಯಯಗಳಿಂದ ಗೊತ್ತಾಗುತ್ತದೆ.

ಬೀಗ+ಇತಿ=ಬೀಗಿತಿ, ಕುರುಡ+ಇ=ಕುರುಡಿ.

ಹೀಗೆ ಪುಲ್ಲಿಂಗದ ಪ್ರಕೃತಿಗಳಿಗೆ ಹತ್ತಿ ಸ್ತ್ರೀಲಿಂಗದ ರೂಪಗಳನ್ನು ಸಿದ್ಧಪಡಿಸುವ ಪ್ರತ್ಯಯಗಳಿಗೆ ಸ್ತ್ರೀವಾಚಕ ಪ್ರತ್ಯಯಗಳೆಂದು ಹೆಸರು. ಅವುಗಳಲ್ಲಿ ಮುಖ್ಯವಾದುವನ್ನು ಕೆಳಗೆ ಹೇಳಿದೆ.

(೧)-ಇತಿ

ಬೀಗ+ಇತಿ=ಬೀಗಿತಿ

ಬ್ರಾಹ್ಮಣ+ಇತಿ=ಬ್ರಾಹ್ಮಣಿತಿ

ಇದರಂತೆಯೇ, ಗೌಡ-ಗೌಡಿತಿ, ಬೇಡ-ಬೇಡಿತಿ, ಅರಸ-ಅರಸಿತಿ, ಇತ್ಯಾದಿ.

(೨)-ಇತ್ತಿ.

ಒಕ್ಕಲಿಗ+ಇತ್ತಿ=ಒಕ್ಕಲಿಗಿತ್ತಿ

ಗಾಣಿಗ+ಇತ್ತಿ=ಗಾಣಿಗಿತ್ತಿ

ಇದರಂತೆಯೇ, ಹೂವಾಡಿಗ—ಹೂವಾಡಿಗಿತ್ತಿ.

(೩)-ಗಿತ್ತಿ.

ಅಗಸ+ಗಿತ್ತಿ=ಅಗಸಗಿತ್ತಿ

ಬೆಸ್ತ+ಗಿತ್ತಿ=ಬೆಸ್ತಗಿತ್ತಿ

(೪)-ಎ.

ಜಾಣ+ಎ=ಜಾಣೆ

ನಲ್ಲ+ಎ=ನಲ್ಲೆ

ಇದರಂತೆಯೇ, ಹೆಡ್ಡ-ಹೆಡ್ಡೆ, ದಡ್ಡ-ದಡ್ಡೆ, ಗುಣವಂತ-ಗುಣವಂತೆ, ಇತ್ಯಾದಿ.

(೫)-ಇ.

ಕುರುಡ+ಇ=ಕುರುಡಿ

ಮುದುಕ+ಇ=ಮುದುಕಿ

ಇದರಂತೆಯೇ, ಹುಡುಗ-ಹುಡುಗಿ, ಮೂಗ-ಮೂಗಿ, ಅರಸ-ಅರಸಿ, ಇತ್ಯಾದಿ.

(೬)-ಅಳು

ಮಗ+ಅಳು=ಮಗಳು

ನಲ್ಲ+ಅಳು=ನಲ್ಲಳು

೮. ಸ್ತ್ರೀವಾಚಕ ಪ್ರತ್ಯಯವು ಸೇರುವಾಗ ಕೆಲವು ಪುಲ್ಲಿಂಗ ಪ್ರಕೃತಿಗಳ ಕೊನೆಯಲ್ಲಿ ವ್ಯತ್ಯಾಸಗಳಾಗುವುದೂ ಉಂಟು.

ಉದಾಹರಣೆ.

| ಪುಲ್ಲಿಂಗ | ಸ್ತ್ರೀಲಿಂಗ |
|---|---|
| ಮಾಟಗಾರ | ಮಾಟಗಾತಿ |
| ಸೊಗಸುಗಾರ | ಸೊಗಸುಗಾತಿ |
| ಗೆಳೆಯ | ಗೆಳತಿ |
| ಹೊಲೆಯ | ಹೊಲತಿ ಇತ್ಯಾದಿ. |

೯. ಅರಸ-ಅರಸಿತಿ, ಅರಸಿ ; ನಲ್ಲ-ನಲ್ಲೆ, ನಲ್ಲಳು ; ಹೀಗೆ ಒಂದು ಪುಲ್ಲಿಂಗಪ್ರಕೃತಿಗೆ ಬೇರೆ ಬೇರೆ ಪ್ರತ್ಯಯಗಳು ಹತ್ತಿ, ಒಂದಕ್ಕಿಂತ ಹೆಚ್ಚಾಗಿ ಸ್ತ್ರೀಲಿಂಗ ರೂಪಗಳಾಗಿರುವುದನ್ನು ಗಮನಿಸಿ.

೧೦. ಪ್ರಾಣಿಗಳ ಹೆಸರನ್ನು ಹೇಳುವ ನಪುಂಸಕಲಿಂಗದ ನಾಮಪದಗಳಲ್ಲಿ ಗಂಡು, ಹೆಣ್ಣು ಎಂಬ ಭೇದವನ್ನು ತೋರಿಸಬೇಕಾದಾಗ ಪ್ರಕೃತಿಯ ಹಿಂದೆ ಗಂಡು, ಹೆಣ್ಣು ಎಂಬ ಶಬ್ದಗಳನ್ನು ಸೇರಿಸುವುದುಂಟು

ಉದಾಹರಣೆ.

ಗಂಡು ಗಿಳಿ, ಹೆಣ್ಣುಗಿಳಿ ; ಗಂಡಾನೆ, ಹೆಣ್ಣಾನೆ ;
ಗಂಡು ಮಗು, ಹೆಣ್ಣುಮಗು.

೧೧. ಆದರೆ ಈ ಹೊಸ ರೂಪದಲ್ಲಿಯೂ ಪದಗಳು ನಪುಂಸಕ ಲಿಂಗದಲ್ಲಿಯೇ ಉಳಿಯುತ್ತವೆ.

ಉದಾಹರಣೆ.

ಎರಡು ಹೆಣ್ಣಾನೆಗಳ ನಡುವೆ ಒಂದು ಗಂಡಾನೆ ಹೋಗುತ್ತಿದೆ.
ಈ ಹೆಣ್ಣು ಗಿಳಿ 'ರಾಮ' ಎಂದು ಎರಡು ಅಕ್ಷರಗಳನ್ನು ಮಾತ್ರ ಕಲಿತಿದೆ.
ಆ ದೊರೆಗೆ ಮುಪ್ಪಿನಲ್ಲಿ ಒಂದು ಗಂಡುಮಗು ಹುಟ್ಟಿತು.

## ವಚನ

೧೨. ನಾವು ಒಂದು ವಸ್ತುವಿನ ವಿಚಾರವಾಗಿ ಮಾತಾಡಬಹುದು; ಅಥವಾ ಒಂದಕ್ಕಿಂತ ಹೆಚ್ಚಾದ ವಸ್ತುಗಳ ವಿಚಾರವಾಗಿ ಮಾತಾಡಬಹುದು. ಕೆಳಗಿನ ವಾಕ್ಯಗಳನ್ನು ನೋಡಿ ;

೧. ರಂಗಪ್ಪನ ಮನೆ ಊರ ಹೊರಗಿದೆ.
೨. ಈ ಬೀದಿಯ ಮನೆಗಳು ನೋಡುವುದಕ್ಕೆ ಅಂದವಾಗಿವೆ.

ಮೊದಲನೆಯ ವಾಕ್ಯದಲ್ಲಿ **ಒಂದು** ಮನೆಯ ವಿಷಯವನ್ನೂ, ಎರಡನೆಯದರಲ್ಲಿ **ಹಲವು** ಮನೆಗಳ ವಿಷಯವನ್ನೂ ಹೇಳಿದೆ. 'ಮನೆ' ಎಂಬುದು ನಾಮವಾಚಕದ ಪ್ರಕೃತಿರೂಪ; ವಸ್ತು ಒಂದು ಎಂಬುದನ್ನೂ ಈ ಪ್ರಕೃತಿ ರೂಪವು ತಿಳಿಸುತ್ತದೆ. 'ಮನೆಗಳು' ಎಂಬುದರಲ್ಲಿ 'ಮನೆ' ಎಂಬ ಪ್ರಕೃತಿಗೆ 'ಗಳು' ಎಂಬ ಪ್ರತ್ಯಯವು ಸೇರಿ ಈ ಜಾತಿಯ ವಸ್ತುಗಳ ಸಂಖ್ಯೆ ಒಂದಕ್ಕಿಂತ ಹೆಚ್ಚು ಎಂಬುದನ್ನು ತಿಳಿಸುತ್ತದೆ. ಹೀಗೆ ಶಬ್ದರೂಪವು ಒಂದು ವಸ್ತುವನ್ನು ಹೇಳುವುದಕ್ಕೆ **ಏಕವಚನವೆಂದೂ**, ಒಂದಕ್ಕಿಂತ ಹೆಚ್ಚಾದ ವಸ್ತುಗಳನ್ನು ಹೇಳುವುದಕ್ಕೆ **ಬಹುವಚನವೆಂದೂ** ಹೆಸರು. ಬಹುವಚನವನ್ನು ಸೂಚಿಸುವುದಕ್ಕಾಗಿ ಸೇರುವ ಪ್ರತ್ಯಯಕ್ಕೆ **ಬಹುವಚನ ಪ್ರತ್ಯಯವೆಂದು** ಹೆಸರು.

೧೩. ವಸ್ತುಗಳನ್ನಾಗಲಿ ವಿಷಯಗಳನ್ನಾಗಲಿ ಒಂದು, ಹಲವು ಎಂದು ಎಲ್ಲೆಲ್ಲಿ ಎಣಿಕೆಮಾಡಿ ಹೇಳಬಹುದೋ ಅಲ್ಲೆಲ್ಲಾ ನಾಮಪದಗಳಿಗೆ ಏಕವಚನ ಬಹುವಚನಗಳೆರಡೂ ಉಂಟು.

ಉದಾಹರಣೆ.

ಕಣ್ಣು—ಕಣ್ಣುಗಳು, ಮರ—ಮರಗಳು ; ಅಗಸ—ಅಗಸರು,
ಹುಡುಗಿ—ಹುಡುಗಿಯರು, ಅಣ್ಣ—ಅಣ್ಣಂದಿರು, ಇತ್ಯಾದಿ.

೧೪. ಆದರೆ ಬಿಸಿಲು, ಕತ್ತಲೆ, ಮೇಲು, ಕೆಳಗು, ಬಿಳುಪು, ಜಾಣತನ, ತಿಳಿವಳಿಕೆ, ಗೌರವ ಮೊದಲಾದುವು ಹೀಗೆ ಎಣಿಕೆಗೆ ಸಿಕ್ಕುವುದಿಲ್ಲ. ಆದ್ದರಿಂದ ಅವು ಯಾವಾಗಲೂ ಏಕವಚನದಲ್ಲಿಯೇ ಇರುತ್ತವೆ. ಇವಕ್ಕೆ ಬಹುವಚನ ಪ್ರತ್ಯಯಗಳು ಹತ್ತುವುದಿಲ್ಲ.

೧೫. ಮೇಲೆ ಕೊಟ್ಟಿರುವ ಕಣ್ಣು, ಅಗಸ ಮೊದಲಾದ ಶಬ್ದಗಳ ಬಹುವಚನದ ರೂಪಗಳನ್ನು ಮತ್ತೆ ನೋಡಿ. —ಗಳು ಎಂಬುದು ಮಾತ್ರವಲ್ಲದೆ ಇನ್ನೂ ಬೇರೆ ಬಹುವಚನಪ್ರತ್ಯಯಗಳಿರುವುದು ಗೊತ್ತಾಗುತ್ತದೆ. ಈ ಪ್ರತ್ಯಯಗಳು ಯಾವುವು, ಯಾವ ಬಗೆಯ ಶಬ್ದಗಳಿಗೆ ಹತ್ತುತ್ತವೆ ಎಂಬುದನ್ನು ಕೆಳಗೆ ಹೇಳಿದೆ.

(೧) —**ಅರು** : ಪುಲ್ಲಿಂಗ ಸ್ತ್ರೀಲಿಂಗ ಪ್ರಕೃತಿಗಳ ಮೇಲೆ ಬಲುಮಟ್ಟಿಗೆ—ಅರು ಎಂಬ ಪ್ರತ್ಯಯ ಹತ್ತುತ್ತದೆ.

ಉದಾಹರಣೆ.

ಗಂಡಸರು ಒಂದು ಪಕ್ಕಕ್ಕೂ ಹೆಂಗಸರು ಒಂದು ಪಕ್ಕಕ್ಕೂ ನಿಂತುಕೊಳ್ಳಿ
(ಗಂಡಸು+ಅರು, ಹೆಂಗಸು+ಅರು ; ಲೋಪಸಂಧಿ)
ಮುದುಕರು ಮಾತಾಡುವುದು ಹೆಚ್ಚು. (ಮುದುಕ+ಅರು ; ಲೋಪಸಂಧಿ)
ಗೆಳತಿಯರು ಸೇರಿಕೊಂಡು ಉದ್ಯಾನಕ್ಕೆ ಹೋದರು.
(ಗೆಳತಿ+ಅರು ; ಆಗಮ ಸಂಧಿ)
ನಮ್ಮ ದೇಶದ ಸ್ತ್ರೀಯರು ಚೆನ್ನಾಗಿ ವಿದ್ಯೆಯನ್ನು ಕಲಿಯಬೇಕು.
(ಸ್ತ್ರೀ+ಅರು ; ಆಗಮ ಸಂಧಿ)
ನೀವು ಮಾತಿನಲ್ಲಿ ಮಾತ್ರ ಜಾಣೆಯರು.
(ಜಾಣೆ+ಅರು ; ಆಗಮ ಸಂಧಿ)
ಹೀಗೆಯೇ, ಅರಸ—ಅರಸರು, ಗೆಳೆಯ—ಗೆಳೆಯರು, ಆಟಗಾರ—ಆಟಗಾರರು. ಮುದುಕಿ—ಮುದುಕಿಯರು, ಅತ್ತೆ—ಅತ್ತೆಯರು, ಸೊಸೆ—ಸೊಸೆಯರು, ಇತ್ಯಾದಿ.

ಮೇಲೆ ಕೊಟ್ಟಿರುವ ಬಹುವಚನ ರೂಪಗಳನ್ನು ಮತ್ತೊಂದು ಸಲ ನೋಡಿ ; ಪ್ರಕೃತಿಯ ಕೊನೆಯಲ್ಲಿ ಅಕಾರವಾಗಲಿ ಉಕಾರವಾಗಲಿ ಇದ್ದರೆ ಲೋಪಸಂಧಿಯೂ, ಮಿಕ್ಕ ಕಡೆಗಳಲ್ಲಿ ಆಗಮಸಂಧಿಯೂ ಆಗಿದೆ.

(೨) –ಅಂದಿರು: ನಂಟರನ್ನು ಹೇಳುವ ಅಣ್ಣ, ಅಕ್ಕ, ತಮ್ಮ, ಮಾವ, ಭಾವ ಮೊದಲಾದ ಅಕಾರಾಂತ ಪ್ರಕೃತಿಗಳಿಗೆ—ಅಂದಿರು ಎಂಬ ಪ್ರತ್ಯಯವು ಹತ್ತುತ್ತದೆ.

ಉದಾಹರಣೆ.

ನಿನಗೆ ಅಣ್ಣಂದಿರು ಎಷ್ಟು ಜನ? (ಅಣ್ಣ+ಅಂದಿರು: ಲೋಪಸಂಧಿ)
ದ್ರೌಪದಿಗೆ ಐದು ಮಂದಿ ಗಂಡಂದಿರು ಇದ್ದರು. (ಗಂಡ+ಅಂದಿರು)
ಹೀಗೆಯೇ, ಅಕ್ಕ_ಅಕ್ಕಂದಿರು, ತಮ್ಮ_ತಮ್ಮಂದಿರು, ಇತ್ಯಾದಿ.

(೩) –ಗಳು: (ಅ) ಅಕಾರಾಂತವಲ್ಲದ ಪುಲ್ಲಿಂಗ ಸ್ತ್ರೀಲಿಂಗ ಪ್ರಕೃತಿಗಳಲ್ಲಿ ಹಲವಕ್ಕೆ –ಗಳು ಎಂಬ ಪ್ರತ್ಯಯವು ಸೇರುತ್ತದೆ.

ಉದಾಹರಣೆ.

ವಸಿಷ್ಠ ವಿಶ್ವಾಮಿತ್ರರು ಪ್ರಖ್ಯಾತರಾದ ಋಷಿಗಳು. (ಋಷಿ+ಗಳು)
ದೊರೆಗಳು ಧರ್ಮದಿಂದ ರಾಜ್ಯವನ್ನು ಆಳಬೇಕು (ದೊರೆ+ಗಳು)
ಹೀಗೆಯೇ, ಮುನಿ–ಮುನಿಗಳು, ಗುರು–ಗುರುಗಳು, ಹೆಣ್ಣು–ಹೆಣ್ಣುಗಳು, ತಂದೆ–ತಂದೆಗಳು.

(ಆ) ನಪುಂಸಕಲಿಂಗದ ಪ್ರಕೃತಿಗಳಿಗೆಲ್ಲ–ಗಳು ಸೇರುತ್ತದೆ.

ಉದಾಹರಣೆ.

ಈ ಕಾಡಿನಲ್ಲಿ ಮರಗಳು ಸೂರ್ಯರಶ್ಮಿಯೇ ನೆಲಕ್ಕೆ ಬೀಳವಷ್ಟು ದಟ್ಟವಾಗಿ ಬೆಳೆದಿವೆ. (ಮರ+ಗಳು)
ಹಸುಗಳು, ಎಮ್ಮೆಗಳು, ಎತ್ತುಗಳು, ಕೋಣಗಳು—ಇವೆಲ್ಲ ರೈತರಿಗೆ ತುಂಬ ಉಪಯೋಗಕರವಾದ ಪ್ರಾಣಿಗಳು.
(ಹಸು+ಗಳು, ಎಮ್ಮೆ+ಗಳು), ಇತ್ಯಾದಿ
ಕರಗದ ದಿನ ಬೆಂಗಳೂರಿನಲ್ಲಿ ಹಲವು ದೇವತೆಗಳು ಉತ್ಸವ ಹೊರಡುತ್ತವೆ. (ದೇವತೆ+ಗಳು).
ಹೀಗೆಯೇ, ಕೊಳ—ಕೊಳಗಳು, ಹುಲಿ—ಹುಲಿಗಳು, ಹಳ್ಳಿ—ಹಳ್ಳಿಗಳು, ಕಲ್ಲು—ಕಲ್ಲುಗಳು, ಕೆರೆ—ಕೆರೆಗಳು, ಇತ್ಯಾದಿ.

(ಇ) –ಅರು ಎಂಬ ಬಹುವಚನ ಪ್ರತ್ಯಯವು ಆಗಲೇ ಹತ್ತಿರುವ ರೂಪದಮೇಲೂ –ಗಳು ಎಂಬುದು ಹತ್ತುವುದುಂಟು.

ಉದಾಹರಣೆ.

ಆ ರಾಜನ ಆಸ್ಥಾನವನ್ನು ಹಲವು ಮಂದಿ ವಿದ್ವಾಂಸರುಗಳು ಅಲಂಕರಿಸಿದ್ದರು. (ವಿದ್ವಾಂಸ+ಅರು+ಗಳು)
ಹೀಗೆಯೇ, ರಾಜರುಗಳು.

೧೭. ಮಗ (ಪುಲ್ಲಿಂಗ), ಮಗಳು (ಸ್ತ್ರೀಲಿಂಗ), ಮಗು (ನಪುಂಸಕಲಿಂಗ)—ಈ ಮೂರು ಪ್ರಕೃತಿಗಳಿಗೂ ಬಹುವಚನದಲ್ಲಿ 'ಮಕ್ಕಳು' ಎಂಬ ಒಂದೇ ರೂಪವುಂಟು.

ಉದಾಹರಣೆ.

ದಶರಥನ ಮಕ್ಕಳು ದಿನದಿನಕ್ಕೆ ಬೆಳೆಯುತ್ತಿದ್ದರು. (ಪುಲ್ಲಿಂಗ)
ರಂಗಯ್ಯನಿಗೆ ಗೌರಿ, ಶಾರದೆ ಎಂಬ ಇಬ್ಬರು ಮಕ್ಕಳು ಇದ್ದಾರೆ. (ಸ್ತ್ರೀಲಿಂಗ)
ನೋಡು, ಆ ಚಿತ್ರದಲ್ಲಿರುವ ಮಕ್ಕಳು ಎಷ್ಟು ಮುದ್ದಾಗಿವೆ. (ನಪುಂಸಕ ಲಿಂಗ)

೧೮. 'ಜನ,' ಎಂಬ ಪ್ರಕೃತಿಗೆ ಬಹುವಚನದಲ್ಲಿ, 'ಜನರು,' 'ಜನಗಳು,' 'ಜನ' ಎಂಬ ಮೂರು ರೂಪಗಳುಂಟು.

ಉದಾಹರಣೆ.

ಈ ಊರಿನ ಜನರು ಸಭ್ಯರು.
ಜನಗಳು ಮೆಚ್ಚಲಿ ಎಂದು ಬೂಟಾಟಿಕೆಯ ಧರ್ಮವನ್ನು ಮಾಡಬಹುದೆ ?
ನಿನ್ನೆಯ ಸಂಜೆ ನಡೆದ ಸಭೆಗೆ ಜನ ಬಂದಿದ್ದರೇ ?

೧೮. 'ಜನ' ಎಂಬುದು ನಪುಂಸಕಲಿಂಗವಾದಾಗ ಅದು ಏಕವಚನದಲ್ಲಿಯೇ ಇರುತ್ತದೆ.

ಉದಾಹರಣೆ.

ನಿನ್ನೆಯ ಸಂಜೆ ನಡೆದ ಸಭೆಗೆ ಜನ ಬಂದಿತ್ತೋ ?

೧೯. ಏಕವಚನದ ರೂಪವು ಒಂದು ವಸ್ತುವನ್ನೂ ಬಹುವಚನದ ರೂಪವು ಒಂದಕ್ಕಿಂತ ಹೆಚ್ಚಾದ ವಸ್ತುಗಳನ್ನೂ ಸೂಚಿಸುತ್ತವೆಂದು ಆಗಲೆ ನೋಡಿದೆವಷ್ಟೆ: ಕೆಲವು ವಿಶೇಷ ಸಂದರ್ಭಗಳಿಗೆ ಈ ಮಾತು ಅನ್ವಯಿಸುವುದಿಲ್ಲ. ಕೆಳಗಿನ ವಾಕ್ಯಗಳನ್ನು ನೋಡಿ :

ಸ್ವಾಮಿಗಳು ದಯಮಾಡಿಸುತ್ತಿದ್ದಾರೆ; ಗದ್ದಲವನ್ನು ನಿಲ್ಲಿಸಿ.
ಏನು ರಾಯರೇ, ನೀವೂ ತಿರುಪಕ್ಕೆ ಬಂದಿರಾ ?
ತಾವು ಮಹನೀಯರು; ತಮಗೆ ನನ್ನ ಸಹವಾಸ ಬೇಡ.

ಇಲ್ಲಿ ಸ್ವಾಮಿ, ರಾಯ, ಮಹನೀಯ ಎಂಬ ಶಬ್ದಗಳಿಗೆ ಬಹುವಚನ ಪ್ರತ್ಯಯ ಹತ್ತಿದ ರೂಪಗಳು ಬಂದಿದ್ದರೂ ಅವು ನಿಜವಾಗಿ ಒಬ್ಬೊಬ್ಬರನ್ನೇ ಹೇಳುತ್ತವೆಂಬುದು ವಾಕ್ಯಗಳ ಅರ್ಥದಿಂದ ಸ್ಪಷ್ಟವಾಗುತ್ತದೆ. ಮೊದಲನೆಯ ವಾಕ್ಯದಲ್ಲಿ ಗೌರವವನ್ನೂ, ಎರಡನೆಯದರಲ್ಲಿ ಹಾಸ್ಯವನ್ನೂ, ಮೂರ

ನೆಯದರಲ್ಲಿ ನಿಂದೆಯನ್ನೂ ಸೂಚಿಸುವುದಕ್ಕಾಗಿ ಏಕವಚನದ ಅರ್ಥದಲ್ಲಿ ಬಹುವಚನದ ರೂಪವು ಬಂದಿದೆ.

೨೦. ಗೌರವವನ್ನು ತೋರಿಸುವುದಕ್ಕಾಗಿ ಪುಲ್ಲಿಂಗ, ಸ್ತ್ರೀಲಿಂಗಗಳ ಕೆಲವು ಶಬ್ದರೂಪಗಳಮೇಲೆ 'ಅವರು' ಎಂಬ ಶಬ್ದವನ್ನು ಹತ್ತಿಸಿ ಪ್ರಯೋಗಿಸುವುದೂ ಉಂಟು.

ಉದಾಹರಣೆ.

ಇದು ಪೂರ್ಣಯ್ಯನವರು ಕಟ್ಟಿಸಿದ ಧರ್ಮಶಾಲೆ.

ಸೀತಮ್ಮನವರು ಊರಿಗೆ ಬಂದರೆ?

(ಈ ಎರಡು ಕಡೆಗಳಲ್ಲೂ ಏಕವಚನದ ರೂಪದಮೇಲೆ 'ಅವರು' ಎಂಬುದು ಸೇರಿದೆ.)

೨೧. ಈ ಎರಡು ವಾಕ್ಯಗಳನ್ನು ಹೋಲಿಸಿ:

ನಿನಗೆ ಅಣ್ಣಂದಿರು ಎಷ್ಟು ಜನ?

ನಮ್ಮ ಅಣ್ಣನವರು ಮದರಾಸಿನಲ್ಲಿದ್ದಾರೆ.

ಇಲ್ಲಿ 'ಅಣ್ಣಂದಿರು' ಎಂಬ ರೂಪ ಒಂದಕ್ಕಿಂತ ಹೆಚ್ಚು ಮಂದಿಯನ್ನು ಹೇಳುತ್ತದೆ; 'ಅಣ್ಣನವರು' ಎಂಬುದು ಒಬ್ಬ ವ್ಯಕ್ತಿಯನ್ನೇ ಗೌರವದೊಡನೆ ಸೂಚಿಸುತ್ತದೆ.

---

## ಎಂಟನೆಯ ಅಧ್ಯಾಯ

### ಲಿಂಗವಚನಗಳು : ಮಿಕ್ಕ ನಾಮಪದಗಳು.

### ೧. ಗುಣವಾಚಕ

೧. ಹಿಂದಿನ ಅಧ್ಯಾಯದಲ್ಲಿ ಲಿಂಗವಚನಗಳ ವಿಚಾರವನ್ನು ಹೇಳುವಾಗ ನಾಮವಾಚಕಗಳಿಗೆ ಉಂಟಾಗುವ ರೂಪಭೇದಗಳನ್ನು ಮಾತ್ರ ತಿಳಿಸಿದೆವು. ನಾಮಪದದ ಮಿಕ್ಕ ಬಗೆಗಳಾದ ಗುಣವಾಚಕ, ಸಂಖ್ಯಾವಾಚಕ, ಸರ್ವನಾಮಗಳಲ್ಲಿ ಲಿಂಗವಚನಗಳನ್ನು ತೋರಿಸುವ ರೂಪಗಳನ್ನು ಈಗ ಗಮನಿಸಬೇಕಾಗಿದೆ.

ಇವುಗಳಲ್ಲಿ ಮೊದಲು ಗುಣವಾಚಕಗಳನ್ನು ತೆಗೆದುಕೊಳ್ಳೋಣ.

೨. ಕೆಳಗಿನ ವಾಕ್ಯಗಳನ್ನು ನೋಡಿ ;

(ಅ) ಇಷ್ಟು ಚಿಕ್ಕವನು ತೆಂಗಿನ ಮರವನ್ನು ಹೇಗೆ ಹತ್ತಿದನು ?

(ಆ) ಸೀತೆ ತುಂಬ ಚಿಕ್ಕವಳು ; ಅವಳಿಗೆ ಸರಿಯಾಗಿ ಮಾತಾಡುವುದಕ್ಕೇ ಬಾರದು.

(ಇ) ಇಲ್ಲ ದೊಡ್ಡವರು, ಚಿಕ್ಕವರು ಎಂಬ ಭೇದ ಮಾಡಬೇಡ.

(ಈ) ಈ ಪೆಟ್ಟಿಗೆ ಚಿಕ್ಕದು ; ನನ್ನ ಬಟ್ಟೆಗಳೆಲ್ಲಾ ಹಿಡಿಯುವುದಿಲ್ಲ.

(ಉ) ಆನೆಯ ಕಣ್ಣುಗಳು ತುಂಬ ಚಿಕ್ಕವು.

ಮೇಲ್ಗೆ ದೊಡ್ಡ ಅಕ್ಷರಗಳಲ್ಲಿ ಕೊಟ್ಟಿರುವ ಗುಣವಾಚಕ ರೂಪಗಳನ್ನು ಹೀಗೆ ವಿಂಗಡಿಸಬಹುದು.

| | ಏಕವಚನ | ಬಹುವಚನ |
|---|---|---|
| ಪುಲ್ಲಿಂಗ : | ಚಿಕ್ಕವನು | ಚಿಕ್ಕವರು |
| ಸ್ತ್ರೀಲಿಂಗ : | ಚಿಕ್ಕವಳು | |
| ನಪುಂಸಕ ಲಿಂಗ : | ಚಿಕ್ಕದು | ಚಿಕ್ಕವು. |

ಇಲ್ಲಿರುವುದು ಒಂದೇ ಗುಣವಾಚಕ ; ಇದಕ್ಕೆ ಲಿಂಗವಚನಗಳಿಗೆ ಅನುಸಾರವಾಗಿ ಬೇರೆ ಬೇರೆ ರೂಪಗಳು ಬಂದಿವೆ. ಪುಲ್ಲಿಂಗ ಸ್ತ್ರೀಲಿಂಗಗಳೆರಡಕ್ಕೂ ಬಹುವಚನದಲ್ಲಿ ಒಂದೇ ರೂಪವೆಂಬದನ್ನು ಗಮನಿಸಿ. ಇದನ್ನು 'ಪುಂಸ್ತ್ರೀ ಬಹುವಚನ' ವೆಂದು ಕರೆಯುತ್ತಾರೆ.

೩. ಈಗ ಕೆಳಗಿನ ವಾಕ್ಯಗಳನ್ನು ನೋಡಿ :

(ಅ) ಈ ಚಿಕ್ಕ ಹುಡುಗನು ಪಾಠವನ್ನು ಓದುತ್ತಾನೆ.

(ಆ) ಎಲೇ ಚಿಕ್ಕ ಹುಡುಗಿ, ಮಿಠಾಯಿ ತೆಗೆದುಕೋ.

(ಇ) ಇಲ್ಲಿ ಚಿಕ್ಕ ಮಕ್ಕಳಿಗೆ ಹಾಲನ್ನು ಕೊಡುತ್ತಾರೆ.

(ಈ) ಈ ಹಲಸಿನ ಕಾಯಿಗೆ ಒಂದು ಚಿಕ್ಕ ಕಾಸನ್ನೂ ನಾನು ಹೆಚ್ಚಾಗಿ ಕೊಡುವುದಿಲ್ಲ.

(ಉ) ಚಿಕ್ಕ ಹಳ್ಳಿಗಳಲ್ಲಿ ಕೂಡ ಪಾಠಶಾಲೆಗಳಿರಬೇಕು.

ಈ ಐದು ವಾಕ್ಯಗಳಲ್ಲೂ ಕ್ರಮವಾಗಿ ಪುಲ್ಲಿಂಗ ಏಕವಚನ, ಸ್ತ್ರೀಲಿಂಗ ಏಕವಚನ, ಪುಂಸ್ತ್ರೀ ಬಹುವಚನ, ನಪುಂಸಕ ಏಕವಚನ, ನಪುಂಸಕ ಬಹುವಚನ—ಇವುಗಳಲ್ಲಿರುವ ಪದಗಳಿಗೆ 'ಚಿಕ್ಕ' ಎಂಬ ಶಬ್ದವು ವಿಶೇಷಣವಾಗಿ ಆ ಪದಗಳ ಹಿಂದೆ ಬಂದಿದೆ. ವಿಶೇಷ್ಯಗಳ ಲಿಂಗ, ವಚನ ಮೊದಲಾದುವು ವಾಕ್ಯವಾಕ್ಯದಲ್ಲೂ ವ್ಯತ್ಯಾಸವಾಗಿದ್ದರೂ 'ಚಿಕ್ಕ' ಎಂಬ ವಿಶೇಷಣದ ರೂಪ ಮಾತ್ರ ವ್ಯತ್ಯಾಸಹೊಂದಿಲ್ಲ.

೪. ನಾವು ಹಿಂದೆ ನೋಡಿದ 'ಚಿಕ್ಕವನು, ಚಿಕ್ಕವಳು, ಚಿಕ್ಕವರು, ಚಿಕ್ಕದು, ಚಿಕ್ಕವು' ಎಂಬ ಐದೂ ಗುಣವಾಚಕಗಳು ; ಈಗ ನೋಡಿದ 'ಚಿಕ್ಕ' ಎಂಬುದೂ ಅದೇ ಅರ್ಥವನ್ನು ಕೊಡುವ ಗುಣವಾಚಕ, ಆದರೆ ಇದಕ್ಕೂ ಮಿಕ್ಕ ಐದು ರೂಪಗಳಿಗೂ ಪ್ರಯೋಗದಲ್ಲಿ ಭೇದವಿದೆ. 'ಚಿಕ್ಕ' ಎಂಬುದು ವಾಕ್ಯದಲ್ಲಿ ಸ್ವತಂತ್ರವಾಗಿ ಬರುವುದಿಲ್ಲ; ಅದು ಯಾವುದಾದರೂ ಒಂದು ನಾಮಪದಕ್ಕೆ ವಿಶೇಷಣವಾಗಿ ಬರಬೇಕು. ಆದಕಾರಣ ಇದಕ್ಕೆ **ವಿಶೇಷಣರೂಪವೆಂದು** ಹೆಸರು. ಚಿಕ್ಕವನು, ಚಿಕ್ಕವಳು ಮೊದಲಾದ ರೂಪಗಳು ನಾಮವಾಚಕಗಳಂತೆ ವಾಕ್ಯದಲ್ಲಿ ಎಲ್ಲಿ ಬೇಕಾದರೂ ಸ್ವತಂತ್ರವಾಗಿ ಒಂದು ಕರ್ತೃಪದ, ಕರ್ಮಪದ ಮೊದಲಾದುವುಗಳಾಗಿ ನಿಲ್ಲಬಲ್ಲವು. ಇವಕ್ಕೆ **ಕಾರಕರೂಪಗಳೆಂದು** ಹೆಸರು. ಕೆಳಗಿನ ವಾಕ್ಯಗಳನ್ನು ನೋಡಿ :

ಅವರಿಬ್ಬರಲ್ಲಿ ಚಿಕ್ಕವನು ಇಲ್ಲಿ ನಿಂತಿದ್ದಾನೆ. (ಕರ್ತೃಪದ)
ಚಿಕ್ಕವರನ್ನು ದೊಡ್ಡವರು ಪ್ರೀತಿಯಿಂದ ನೋಡಿಕೊಳ್ಳಬೇಕು. (ಕರ್ಮಪದ)

೫. ಈಗ ಇನ್ನು ಕೆಲವು ಗುಣವಾಚಕಗಳ ಈ ಎರಡು ಬಗೆಯ ರೂಪಗಳನ್ನು ನೋಡಿ:

| ವಿಶೇಷಣರೂಪ | ಕಾರಕರೂಪಗಳು | | | | |
|---|---|---|---|---|---|
| ದೊಡ್ಡ : | ದೊಡ್ಡವನು, | ದೊಡ್ಡವಳು, | ದೊಡ್ಡವರು, | ದೊಡ್ಡದು, | ದೊಡ್ಡವು |
| ಸಣ್ಣ : | ಸಣ್ಣವನು, | ಸಣ್ಣವಳು | ಸಣ್ಣವರು, | ಸಣ್ಣದು, | ಸಣ್ಣವು. |
| ಎಳೆಯ : | ಎಳೆಯವನು, | ಎಳೆಯವಳು, | ಎಳೆಯವರು, | ಎಳೆಯದು, | ಎಳೆಯವು. |
| ಕರಿಯ : | ಕರಿಯವನು, | ಕರಿಯವಳು, | ಕರಿಯವರು, | ಕರಿಯದು, | ಕರಿಯವು. |
| ಬಿಳಿಯ : | ಬಿಳಿಯವನು, | ಬಿಳಿಯವಳು, | ಬಿಳಿಯವರು, | ಬಿಳಿಯದು, | ಬಿಳಿಯವು. |
| ಕಿರಿಯ : | ಕಿರಿಯವನು, | ಕಿರಿಯವಳು, | ಕಿರಿಯವರು, | ಕಿರಿಯದು, | ಕಿರಿಯವು. |
| ಹಿರಿಯ : | ಹಿರಿಯವನು, | ಹಿರಿಯವಳು, | ಹಿರಿಯವರು, | ಹಿರಿಯದು, | ಹಿರಿಯವು. |

೬. ಈ ಕಾರಕರೂಪಗಳನ್ನು ಬಿಡಿಸಿನೋಡಿ :

ಚಿಕ್ಕ + ಅವನು = ಚಿಕ್ಕವನು
ಚಿಕ್ಕ + ಅವಳು = ಚಿಕ್ಕವಳು
ಚಿಕ್ಕ + ಅದು = ಚಿಕ್ಕದು
ಚಿಕ್ಕ + ಅವರು = ಚಿಕ್ಕವರು
ಚಿಕ್ಕ + ಅವು = ಚಿಕ್ಕವು

ಹೀಗೆಯೇ—ದೊಡ್ಡ + ಅವನು = ದೊಡ್ಡವನು
ಎಳೆಯ + ಅವಳು = ಎಳೆಯವಳು
ಕರಿಯ + ಅವರು = ಕರಿಯವರು
ಬಿಳಿಯ + ಅದು ಬಿಳಿಯದು
ಹಿರಿಯ + ಅವು = ಹಿರಿಯವು, ಇತ್ಯಾದಿ

೭. ಈ ರೀತಿಯಾಗಿ, ಗುಣವಾಚಕಗಳಿಗೆ ವಿಶೇಷರೂಪ, ಕಾರಕ ರೂಪ ಎಂದು ಎರಡು ರೂಪಗಳುಂಟು. ವಿಶೇಷಣರೂಪವು ಲಿಂಗ, ವಚನ ಮೊದಲಾದುವುಗಳಲ್ಲಿ ಯಾವ ವ್ಯತ್ಯಾಸವನ್ನೂ ಹೊಂದದೆ ಒಂದೇ ರೂಪದಲ್ಲಿರುತ್ತದೆ. ಚಿಕ್ಕ, ದೊಡ್ಡ, ಎಳೆಯ, ಬಿಳಿಯ ಮೊದಲಾದುವು ಇಂಥ ವಿಶೇಷಣರೂಪಗಳು. ವಿಶೇಷಣರೂಪಕ್ಕೆ ಅವನು, ಅವಳು, ಅವರು, ಅದು, ಅವು ಎಂಬುವು ಸೇರಿದರೆ ಈ ಗುಣವಾಚಕಗಳ ಕಾರಕ ರೂಪಗಳಾಗುತ್ತವೆ. ಇವು ಲಿಂಗ, ವಚನ ಮೊದಲಾದುವುಗಳಲ್ಲಿ ಬೇರೆ ರೂಪಗಳನ್ನು ತಾಳಿ ನಾಮವಾಚಕಗಳಂತೆ ವಾಕ್ಯದಲ್ಲಿ ಪ್ರಯೋಗಹೊಂದುತ್ತವೆ. ಚಿಕ್ಕವನು, ದೊಡ್ಡವಳು, ಎಳೆಯವರು ಮೊದಲಾದುವು ಇಂಥ ಕಾರಕರೂಪಗಳು.

೮. ಈ ಕೆಳಗಿನ ವಾಕ್ಯಗಳನ್ನು ನೋಡಿ :

ಹಿರಿಯರು ಯಾವಾಗಲೂ ಒಳ್ಳೆಯದನ್ನು ಬಯಸುತ್ತಾರೆ.
ಈ ಮಾವಿನಹಣ್ಣು ಜಾತಿಯಲ್ಲಿ ಹಿರಿದು.
ನನಗಿಂತ ಕಿರಿಯನು ಇಲ್ಲಿ ಯಾರೂ ಇಲ್ಲ.
ಈ ಸೀರೆಯ ಅಂಚು ಕಿರಿದು

ಹಿರಿಯ, ಕಿರಿಯ, ಎಂಬ ಗುಣವಾಚಕಗಳಿಗೆ ಹಿರಿಯವನು, ಕಿರಿಯವನು ಮೊದಲಾದ ಕಾರಕರೂಪಗಳ ಜೊತೆಗೆ, ಹಿರಿಯನು, ಹಿರಿಯಳು ಹಿರಿಯರು, ಹಿರಿದು ; ಕಿರಿಯನು, ಕಿರಿಯಳು, ಕಿರಿಯರು, ಕಿರಿದು ಎಂಬ ಕಾರಕರೂಪಗಳೂ ಬಳಕೆಯಲ್ಲುಂಟು.

೯. ಹೊಸ, ಹಳೆಯ ಎಂಬ ಗುಣವಾಚಕಗಳ ಕಾರಕರೂಪಗಳು ಕೆಳಗೆ ತೋರಿಸುವಂತೆ ಆಗುತ್ತವೆ :

| ಹೊಸ : | | ಹಳೆಯ : | |
|---|---|---|---|
| ಹೊಸಬನು | ಹೊಸಬರು | ಹಳಬನು | ಹಳಬರು |
| ಹೊಸಬಳು | | ಹಳಬಳು | |
| ಹೊಸದು | ಹೊಸವು | ಹಳೆಯದು | ಹಳೆಯವು |

ಉದಾಹರಣೆ

ನಾವು ಈ ಊರಿಗೆ ಹೊಸಬರು ; ನಿಮ್ಮ ಮನೆ ಎಲ್ಲಿದೆಯೋ ತಿಳಿಸಬೇಕು.
ಈ ಓಲೆಗರಿಯ ಗ್ರಂಥ ತುಂಬ ಹಳೆಯದು.

೧೦. 'ಪ್ರಕಾರ' ವನ್ನು ತಿಳಿಸುವ ಗುಣವಾಚಕಗಳನ್ನು ಈಗ ನೋಡಿ. ಅಂಥ, ಇಂಥ, ಎಂಥ, ಎಂಬುವು ವಿಶೇಷಣರೂಪಗಳು.

ಉದಾಹರಣೆ.

ಅಂಥ ಶ್ರೀಮಂತನೂ ಮನೆಯಿಲ್ಲದೆ ಅಲೆಯುವ ಸ್ಥಿತಿಗೆ ಇಳಿದನು.
ನಾವು ಹಿಂದೆದೂ ಇಂಥ ಪ್ರವಾಹವನ್ನು ನೋಡಿರಲಿಲ್ಲ.
ಎಂಥ ಮರುಭೂಮಿಯಲ್ಲಾದರೂ ನೀರು ಉಂಟು; ಈ ಕಟುಕನ ಹೃದಯದಲ್ಲಿ ಮಾತ್ರ ದಯೆ ಇಲ್ಲ.

೧೧. ಈ ವಿಶೇಷಣರೂಪಗಳಿಗೆ ಅವನು, ಅವಳು, ಅವರು, ಅದು, ಅವು, ಎಂಬುವು ಸೇರಿದರೆ—ಅಂಥವನು, ಅಂಥವಳು, ಅಂಥವರು, ಅಂಥದು, ಅಂಥವು, ; ಇಂಥವನು, ಇಂಥವಳು ; ಎಂಥವನು, ಎಂಥವಳು; ಮೊದಲಾದ ಕಾರಕರೂಪಗಳಾಗುತ್ತವೆ.

ಉದಾಹರಣೆ.

ಅಂಥವರು ಮಾತಿನಲ್ಲಿ ಜೇನುತುಪ್ಪವನ್ನೂ ಮನಸ್ಸಿನಲ್ಲಿ ವಿಷವನ್ನೂ ಇಟ್ಟುಕೊಂಡಿರುತ್ತಾರೆ.
ಮನೆಗಳಲ್ಲಿ ಇಂಥದು ಕಟ್ಟುವುದಕ್ಕೂ ಸುಲಭವಾಗಿರುತ್ತದೆ; ವಾಸಕ್ಕೂ ಅನುಕೂಲವಾಗಿರುತ್ತದೆ;
ಎಂಥವನು ಯಾವ ಕಷ್ಟಕ್ಕೆ ಸಿಕ್ಕಿದನು.

೧೨. ಅಂಥ, ಇಂಥ, ಎಂಥ, ಮೊದಲಾದ ರೂಪಗಳಿಗೆ ಪ್ರತಿಯಾಗಿ ಕೆಲವರು ಅಂತಹ, ಇಂತಹ, ಎಂತಹ ಎಂಬ ರೂಪಗಳನ್ನು ಉಪಯೋಗಿಸುವುದುಂಟು.

೧೩. ಇನ್ನು 'ಪರಿಮಾಣ' ವನ್ನು ತಿಳಿಸುವ ಗುಣವಾಚಕಗಳ ರೂಪಗಳನ್ನು ನೋಡೋಣ.

**ಕೆಲವು, ಹಲವು :**

ಕೆಲವು, ಹಲವು ಎಂಬುವು ನಪುಂಸಕ ಬಹುವಚನದ ರೂಪಗಳು. ಪುಂಸ್ತ್ರೀ ಬಹುವಚನದಲ್ಲಿ ಇವಕ್ಕೆ ಕ್ರಮವಾಗಿ ಕೆಲವರು, ಹಲವರು, ಎಂಬ ರೂಪಗಳು ಬರುತ್ತವೆ. ಒಂದಕ್ಕಿಂತ ಹೆಚ್ಚು ಪರಿಮಾಣದ ವಸ್ತುಗಳನ್ನು ಇವು ತಿಳಿಸುವುದರಿಂದ ಇವಕ್ಕೆ ಏಕವಚನದ ರೂಪಗಳಿಲ್ಲ.

ಉದಾಹರಣೆ.

ಕೆಲವರು ಮಾತ್ರ ಸುಮ್ಮನಿದ್ದರು; ಹಲವರು ಅವನ ಮೇಲೆ ಬಿದ್ದರು.
ನಾನು ತಿಳಿಸಬೇಕೆಂದಿದ್ದ ಸಂಗತಿಗಳು ಈ ಕೆಲವು.
ಆತನ ಕಷ್ಟಗಳು ಹಲವು.

ಕೆಲವು, ಹಲವು ಎಂಬುವೇ ವಿಶೇಷಣ ರೂಪಗಳೂ ಆಗುತ್ತವೆ. ಇವು ಪುಲ್ಲಿಂಗ ಸ್ತ್ರೀಲಿಂಗ ಶಬ್ದಗಳಿಗೆ ವಿಶೇಷಣವಾದಾಗ 'ಮಂದಿ' 'ಜನ' ಎಂಬ ಪದಗಳೊಡನೆ ಕೂಡಿಸಿ ಹೇಳುತ್ತಾರೆ.

ಉದಾಹರಣೆ.

ಈ ವರ್ಷ ಕೆಲವು ದೇಶಗಳಿಗೆ ಮಾತ್ರ ಸೂರ್ಯಗ್ರಹಣವುಂಟು.
ಹಲವು ಪುಸ್ತಕಗಳಲ್ಲಿ ಚಿತ್ರಗಳಿರುವುದಿಲ್ಲ.
ಕೆಲವು ಮಂದಿ ಮೂರ್ಖರು ನನ್ನನ್ನು ಬೈದ ಮಾತ್ರಕ್ಕೆ ಏನಾಯಿತು ?
ಹಲವು ಜನ ಪಂಡಿತರು ಆ ಸಭೆಗೆ ಬಂದಿದ್ದರು.
ಕೆಲವರು ಮೂರ್ಖರು, ಹಲವರು ಪಂಡಿತರು—ಹೀಗೆ ಹೇಳುವುದೂ ಉಂಟು.

೧೪. ಎಲ್ಲ :

ಎಲ್ಲ ಎಂಬುದಕ್ಕೆ ಪುಂಸ್ತ್ರೀ ಬಹುವಚನದಲ್ಲಿ 'ಎಲ್ಲರು' ಎಂದೂ ನಪುಂಸಕ ಲಿಂಗದಲ್ಲಿ 'ಎಲ್ಲಾ' ಎಂದೂ ಕಾರಕರೂಪಗಳು.

ಉದಾಹರಣೆ.

ಎಲ್ಲರು ಹೇಳುವ ಬುದ್ಧಿವಾದವೂ ಇದೆ.
(ಪುಂಸ್ತ್ರೀ ಬಹುವಚನ)
ಮನೆ, ತೋಟ, ಹಣ, ಒಡವೆ—ಎಲ್ಲಾ ಹೋಯಿತು.
(ನಪುಂಸಕ ಏಕವಚನ)
ಗಂಡಿಲಿ, ಹೆಣ್ಣಿಲಿ, ಮುದುಕಿಲಿ, ಹುಡುಗಿಲಿ—ಎಲ್ಲಾ ಬಂದುವು ಓಡೋಡಿ. (ನಪುಂಸಕ ಬಹುವಚನ)

ಎಲ್ಲ, ಎಲ್ಲಾ ಎಂಬುವು ಲಿಂಗಭೇದವಿಲ್ಲದೆ ವಿಶೇಷಣಗಳಾಗುತ್ತವೆ.

ಉದಾಹರಣೆ.

ಎಲ್ಲ ಗಂಡಸರೂ ಹೆಂಗಸರೂ ಈ ಪ್ರಾರ್ಥನೆಗೆ ಕಿವಿಗೊಡಬೇಕು
ಅವನಿಗೆ ಎಲ್ಲಾ ಕಡೆಗಳಲ್ಲೂ ಸೋಲುಂಟಾಯಿತು.

೧೫. ಅಷ್ಟು, ಇಷ್ಟು, ಎಷ್ಟು ;

ಅಷ್ಟು, ಇಷ್ಟು, ಎಷ್ಟು ಎಂಬುವಕ್ಕೆ ವಿಶೇಷಣರೂಪವೂ ಕಾರಕ ರೂಪವೂ ಒಂದೇ ಆಗಿವೆ. ಕಾರಕರೂಪವಾದಾಗ ಇವಕ್ಕೆ ನಂಪುಂಸಕ ಏಕವಚನದಲ್ಲಿ ಮಾತ್ರ ಪ್ರಯೋಗವುಂಟು.

ಉದಾಹರಣೆ :

ವಿಶೇಷಣರೂಪಕ್ಕೆ :

ಅಷ್ಟು ಮಾತನ್ನು ಕೇಳಿದಮೇಲೆ ಯಾರುತಾನೆ ಮರುಳಾಗುವುದಿಲ್ಲ.
ಇಷ್ಟು ದಿನವೂ ನೀನು ಎಲ್ಲಿ ಹೋಗಿದ್ದೆ ?
ಈ ದಿನ ಎಷ್ಟು ಜನರು ಊಟಕ್ಕೆ ಬರುತ್ತಾರೆ ?

ಕಾರಕರೂಪಕ್ಕೆ:

ನನಗೆ ಅಷ್ಟು ಸಾಕು; ಇಷ್ಟು ಬಡಿಸಿದರೆ ಹೆಚ್ಚಾಗುತ್ತದೆ.
ವ್ಯಾಪಾರದಲ್ಲಿ ಅವನಿಗೆ ಬಂದ ಲಾಭವೆಷ್ಟು ?

ಪುಂಸ್ತ್ರೀ ಬಹುವಚನದಲ್ಲಿ ಅಷ್ಟರು, ಇಷ್ಟರು, ಎಷ್ಟರು ಎಂಬ ಕಾರಕರೂಪಗಳನ್ನು ಉಪಯೋಗಿಸುವುದುಂಟು.

ಉದಾಹರಣೆ:

ಈ ಬತ್ತಾಸುಗಳನ್ನು ಅಷ್ಟರೂ ಹಂಚಿಕೊಳ್ಳಲಿ.

## ೨. ಸಂಖ್ಯಾವಾಚಕ.

೧೬. ಗುಣವಾಚಕಗಳಲ್ಲಿರುವಂತೆ ಸಂಖ್ಯಾವಾಚಕಗಳಲ್ಲಿಯೂ ಕೆಲವಕ್ಕೆ ವಿಶೇಷಣರೂಪ ಕಾರಕರೂಪಗಳು ಬೇರೆ ಬೇರೆಯಾಗಿರುತ್ತವೆ. ಅವುಗಳಲ್ಲಿ ಮುಖ್ಯವಾದುವನ್ನು ಕೆಳಗೆ ಹೇಳಿದೆ.

೧೭. ಒಂದು, ಎರಡು, ಮೂರು, ನಾಲ್ಕು, ಹತ್ತು, ಇಪ್ಪತ್ತು, ನೂರು—ಇವೆಲ್ಲ ನಪುಂಸಕಲಿಂಗದಲ್ಲಿ ವಿಶೇಷಣರೂಪಗಳೂ ಕಾರಕರೂಪಗಳೂ ಆಗುತ್ತವೆ. ಇವುಗಳಲ್ಲಿ 'ಒಂದು' ಎಂಬುದು ಏಕವಚನದಲ್ಲಿ ಮಾತ್ರ ಇರುತ್ತದೆ; ಮಿಕ್ಕವು ಬಹುವಚನದಲ್ಲಿ ಮಾತ್ರ ಇರುತ್ತವೆ.

ಉದಾಹರಣೆ:

ಒಂದು:

ಒಂದು ಗುಬ್ಬಚ್ಚಿ ಬಂದು ಒಂದು ಕಾಳನ್ನು ತೆಗೆದುಕೊಂಡು ಹೋಯಿತು; ಇನ್ನೊಂದು ಗುಬ್ಬಚ್ಚಿ ಬಂದು ಇನ್ನೊಂದು ಕಾಳನ್ನು ತೆಗೆದುಕೊಂಡು ಹೋಯಿತು; ಮತ್ತೊಂದು ಗುಬ್ಬಚ್ಚಿಬಂದು ಮತ್ತೊಂದು ಕಾಳನ್ನು ತೆಗೆದುಕೊಂಡು ಹೋಯಿತು ಮಗುದೊಂದು ಗುಬ್ಬಚ್ಚಿ ಬಂದು. . . . . . .

(ಇಲ್ಲಿ 'ಒಂದು' ವಿಶೇಷಣರೂಪ)

ಆ ಮಕ್ಕಳಲ್ಲಿ ಒಂದು ಅವನ ಹೆಗಲಮೇಲೆ ಕುಳಿತುಕೊಂಡಿತು ; ಇನ್ನೊಂದು ಅವನ ಕೈ ಹಿಡಿದುಕೊಂಡು ನಡೆದು ಹೋಯಿತು

(ಇಲ್ಲಿ 'ಒಂದು' ಕಾರಕರೂಪ).

ಮಿಕ್ಕ ಸಂಖ್ಯಾವಾಚಕಗಳು .

ಎರಡು ಘಂಟೆ ಹೊಡೆದನೂ ಮದುವೆಯ ಮನೆಯಲ್ಲಿ ಊಟಕ್ಕೆ ಬಡಿಸಲಿಲ್ಲ. (ವಿಶೇಷಣರೂಪ)
ಆ ಸೇನೆಯಲ್ಲಿ ನೂರು ಆನೆಗಳೂ ಒಂಬಯ್ನೂರು ಕುದುರೆಗಳೂ ಇದ್ದುವು. (ವಿಶೇಷಣರೂಪಗಳು)
ಈ ಮಾವಿನ ಹಣ್ಣುಗಳಲ್ಲಿ ಮೂರು ಚೆನ್ನಾಗಿ ಕಳಿತಿವೆ ; ಉಳಿದ ಎರಡು ಇನ್ನೂ ಹುಳಿ. (ಕಾರಕರೂಪಗಳು)

೧೮. 'ಒಂದು' ಎಂಬ ಸಂಖ್ಯಾವಾಚಕಕ್ಕೆ ಪುಲ್ಲಿಂಗ ಏಕವಚನದಲ್ಲಿ ಒಬ್ಬ (ನು) ಎಂದೂ, ಸ್ತ್ರೀಲಿಂಗ ಏಕವಚನದಲ್ಲಿ ಒಬ್ಬಳು ಎಂದೂ ವಿಶೇಷಣರೂಪ ಕಾರಕರೂಪಗಳೆರಡೂ ಆಗುತ್ತವೆ.

ಉದಾಹರಣೆ.

ಒಬ್ಬನು ಹತ್ತಿದನು ಒಬ್ಬನು ಇಳಿದನು.
ಒಬ್ಬಳು ತಲೆಬಾಚುತ್ತಿದ್ದಳು, ಇನ್ನೊಬ್ಬಳು ಹೂವು ಕಟ್ಟುತ್ತಿದ್ದಳು
(ಕಾರಕರೂಪಗಳು)
ಕೃಷ್ಣಶೆಟ್ಟಿಗೆ ಒಬ್ಬ ಮಗನೂ, ಒಬ್ಬಳು ಮಗಳೂ ಇದ್ದಾರೆ.
(ವಿಶೇಷಣರೂಪಗಳು)

೧೯. 'ಒಂದು' ಎಂಬುದಕ್ಕೆ ಪುಂಸ್ತ್ರೀ ಬಹುವಚನದಲ್ಲಿ 'ಒಬ್ಬರು' ಎಂಬ ರೂಪವುಂಟು. ಇದನ್ನು ಏಕವಚನದ ಅರ್ಥದಲ್ಲಿ ಗೌರವ ಸೂಚಕವಾಗಿ ಉಪಯೋಗಿಸುತ್ತಾರೆ.

ಉದಾಹರಣೆಗಳು

ಅರಸನು ಆ ಯತಿಯನ್ನು ಕುರಿತು "ಪೂಜ್ಯರೇ, ನನ್ನನ್ನು ಉದ್ಧಾರ ಮಾಡಲು ತಾವೊಬ್ಬರೇ ಶಕ್ತರು" ಎಂದು ಹೇಳಿದನು.
(ಕಾರಕರೂಪ)

೨೦. 'ಎರಡು' ಎಂಬ ಸಂಖ್ಯಾವಾಚಕಕ್ಕೆ ಪುಂಸ್ತ್ರೀ ಬಹುವಚನದಲ್ಲಿ 'ಇಬ್ಬರು' ಎಂಬ ರೂಪವು ಬರುತ್ತದೆ.

ಉದಾಹರಣೆ.

ಒಬ್ಬನಿಗಿಂತ ಇಬ್ಬರು ಲೇಸು.
(ಕಾರಕರೂಪ)
ಇಬ್ಬರು ಮನುಷ್ಯರು ಒಂದು ಕಾಡಿನಲ್ಲಿ ಹೋಗುತ್ತಿದ್ದರು.
(ವಿಶೇಷಣರೂಪ)

೨೧. ಮೂರು, ನಾಲ್ಕು, ಐದು ಎಂಬ ಸಂಖ್ಯಾವಾಚಕಗಳಿಗೆ ಪುಂಸ್ತ್ರೀ ಬಹುವಚನದಲ್ಲಿ ಮೂವರು, ನಾಲ್ವರು, ಐವರು ಎಂಬ ರೂಪಗಳುಂಟು. ಆದರೆ ಇವಕ್ಕೆ ಬದಲಾಗಿ 'ಮೂರು ಮಂದಿ,' 'ಮೂರು ಜನ' ಎಂಬಂತೆ ಮಂದಿ, ಜನ ಶಬ್ದಗಳನ್ನು ಕೂಡಿಸಿ ಉಪಯೋಗಿಸುವುದೇ ರೂಢಿ.

ಉದಾಹರಣೆ.

ಆ ನಾಲ್ವರು ಮೂರ್ಖರೂ ನ್ಯಾಯಾಧಿಪತಿಯ ಬಳಿಗೆ ಬಂದರು.
ಎಂಟು ಬಾಳೆಯಹಣ್ಣುಗಳನ್ನು ನಾಲ್ಕು ಮಂದಿ ಹಂಚಿಕೊಂಡರೆ ಒಬ್ಬೊಬ್ಬನಿಗೆ ಎಷ್ಟೆಷ್ಟು ಬರುತ್ತವೆ? ಇತ್ಯಾದಿ.

೨೨. ಆರು, ಏಳು ಮೊದಲಾದ ಸಂಖ್ಯಾವಾಚಕಗಳಿಗೂ ಹೀಗೆಯೇ ಮಂದಿ, ಜನ ಎಂಬ ಶಬ್ದಗಳನ್ನು ಕೂಡಿಸಿ ಪುಂಸ್ತ್ರೀ ಬಹುವಚನ ರೂಪಗಳನ್ನು ಕಲ್ಪಿಸಿಕೊಳ್ಳಬಹುದು.

ಉದಾಹರಣೆ

ನೂರು ಜನವಲ್ಲದಿದ್ದರೆ ಸಾವಿರ ಜನ ಮುತ್ತಿಗೆ ಹಾಕಲಿ;
ನಾನು ಬೇರೆ ಈ ಕೋಟೆಯನ್ನು ಬಿಟ್ಟುಕೊಡುವುದಿಲ್ಲ.

## ೩. ಸರ್ವನಾಮ

೨೩. ಹಿಂದೆ ಆರನೆಯ ಅಧ್ಯಾಯದಲ್ಲಿ ಕೆಲವು ಸರ್ವನಾಮಗಳನ್ನೂ ಅವುಗಳ ಭೇದಗಳನ್ನೂ ನೋಡಿದೆವು. ಕನ್ನಡದಲ್ಲಿ ಬಳಕೆಯಲ್ಲಿರುವ ಸರ್ವನಾಮಗಳನ್ನು ವಿಂಗಡಿಸಿ ಒಂದು ಪಟ್ಟಿಯ ರೂಪದಲ್ಲಿ ಈ ಮುಂದೆ ಕೊಟ್ಟಿದೆ:

ಪುರುಷವಾಚಕ;

| | | |
|---|---|---|
| ಪ್ರಥಮಪುರುಷ—ಪುಲ್ಲಿಂಗ | ಅವನು, ಇವನು | ಅವರು, ಇವರು |
| ಸ್ತ್ರೀಲಿಂಗ | ಅವಳು, ಇವಳು | |
| ನಪುಂಸಕಲಿಂಗ | ಅದು, ಇದು | ಅವು, ಇವು |
| ಮಧ್ಯಮಪುರುಷ | ನೀನು | ನೀವು |
| ಉತ್ತಮಪುರುಷ | ನಾನು | ನಾವು |

ಆತ್ಮಾರ್ಥಕ

ತಾನು ತಾವು

ಪ್ರಶ್ನಾರ್ಥಕ:

| | | |
|---|---|---|
| ಪುಲ್ಲಿಂಗ | ಯಾವನು | ಯಾರು |
| ಸ್ತ್ರೀಲಿಂಗ | ಯಾವಳು | |
| ನಪುಂಸಕಲಿಂಗ | ಯಾವುದು | ಯಾವುವು |
| | ಏನು | — |

೨೪. ಪ್ರಥಮಪುರುಷದ ಸರ್ವನಾಮಗಳಲ್ಲಿ ಅವನು, ಅವಳು, ಅವರು, ಅದು, ಅವು ಎಂಬುವು ದೂರದಲ್ಲಿರುವ ಪದಾರ್ಥಗಳನ್ನೂ ಇವನು, ಇವಳ್, ಇವರು, ಇದು, ಇವು ಎಂಬುವು ಹತ್ತಿರದಲ್ಲಿರುವ ಪದಾರ್ಥಗಳನ್ನೂ ಸೂಚಿಸುತ್ತವೆ. ಒಂದೆರಡು ಉದಾಹರಣೆಗಳನ್ನು ನೋಡಿ:

ನಿನ್ನನ್ನು ಇವನು ಹೊಡೆದನೋ ಅವನು ಹೊಡೆದನೋ ?
ಅವನು ಅರಮನೆಯ ಹತ್ತಿರ ನಿಂತುಕೊಂಡು, "ಇದು ದೊಡ್ಡ ಕೆರೆ; ಅದು ಚಾಮುಂಡಿಯ ಬೆಟ್ಟ" ಎಂದು ತೋರಿಸಿದನು.

೨೫. ಅವನು, ಅವಳು, ಇವನು, ಇವಳು ಎಂಬ ಸರ್ವನಾಮಗಳಿಗೆ ಗೌರವಾರ್ಥದಲ್ಲಿ ಕ್ರಮವಾಗಿ ಆತ(ನು), ಆಕೆ, ಈತ(ನು), ಈಕೆ ಎಂಬ ರೂಪಗಳು ಬರುವುದುಂಟು.

ಉದಾಹರಣೆ.

ಆತ ಈ ಊರಿಗೆಲ್ಲಾ ಹಿರಿಯ ಮನುಷ್ಯ.
ಆಕೆ ಕರೆದವರ ಮನೆಗೆಲ್ಲ ಬರತಕ್ಕವರಲ್ಲ.
ಈತನನ್ನೂ ಈಕೆಯನ್ನೂ ಒಳಗೆ ಕರೆದುಕೊಂಡು ಹೋಗಿ ಉಪಚಾರಮಾಡಿ.

೨೬. ಮಧ್ಯಮಪುರುಷ ಉತ್ತಮಪುರುಷ ಸರ್ವನಾಮಗಳಾದ ನೀನು—ನೀವು, ನಾನ್—ನಾವು ಎಂಬುವಕ್ಕೂ ಆತ್ಮಾರ್ಥಕ ಸರ್ವನಾಮಗಳಾದ ತಾನು—ತಾವು ಎಂಬುವಕ್ಕೂ ಲಿಂಗಭೇದವಿಲ್ಲ.

ಉದಾಹರಣೆ.

ನೀನು—ನೀವು :

ರಂಗ, ನೀನು ಎಲ್ಲಿಗೆ ಹೊರಟೆ ? (ಪುಲ್ಲಿಂಗ)
ಹುಡುಗಿಯರೇ, ನೀವು ಚೆನ್ನಾಗಿ ಹಾಡಿದರೆ ಬಹುಮಾನ ದೊರೆಯುತ್ತದೆ. (ಸ್ತ್ರೀಲಿಂಗ)
ಕೋಗಿಲೆಯೇ. ನೀನೇಕೆ ಹಾಡುವುದಿಲ್ಲ ? ನಿನ್ನ ಗಂಟಲು ಕಟ್ಟಿತೆ ? (ನಪುಂಸಕಲಿಂಗ)

ನಾನು—ನಾವು ;

ನಾನು ಎಂದೆಂದಿಗೂ ನಿಮ್ಮ ಮಾತನ್ನು ಮೀರುವವನಲ್ಲ. (ಪುಲ್ಲಿಂಗ)
ನಾನು ಬೆಂಗಳೂರಿನಿಂದ ಬಂದವಳು (ಸ್ತ್ರೀಲಿಂಗ)
"ನಿಮ್ಮ ಆಟದಲ್ಲ ನಾವು ಸಾಯುತ್ತಿದ್ದೇವೆ" ಎಂದು ಕಪ್ಪೆಗಳು ಹೇಳಿದುವು. (ನಪುಂಸಕಲಿಂಗ)

ತಾನು—ತಾವು :

ತಾನುಂಟೋ ಮೂರುಲೋಕವುಂಟೋ !

(ಪುಲ್ಲಿಂಗ ಅಥವಾ ಸ್ತ್ರೀಲಿಂಗ)

ಆ ಗಿಳಿಗಳು ತಾವು ವಾಸಮಾಡುತ್ತಿದ್ದ ಮರಕ್ಕೇ ಮತ್ತೆ ಬಂದು ಸೇರಿದುವು. (ನಪುಂಸಕಲಿಂಗ)

೨೭. ತಾನು, ತಾವು ಎಂಬ ಸರ್ವನಾಮಗಳು ಒಟ್ಟಿನಮೇಲೆ ಪ್ರಥಮಪುರುಷದ ಅರ್ಥದಲ್ಲೇ ಬರುತ್ತವೆ. ಆದರೆ ಇವುಗಳ ಪ್ರಯೋಗವು ತೊಡಕಾಗಿರುವುದರಿಂದ ಭಾಷಾರೂಢಿಯನ್ನು ನೋಡಿ ತಿಳಿದುಕೊಳ್ಳಬೇಕು.

ಮೇಲೆ ಕೊಟ್ಟಿರುವ ವಾಕ್ಯಗಳ ಜೊತೆಗೆ ಕೆಳಗಿನ ಉದಾಹರಣೆಗಳನ್ನು ನೋಡಿ :

ತಾನು ಮಾಡುವುದು ಉತ್ತಮ, ಮಗ ಮಾಡುವುದು ಮಧ್ಯಮ, ಆಳು ಮಾಡುವುದು ಹಾಳು.

ಅವನಿಗೇನು ; ತಾನೊಬ್ಬನು ಸುಖವಾಗಿದ್ದರೆ ಸಾಕು.

ಇವರು ತಮ್ಮ ಭುಜವನ್ನು ತಾವೇ ತಟ್ಟಿಕೊಳ್ಳುತ್ತಾರೆ.

ಇವೆರಡು ವಾಕ್ಯಗಳನ್ನು ಹೋಲಿಸಿ :

ರಾಮನು ತಾನು ಹೇಳಿದ ಮಾತನ್ನೇ ಮರೆತುಬಿಟ್ಟನು.

ರಾಮನು ಅವನು ಹೇಳಿದ ಮಾತನ್ನೇ ಮರೆತುಬಿಟ್ಟನು.

ಮೊದಲನೆಯ ವಾಕ್ಯದಲ್ಲಿ ರಾಮನು, ತಾನು ಎಂಬ ಎರಡು ಪದಗಳೂ ಒಬ್ಬ ವ್ಯಕ್ತಿಗೇ ಅನ್ವಯಿಸುತ್ತವೆ. ಎರಡನೆಯ ವಾಕ್ಯದಲ್ಲಿ 'ರಾಮನು' ಎಂಬುದು ಹೇಳುವ ವ್ಯಕ್ತಿಯೇ ಬೇರೆ, ಅವನು ಎಂಬ ಸರ್ವನಾಮವು ಹೇಳುವ ವ್ಯಕ್ತಿಯೇ ಬೇರೆ.

೨೮. 'ನೀವು' ಎನ್ನುವ ಸರ್ವನಾಮವು ಮಧ್ಯಮಪುರುಷ ಬಹುವಚನದಲ್ಲಿವೆಯಷ್ಟೆ. ವಿಶೇಷಗೌರವವನ್ನು ಒಬ್ಬರಿಗೆ ತೋರಿಸಬೇಕಾದರೆ 'ನೀವು' ಎಂಬುದಕ್ಕೆ ಬದಲಾಗಿ 'ತಾವು' ಎಂಬುದು ಮಧ್ಯಮಪುರುಷ ಬಹುವಚನ ರೂಪವಾಗಿ ಬರುತ್ತದೆ.

ಉದಾಹರಣೆ.

ಈ ಕುಟೀರಕ್ಕೆ ದಯಮಾಡಿಸಿ ತಾವು ನನ್ನನ್ನು ಕೃತಾರ್ಥನನ್ನಾಗಿ ಮಾಡಿದಿರಿ.

ತಾವು ಹೇಗೆ ಅಪ್ಪಣೆ ಕೊಡಿಸಿದರೆ ಹಾಗೆ ನಡೆದುಕೊಳ್ಳುತ್ತೇನೆ.

೨೯. 'ಯಾರು,' ಯಾವುದು' ಮೊದಲಾದುವು—

ಕೆಳಗಿನ ವಾಕ್ಯಗಳನ್ನು ನೋಡಿ :

ಯಾರು ನಮಗೆ ಮೊದಲು ಅಡಿಯಾಳುಗಳಾಗಿದ್ದರೋ ಅವರು ಈಗ ನಮಗೆ ಒಡೆಯರಾಗಿದ್ದಾರೆ.

ಯಾವುದು ನಿನಗೆ ಒಪ್ಪಿಗೆಯೋ ಅದನ್ನು ತೆಗೆದುಕೊಂಡು ಹೋಗು.

ಹೀಗೆ, ಯಾರ್—ಅವರು, ಯಾವುದು—ಅದು ಮೊದಲಾದ ಸರ್ವನಾಮಗಳೆನ್ನು ಜೊತೆಜೊತೆಯಾಗಿ ಉಪಯೋಗಿಸಿದಾಗ ಯಾರು, ಯಾವುದು ಮೊದಲಾದುವು ಪ್ರಶ್ನೆಯನ್ನು ಕೇಳುವುದಿಲ್ಲ, ಸಂಬಂಧವನ್ನು ಸೂಚಿಸುತ್ತವೆ.

ಇಂಥ ವಾಕ್ಯಗಳಲ್ಲಿ ಯಾರು, ಯಾವುದು ಮೊದಲಾದ ಸರ್ವನಾಮಗಳನ್ನೇ ಬಿಟ್ಟು,

ನಮಗೆ ಮೊದಲು ಅಡಿಯಾಳಾಗಿದ್ದವರು ಈಗ ನಮಗೆ ಒಡೆಯರಾಗಿದ್ದಾರೆ.
ನಿನಗೆ ಒಪ್ಪಿಗೆಯಾದದ್ದನ್ನು ತೆಗೆದುಕೊಂಡು ಹೋಗು.

—ಈ ರೀತಿಯಾಗಿ ಹೇಳಬಹುದು.

೩೦. 'ಏನು' ಎಂಬ ಸರ್ವನಾಮಕ್ಕೆ ನಪುಂಸಕಲಿಂಗ ಏಕವಚನದಲ್ಲಿ ಮಾತ್ರ ಪ್ರಯೋಗವುಂಟು.

ಉದಾಹರಣೆ.

ನೀನು ಹೋಗಿದ್ದ ಕೆಲಸ ಏನಾಯಿತು ?

೩೧. ವಿಶೇಷಣರೂಪಗಳು:

ಪ್ರಥಮಪುರುಷದಲ್ಲಿ ದೂರವನ್ನು ಸೂಚಿಸುವ ಸರ್ವನಾಮಗಳಿಗೆ 'ಆ' ಎಂದೂ, ಹತ್ತಿರವನ್ನು ಸೂಚಿಸುವ ಸರ್ವನಾಮಗಳಿಗೆ 'ಈ' ಎಂದೂ, ಪ್ರಶ್ನಾರ್ಥಕ ಸರ್ವನಾಮಗಳಿಗೆ 'ಯಾವ' ಎಂದೂ ವಿಶೇಷಣರೂಪಗಳಾಗುತ್ತವೆ. (ನೀನು, ನಾನು, ತಾನು ಮೊದಲಾದುವಕ್ಕೆ ವಿಶೇಷಣವಾಗಿ ಪ್ರಯೋಗವಿಲ್ಲ).

ಉದಾಹರಣೆ

ಆ ದೊರೆಗೆ ಶುಕನಾಸನೆಂಬ ಮಂತ್ರಿ ಇದ್ದನು.
ದಾರಿಯಲ್ಲಿ ಹೋಗುತ್ತಾ ಆ ಮುದುಕಿ ಎಡವಿಬಿದ್ದಳು.
ಈ ಮನೆಗೆ ಆ ಮನೆ ಹೇಗೆ ಸಾಟಿಯಾದೀತು ?
ವಿಶ್ವಾಮಿತ್ರನು ಹರಿಶ್ಚಂದ್ರನನ್ನು ಕುರಿತು "ಈ ಅರಮನೆ, ಈ ಭಂಡಾರ, ಈ ಸೈನ್ಯಗಳು, ಈ ಪರಿವಾರದವರು, ಈ ವೈಭವ—ಇವೆಲ್ಲವೂ ಉಳಿಯಬೇಕಾದರೆ, ನನ್ನ ಪುತ್ರಿಯರನ್ನು ವರಿಸು" ಎಂದು ಹೇಳಿದನು.
ನೀವು ಯಾವ ದೇಶದಿಂದ ಬಂದವರು, ಯಾವ ಅರಸನ ಮಕ್ಕಳು ?

೩೨. 'ಏನು' ಎಂಬುದು ವಿಶೇಷಣರೂಪವೂ ಆಗುವುದುಂಟು.

ಉದಾಹರಣೆ.

ಆ ರಾಜಪುತ್ರಿ ಏನು ಕಷ್ಟಕ್ಕೆ ಸಿಕ್ಕಿದರೂ ಧೈರ್ಯಗೆಡಲಿಲ್ಲ.

## ಒಂಭತ್ತನೆಯ ಅಧ್ಯಾಯ

### ವಿಭಕ್ತಿ

೧. ನಾಮಪ್ರಕೃತಿಯನ್ನು ಉಪಯೋಗಿಸುವಾಗ ಅದಕ್ಕೂ ವಾಕ್ಯದ ಮಿಕ್ಕ ಪದಗಳಿಗೂ ಇರುವ ಸಂಬಂಧವನ್ನು ಕೆಲವು ಪ್ರತ್ಯಯಗಳ ಮೂಲಕ ತೋರಿಸಬೇಕಷ್ಟೆ. ಈ ಪ್ರತ್ಯಯಗಳು ಯಾವುವೆಂಬುದನ್ನು ನೋಡೋಣ.

ಕೆಳಗಿನ ವಾಕ್ಯಗಳನ್ನು ಪರಿಶೀಲಿಸಿ :—

(ಅ) ಹೊಳೆ ವೇಗವಾಗಿ ಹರಿಯುತ್ತದೆ.

(ಆ) ಜನರು ದೋಣಿಯಲ್ಲಿ ಕುಳಿತು ಹೊಳೆಯನ್ನು ದಾಟುತ್ತಾರೆ.

(ಇ) ನಮ್ಮ ತಾಯಿ ನೀರನ್ನು ಹೊಳೆಯಿಂದ ತಂದಳು.

(ಈ) ಇಲ್ಲಿಂದ ಹೊಳೆಗೆ ಹೋಗುವುದಕ್ಕೆ ದಾರಿ ಯಾವುದು ?

(ಉ) ಹೊಳೆಯ ದಡದಲ್ಲಿ ಮಾವಿನ ತೋಪು ಇದೆ.

(ಊ) ಈ ಹೊಳೆಯಲ್ಲಿ ಮೀನುಗಳು ಹೆಚ್ಚು.

ಮೇಲಿನ ಆರು ವಾಕ್ಯಗಳಲ್ಲೂ 'ಹೊಳೆ' ಎಂಬ ಒಂದೇ ನಾಮ ಪ್ರಕೃತಿ ಬೇರೆ ಬೇರೆ ರೂಪಗಳಲ್ಲಿ ಬಂದಿದೆ. ಇವುಗಳಲ್ಲಿ ಒಂದೆರಡನ್ನು ನೋಡಿ. ಮೂರನೆಯ ವಾಕ್ಯದಲ್ಲಿ, 'ನಮ್ಮ ತಾಯಿ ನೀರನ್ನು **ಹೊಳೆ** ತಂದಳು' ಎಂದು ಹೇಳಿದ್ದರೆ, 'ಹೊಳೆ' ಎಂಬುದಕ್ಕೂ 'ತಂದಳು' ಎಂಬ ಕ್ರಿಯಾಪದಕ್ಕೂ ಇರತಕ್ಕ ಸಂಬಂಧವು ಗೊತ್ತಾಗುತ್ತಿರಲಿಲ್ಲ. 'ಎಲ್ಲಿಂದ ತಂದಳು?' ಎಂಬ ಪ್ರಶ್ನೆಗೆ ಸರಿಯಾಗಿ ಉತ್ತರ ಬರಬೇಕಾದರೆ 'ಹೊಳೆ' ಎಂಬುದಕ್ಕೆ 'ಇಂದ' ಎಂಬ ಪ್ರತ್ಯಯವನ್ನು ಸೇರಿಸಿ 'ಹೊಳೆಯಿಂದ' ಎಂದು ಹೇಳಬೇಕು. (ಇಲ್ಲಿ ಪ್ರತ್ಯಯ ಸೇರುವಾಗ ಆಗಮಸಂಧಿ ಯಾಗಿದೆ.) ಹೀಗೆಯೇ 'ಹೊಳೆಯ ದಡದಲ್ಲಿ' ಎಂಬಕಡೆ, 'ಹೊಳೆ' ಎಂಬುದಕ್ಕೆ 'ಅ' ಎಂಬ ಪ್ರತ್ಯಯವು ಸೇರಿ ಹೊಳೆಗೂ ದಡಕ್ಕೂ ಇರುವ ಸಂಬಂಧವನ್ನು ಸ್ಪಷ್ಟಪಡಿಸುತ್ತದೆ.

ಈ ರೀತಿಯಾಗಿ ವಾಕ್ಯದಲ್ಲಿ ನಾಮ ಪ್ರಕೃತಿಗೆ ಇರುವ ಸಂಬಂಧವನ್ನು ತಿಳಿಸಲು ಸೇರಿಸುವ ಪ್ರತ್ಯಯಕ್ಕೆ **ವಿಭಕ್ತಿ ಪ್ರತ್ಯಯ**ವೆಂದು ಹೆಸರು.

೨. ಹೊಳೆ, ಹೊಳೆಯನ್ನು, ಹೊಳೆಯಿಂದ, ಹೊಳೆಗೆ, ಹೊಳೆಯ, ಹೊಳೆಯಲ್ಲಿ ಎಂಬ ರೂಪಗಳನ್ನು ಮತ್ತೆ ನೋಡಿ. ಇವುಗಳಲ್ಲಿ ಮೊದಲನೆಯದು ಮಾತ್ರ ಪ್ರಕೃತಿ ರೂಪದಲ್ಲಿದೆ. ಮಿಕ್ಕ ಕಡೆಗಳಲ್ಲೆಲ್ಲಾ ಬೇರೆ ಬೇರೆ

ಪ್ರತ್ಯಯಗಳು ಸೇರಿವೆ. ಈ ವಿಭಕ್ತಿಗಳ ಹೆಸರುಗಳನ್ನೂ, ಅಲ್ಲಿ ಸೇರಿರುವ ಪ್ರತ್ಯಯಗಳನ್ನೂ ಕೆಳಗಿನ ಪಟ್ಟಿಯಿಂದ ತಿಳಿದುಕೊಳ್ಳಬಹುದು.

| ವಿಭಕ್ತಿರೂಪ | ವಿಭಕ್ತಿಯ ಹೆಸರು | ಪ್ರತ್ಯಯ |
| --- | --- | --- |
| ಹೊಳೆ | ಪ್ರಥಮಾವಿಭಕ್ತಿ | —— |
| ಹೊಳೆಯನ್ನು | ದ್ವಿತೀಯಾವಿಭಕ್ತಿ | – ಅನ್ನು |
| ಹೊಳೆಯಿಂದ | ತೃತೀಯಾವಿಭಕ್ತಿ | – ಇಂದ |
| ಹೊಳೆಗೆ | ಚತುರ್ಥೀವಿಭಕ್ತಿ | – ಗೆ |
| ಹೊಳೆಯ | ಷಷ್ಠೀವಿಭಕ್ತಿ | – ಅ |
| ಹೊಳೆಯಲ್ಲಿ | ಸಪ್ತಮೀವಿಭಕ್ತಿ | – ಅಲ್ಲಿ |

೩. ಪ್ರಥಮಾವಿಭಕ್ತಿಗೆ ಯಾವ ಪ್ರತ್ಯಯವನ್ನೂ ಈ ಪಟ್ಟಿಯಲ್ಲಿ ತೋರಿಸಿಲ್ಲ. ಇದರ ವಿಷಯವಾಗಿ ಕೆಲವು ಮಾತುಗಳನ್ನು ಮುಂದೆ ಹೇಳಲಾಗುತ್ತದೆ.

೪. ಈ ವಿಭಕ್ತಿಗಳಿಗೆ ಕೊಟ್ಟಿರುವ ಹೆಸರುಗಳನ್ನು ಒಳಕೆಯ ಮಾತಿನಲ್ಲಿ ಬರೆದರೆ, ಕ್ರಮವಾಗಿ—ಮೊದಲನೆಯ ವಿಭಕ್ತಿ, ಎರಡನೆಯ ವಿಭಕ್ತಿ, ಮೂರನೆಯ ವಿಭಕ್ತಿ, ನಾಲ್ಕನೆಯ ವಿಭಕ್ತಿ, ಆರನೆಯ ವಿಭಕ್ತಿ, ಏಳನೆಯ ವಿಭಕ್ತಿ ಎಂದಾಗುತ್ತವೆ. ನಮ್ಮ ಪಟ್ಟಿಯಲ್ಲಿ ಐದನೆಯ ವಿಭಕ್ತಿ (=ಪಂಚಮೀ ವಿಭಕ್ತಿ) ಬಿಟ್ಟುಹೋಗಿರುವುದು ನಿಮ್ಮ ಗಮನಕ್ಕೆ ಬಂದಿರಬೇಕು. 'ಹೊಳೆಯದೆಸೆಯಿಂದ' ಎನ್ನುವುದು ಪಂಚಮೀವಿಭಕ್ತಿಯ ರೂಪವೆಂದೂ, –'ದೆಸೆಯಿಂದ' ಎನ್ನುವುದು ಇಲ್ಲಿಯ ವಿಭಕ್ತಿ ಪ್ರತ್ಯಯವೆಂದೂ ಹೇಳುವುದುಂಟು. ಕನ್ನಡಮಾತಿನಲ್ಲಿ 'ಹೊಳೆಯ ದೆಸೆಯಿಂದ,' 'ಮನೆಯ ದೆಸೆಯಿಂದ' ಈ ಬಗೆಯ ರೂಪಗಳನ್ನು ಸಾಮಾನ್ಯವಾಗಿ ಉಪಯೋಗಿಸುವುದಿಲ್ಲ. *

೫. 'ಹೊಳೆಯೇ, ನಮಗೆ ದಾರಿಬಿಡು' ಎಂದು ಆ ಮುಂಕರು ಕೂಗಿಕೊಂಡರು.

ಅಮ್ಮಾ, ನನಗೆ ಹಸಿವಾಗುತ್ತದೆ.

ಮೇಲಿನ ವಾಕ್ಯಗಳಲ್ಲಿ ಬಂದಿರುವ 'ಹೊಳೆಯೇ,' 'ಅಮ್ಮಾ' ಎಂಬ ರೂಪಗಳನ್ನು ನೋಡಿ. 'ಹೊಳೆ' ಯನ್ನೂ 'ಅಮ್ಮ' ನನ್ನೂ ಕುರಿತು ಮಾತಾಡುವಾಗ ಅವರನ್ನು ಸಂಬೋಧಿಸುವುದಕ್ಕಾಗಿ ಈ ರೂಪಗಳು ಬಂದಿವೆ. ಹೀಗೆ ಸಂಬೋಧನೆಯನ್ನು ಹೇಳುವ ವಿಭಕ್ತಿಗೆ 'ಸಂಬೋಧನ ವಿಭಕ್ತಿ' ಎಂದು ಹೆಸರು. (ಇದನ್ನು ಎಂಟನೆಯ ವಿಭಕ್ತಿ ಅಥವಾ ಅಷ್ಟಮೀ

* 'ದೆಸೆಯಿಂದ' ಎನ್ನುವುದು ಒಂದು ಪದ, ಪ್ರತ್ಯಯವಲ್ಲ. ಆದಕಾರಣ, ಈ ವ್ಯಾಕರಣದಲ್ಲಿ ಪಂಚಮೀ ವಿಭಕ್ತಿಯ ವಿಷಯವನ್ನು ಪ್ರತ್ಯೇಕವಾಗಿ ಹೇಳಿಲ್ಲ. 'ಹೊಳೆಯ' 'ಮನೆಯ' ಎಂಬಂಥ ಷಷ್ಠೀ ವಿಭಕ್ತಿ ರೂಪದಮುಂದೆ, 'ದೆಸೆಯಿಂದ' ಎಂಬ ಪದವನ್ನು ಸೇರಿಸಿದರೆ ಪಂಚಮೀ ವಿಭಕ್ತಿ ರೂಪವಾಗುವುದೆಂದು ತಿಳಿದುಕೊಂಡರೆ ಸಾಕು.

ವಿಭಕ್ತಿ ಎಂದು ಕರೆಯುವ ಪದ್ಧತಿಯಿಲ್ಲ.) ಈ ವಿಭಕ್ತಿಯ ಪ್ರತ್ಯಯದ ವಿಚಾರವನ್ನು ಮುಂದೆ ಹೇಳಲಾಗುತ್ತದೆ.

೬. ಅಂತೂ ಪಂಚಮೀ ವಿಭಕ್ತಿಯನ್ನು ಬಿಟ್ಟು ಸಂಬೋಧನ ವಿಭಕ್ತಿಯನ್ನು ಸೇರಿಸಿಕೊಂಡರೆ ಕನ್ನಡದಲ್ಲಿ ಏಳು ವಿಭಕ್ತಿಗಳಾಗುತ್ತವೆ.

೭. ವಿಭಕ್ತಿ ಪ್ರತ್ಯಯಗಳು ನಾಮಪ್ರಕೃತಿಯ ಏಕವಚನರೂಪ ಬಹುವಚನ ರೂಪಗಳೆರಡಕ್ಕೂ ಹತ್ತುತ್ತವೆ. ಬಹುವಚನವನ್ನು ಹೇಳುವಾಗ, ಮೊದಲು ಬಹುವಚನ ಪ್ರತ್ಯಯವನ್ನು ಹತ್ತಿಸಿ ಅದರ ಮುಂದೆ ವಿಭಕ್ತಿ ಪ್ರತ್ಯಯವನ್ನು ಹತ್ತಿಸಬೇಕು.

ಉದಾಹರಣೆ.

| ವಿಭಕ್ತಿ | ಪ್ರತ್ಯಯ | ಏಕವಚನ | ಬಹುವಚನ |
|---|---|---|---|
| ದ್ವಿತೀಯಾ | -ಅನ್ನು | ಹೊಳೆ+ಅನ್ನು<br>=ಹೊಳೆಯನ್ನು | ಹೊಳೆಗಳು+ಅನ್ನು<br>=ಹೊಳೆಗಳನ್ನು |
| ಷಷ್ಠೀ | -ಅ | ಹೊಳೆ+ಅ<br>=ಹೊಳೆಯ | ಹೊಳೆಗಳು+ಅ<br>=ಹೊಳೆಗಳ |

೮. ಈಗ ವಿಭಕ್ತಿಪ್ರತ್ಯಯಗಳನ್ನು ಕುರಿತು ಕೆಲವು ವಿಶೇಷಾಂಶಗಳನ್ನು ಗಮನಿಸೋಣ.

೯. **ಪ್ರಥಮಾ ವಿಭಕ್ತಿ** : ಏಕವಚನ—

ಈ ಕೆಳಗಿನ ರೂಪಗಳನ್ನು ನೋಡಿ :—

ಕುರಿ ಮಂದೆಯಿಂದ ತಪ್ಪಿಸಿಕೊಂಡಿತು.
ಬಡಗಿ ಕುರ್ಚಿಯನ್ನು ಚೆನ್ನಾಗಿ ಮಾಡಿಲ್ಲ.
ಹಡಗು ಬಿರುಗಾಳಿಗೆ ಸಿಕ್ಕಿತು.
ಗುರು ಹೇಳಿದಂತೆ ಶಿಷ್ಯರು ಕೇಳುತ್ತಾರೆ.
ಹಗಲು ಮುಗಿಯಿತು; ಕತ್ತಲೆ ಕವಿಯಿತು.
ಅತ್ತೆ ಒಡೆದ ಪಾತ್ರೆಗೆ ಬೆಲೆಯಿಲ್ಲ.

ಇಲ್ಲಿ ಅಕಾರಾಂತವಲ್ಲದ ಶಬ್ದಗಳು ಪ್ರಥಮಾವಿಭಕ್ತಿಯಲ್ಲಿ ಬಂದಿವೆ. ಇವುಗಳಲ್ಲೆಲ್ಲಾ ಪ್ರಕೃತಿರೂಪವೇ ಪ್ರಥಮಾವಿಭಕ್ತಿಯ ರೂಪವಾಗಿದೆ.

ಈಗ ಕೆಳಗಿನ ರೂಪಗಳನ್ನು ನೋಡಿ :—

ಮುದುಕನು ನಡೆದು ನಡೆದು ಬಳಲಿದನು.
ಭಾವನು ಊರಿಗೆ ಬಂದರೆ ಸಾಕು;
ಅಕ್ಕನು ಮರೆಯಲ್ಲಡಗುವಳು
ಈ ಕಾರ್ಯವು ಎನ್ನಿಂದ ಸಾಗುವುದಿಲ್ಲ.
ಪ್ರಕೃತಿಗೆ ಪ್ರತ್ಯಯವು ಸೇರಿದರೆ ಪದವಾಗುತ್ತದೆ.

ಇಲ್ಲಿ ಮುದುಕ, ಭಾವ, ಅಕ್ಕ, ಕಾರ್ಯ ಪ್ರತ್ಯಯ ಮೊದಲಾದುವು ಅಕಾರಾಂತ ಪ್ರಕೃತಿಗಳು. ಇವುಗಳಿಗೆ ಪ್ರಥಮಾ ವಿಭಕ್ತಿಯಲ್ಲಿ '–ಉ' ಎಂಬ ಪ್ರತ್ಯಯವು ಸೇರಿರುವುದು ಕಾಣಬರುತ್ತದೆ :

ಮುದುಕ+ಉ=ಮುದುಕನು.
ಕಾರ್ಯ+ಉ=ಕಾರ್ಯವು ಇತ್ಯಾದಿ.

(ಇಲ್ಲಿ ಪ್ರಕೃತಿಗೂ ಪ್ರತ್ಯಯಕ್ಕೂ ನಡುವೆ ನ್, ವ್ ಎಂಬ ವರ್ಣಗಳು ಬಂದಿವೆ; ಇವುಗಳ ವಿಷಯವನ್ನು ಪ್ರತ್ಯೇಕವಾಗಿ ನೋಡೋಣ.)

ಅಕಾರಾಂತ ಪ್ರಕೃತಿಗಳಲ್ಲಿ ಕೂಡ, ಪ್ರಕೃತಿರೂಪವನ್ನೇ ಪ್ರಥಮಾ ವಿಭಕ್ತಿಯ ರೂಪವಾಗಿ ಉಪಯೋಗಿಸುವುದುಂಟು. ಮೇಲಿನವಾಕ್ಯಗಳನ್ನೇ,

ಮುದುಕ ನಡೆದು ನಡೆದು ಬಳಲಿದನು.
ಈ ಕಾರ್ಯ ನನ್ನಿಂದ ಸಾಗುವುದಿಲ್ಲ.

ಈ ರೀತಿಯಾಗಿ ಹೇಳಬಹುದು. ನಪುಂಸಕಲಿಂಗದ ಅಕಾರಾಂತ ಪ್ರಕೃತಿಗಳಿಗಂತೂ 'ಉ' ಎಂಬ ಪ್ರತ್ಯಯವನ್ನು ಸೇರಿಸದೆ ಇರುವುದೇ ರೂಢಿ.

ಉದಾಹರಣೆ.

ನನ್ನ ಕನ್ನಡಕ ಏನಾಯಿತು ?
ಆ ಪುಸ್ತಕ ನನಗೆ ಬೇಕು. ಇತ್ಯಾದಿ.

ಕೆಲವರು '–ಉ' ಎಂಬುದು ಪ್ರಥಮಾವಿಭಕ್ತಿಯ ಸಾಮಾನ್ಯ ಪ್ರತ್ಯಯವೆಂದು ಹೇಳಿ, ಅಕಾರಾಂತವಲ್ಲದ ಪ್ರಕೃತಿಗಳಿಗೂ ಹತ್ತಿಸಿ, ಕುರಿಯು, ಗುರುವು, ಕರ್ತೃವು, ಕತ್ತಲೆಯು—ಈ ಮೊದಲಾದ ರೂಪಗಳನ್ನು ಉಪಯೋಗಿಸುವುದುಂಟು.

೧೦. ಪ್ರಥಮಾವಿಭಕ್ತಿ : ಬಹುವಚನ—

ಇದಿಷ್ಟೂ ಏಕವಚನದ ವಿಷಯವಾಯಿತು. ಬಹುವಚನದಲ್ಲಿ, ಬಹುವಚನ ಪ್ರತ್ಯಯವನ್ನುಳ್ಳ ರೂಪಗಳೇ ಪ್ರಥಮಾ ವಿಭಕ್ತಿಯ ರೂಪಗಳಾಗುತ್ತವೆ. ವಿಭಕ್ತಿ ಪ್ರತ್ಯಯ ಬೇರೆ ಹತ್ತುವುದಿಲ್ಲ.

ಉದಾಹರಣೆ.

ಹುಡುಗರು ಬೀದಿಯಲ್ಲಿ ಗದ್ದಲಮಾಡುತ್ತಾ ಹೋದರು. (ಹುಡುಗ+ಅರು)
ಅವನ ಅಣ್ಣಂದಿರು ದೊಡ್ಡ ದೊಡ್ಡ ಹುದ್ದೆಗಳಲ್ಲಿದ್ದಾರೆ. (ಅಣ್ಣ+ಅಂದಿರು)
ಆ ಬಿರುಗಾಳಿಗೆ ಹಲವು ಮರಗಳು ಉರುಳಿದವು. (ಮರ+ಗಳು)

೧೧. **ಚತುರ್ಥೀ ವಿಭಕ್ತಿ :**

ಚತುರ್ಥೀ ವಿಭಕ್ತಿಗೆ –ಗೆ, –ಕ್ಕೆ, —ಅಕ್ಕೆ, —ಇಗೆ ಎಂಬ ನಾಲ್ಕು ಪ್ರತ್ಯಯಗಳುಂಟು.

(೧)—ಗೆ :

–ಗೆ ಎಂಬುದು ಇಕಾರ ಎಕಾರ ಐಕಾರಗಳು ಕೊನೆಯಲ್ಲಿರುವ ಪ್ರಕೃತಿಗಳಿಗೆ ಏಕವಚನದಲ್ಲಿ ಹತ್ತುತ್ತದೆ.

ಉದಾಹರಣೆ.

ಇಲಿಗೆ ಹೊಡೆದ ಬಾಣ ಗಣಪತಿಗೆ ತಗುಲಿತು. (ಇಲಿ+ಗೆ, ಗಣಪತಿ+ಗೆ)
ಎಣ್ಣೆಗೆ ಸೀಗೆಕಾಯಿ ವೈರಿ. (ಎಣ್ಣೆ+ಗೆ)
ಬೆಳಗಿನ ಬಿಸಿಲು ಮೈಗೆ ಒಳ್ಳೆಯದಲ್ಲವೆನ್ನುತ್ತಾರೆ, (ಮೈ+ಗೆ)
ಹೀಗೆಯೇ :—ಹರಿಗೆ, ವಿಧಿಗೆ, ಕೊನೆಗೆ, ಬೇಟೆಗೆ ದೊರೆಗೆ, ಕೈಗೆ.

(೨) —ಕ್ಕೆ :

–ಕ್ಕೆ ಎಂಬುದು ಅಕಾರಾಂತವಾದ ನಪುಂಸಕಲಿಂಗ ಪ್ರಕೃತಿಗಳಿಗೆ ಏಕವಚನದಲ್ಲಿ ಹತ್ತುತ್ತದೆ.

ಉದಾಹರಣೆ.

ಈಗಾಗಲೇ ಊಟಕ್ಕೆ ಹೊತ್ತಾಯಿತು. (ಊಟ+ಕ್ಕೆ)
ಇದೇನು ನಿನ್ನ ಗಲ್ಲಕ್ಕೆ ಮಸಿ ಹತ್ತಿದೆ? (ಗಲ್ಲ+ಕ್ಕೆ)
ಹೀಗೆಯೇ:—ಮರಕ್ಕೆ, ಕಂಬಕ್ಕೆ, ನೆಲಕ್ಕೆ, ತೋಳಕ್ಕೆ.

(೩) —ಅಕ್ಕೆ :

(ಅ) —ಅಕ್ಕೆ ಎಂಬುದು ಮೇಲು, ಕೆಳಗು, ಹಿಂದು, ಮುಂದು, ಹೊರಗು, ಒಳಗು ಮೊದಲಾದ ಸ್ಥಾನ ದಿಕ್ಕುಗಳನ್ನು ತೋರಿಸುವ ನಾಮವಾಚಕಗಳಿಗೆ ಸೇರುತ್ತದೆ. ಇದು ಸೇರುವಾಗ ಪ್ರಕೃತಿಯ ಕೊನೆಯಲ್ಲಿರುವ 'ಗು' ಎಂಬುದು ಲೋಪವಾಗುತ್ತದೆ.

ಉದಾಹರಣೆ.

ಬೆಕ್ಕು ಅಟ್ಟದ ಮೇಲಕ್ಕೆ ನೆಗೆಯಿತು. (ಮೇಲು+ಅಕ್ಕೆ)
ಸಂತೆಗೆ ಹೋದವರು ಹಿಂದಕ್ಕೆ ಬಂದರು. (ಹಿಂದು+ಅಕ್ಕೆ)
ಬೆಟ್ಟದಿಂದ ಕೆಳಕ್ಕೆ ಇಳಿಯುವುದು ಸುಲಭ.
(ಕೆಳಗು+ಅಕ್ಕೆ = ಕೆಳ+ಅಕ್ಕೆ = ಕೆಳಕ್ಕೆ)
ಈ ಕಾಯಿಪಲ್ಯಗಳನ್ನು ಒಳಕ್ಕೆ ತೆಗೆದುಕೊಂಡು ಹೋಗು.
(ಒಳಗು + ಅಕ್ಕೆ = ಒಳ + ಅಕ್ಕೆ = ಒಳಕ್ಕೆ)
ಹೀಗೆಯೇ :—ಮುಂದು–ಮುಂದಕ್ಕೆ, ಹೊರಗು–ಹೊರಕ್ಕೆ.

(ಅ) ನಪುಂಸಕಲಿಂಗದಲ್ಲಿ ಉಕಾರಾಂತ ಗುಣವಾಚಕ ಸಂಖ್ಯಾವಾಚಕ ಸರ್ವನಾಮಗಳಿಗೆ ಏಕ ವಚನ ಬಹುವಚನಗಳೆರಡರಲ್ಲೂ '_ಅಕ್ಕೆ' ಎಂಬುದು ಸೇರುತ್ತದೆ.



ಉದಾಹರಣೆ.

ಗುಣವಾಚಕಕ್ಕೆ :

ಈ ಹಣ್ಣುಗಳಲ್ಲಿ ದೊಡ್ಡದಕ್ಕೆ ಬೆಲೆ ನಾಲ್ಕಾಣೆ ; ಚಿಕ್ಕವಕ್ಕೆಲ್ಲಾ ಒಟ್ಟು ಆರಾಣೆಯನ್ನು ಕೊಟ್ಟರೆ ಸಾಕು. (ದೊಡ್ಡದು+ಅಕ್ಕೆ, ಚಿಕ್ಕವು+ಅಕ್ಕೆ)

ಎಂಥದಕ್ಕೆ ಯಾವ ಹೆಸರು? (ಎಂಥದು+ಅಕ್ಕೆ)

ಇಷ್ಟಕ್ಕೆ ಹೆಚ್ಚಾಗಿದ್ದರೆ ಕತ್ತರಿಸಿ ಬಿಡು. (ಇಷ್ಟು+ಅಕ್ಕೆ)

ಕಪಿಗಳಲ್ಲಿ ಕೆಲವಕ್ಕೆ ಬಾಲವೇ ಇರುವುದಿಲ್ಲ. (ಕೆಲವು+ಅಕ್ಕೆ)

ಸಂಖ್ಯಾವಾಚಕಕ್ಕೆ :

ಒಂದಕ್ಕೆ ಹೆಚ್ಚು, ಎರಡಕ್ಕೆ ಸಾಲದು. (ಒಂದು+ಅಕ್ಕೆ, ಎರಡು+ಅಕ್ಕೆ)

ಇಪ್ಪತ್ತಕ್ಕೆ ಆರನ್ನು ಸೇರಿಸಿದರೆ ಎಷ್ಟಾಗುತ್ತದೆ? (ಇಪ್ಪತ್ತು+ಅಕ್ಕೆ

ಸರ್ವನಾಮಕ್ಕೆ :

ಇದಕ್ಕೆ ಯಾರು ಹೊಣೆ? (ಇದು+ಅಕ್ಕೆ)

ನಿನ್ನೆ ಗುಲಾಬಿಯ ಕಡ್ಡಿಗಳನ್ನು ನೆಡಲಿಲ್ಲವೆ? ಅವಕ್ಕೆ ಆಳು ನೀರ ಹಾಕಿದನೆ, ನೋಡು. (ಅವು+ಅಕ್ಕೆ)

ದೀಪಗಳಲ್ಲಿ ಯಾವುದಕ್ಕೆ ಎಣ್ಣೆ ಸಾಲದು? (ಯಾವುದು+ಅಕ್ಕೆ)

ಗುಣವಾಚಕಗಳಲ್ಲೂ ಸರ್ವನಾಮಗಳಲ್ಲೂ ಬಹುವಚನ ರೂಪಗಳ ಮೇಲೆ '_ಗಳು' ಎಂಬ ಬಹುವಚನ ಪ್ರತ್ಯಯ ಮತ್ತೆ ಹತ್ತಿ 'ಚಿಕ್ಕವುಗಳು,' 'ಅಂಥವುಗಳು,' 'ಅವುಗಳು,' 'ಇವುಗಳು,'—ಈ ರೀತಿಯ ರೂಪಗಳಾದಾಗ ಚತುರ್ಥೀವಿಭಕ್ತಿಯಲ್ಲಿ _ಅಕ್ಕೆ ಎಂಬ ಪ್ರತ್ಯಯ ಸೇರುವುದಿಲ್ಲ. ಕೆಳಗೆ ಹೇಳುವ _ಇಗೆ ಎಂಬುದು ಸೇರುತ್ತದೆ.

ಉದಾಹರಣೆ.

ಚಿಕ್ಕವುಗಳಿಗೆ (ಚಿಕ್ಕವು+ಗಳು+ಇಗೆ); ಅಂಥವುಗಳಿಗೆ (ಅಂಥವು+ಗಳು+ಇಗೆ)

ಅವುಗಳಿಗೆ (ಅವು+ಗಳು+ಇಗೆ); ಇವುಗಳಿಗೆ (ಇವು+ಗಳು+ಇಗೆ) ಇತ್ಯಾದಿ.

(ಆ) —ಇಗೆ :

'ಇಗೆ' ಎಂಬುದು ಚತುರ್ಥೀವಿಭಕ್ತಿಯ ಸಾಮಾನ್ಯ ಪ್ರತ್ಯಯ. ಮಿಕ್ಕವುಗಳು ಸತ್ತ ... ಸೇರುತ್ತದೆ.



ಉದಾಹರಣೆ.

ಏಕವಚನ—

ನಾಮವಾಚಕಕ್ಕೆ :

ಅಜ್ಜನಿಗೆ ತಲೆಯಲ್ಲಿ ಕೂದಲೇ ಇಲ್ಲ. (ಅಜ್ಜ+ನ್+ಇಗೆ)

ಈ ಕೂಸಿಗೆ ಔಷಧಿಯನ್ನು ಕುಡಿಸುವುದು ಕಷ್ಟ. (ಕೂಸು+ಇಗೆ)

ಹಸುವಿಗೆ ಕರುವಿನ ಮೇಲೆ ಪ್ರೀತಿ; ಕರುವಿಗೆ ಹಾಲನಮೇಲೆ ಪ್ರೀತಿ. (ಹಸು+ಇಗೆ, ಕರು+ಇಗೆ)

ಹೀಗೆಯೇ ; —ರಾಮನಿಗೆ, ಅಮ್ಮನಿಗೆ, ನೂಲಿಗೆ, ಗುರುವಿಗೆ.

ಗುಣವಾಚಕಕ್ಕೆ :

ದೊಡ್ಡವನಿಗೆ ಎಂಟು ವರ್ಷ; ಚಿಕ್ಕವನಿಗೆ ಐದು ವರ್ಷ. (ದೊಡ್ಡವನು+ಇಗೆ, ಚಿಕ್ಕವನು+ಇಗೆ)

ಆ ಮಗುವನ್ನು ಹೊಡೆಯುವುದಕ್ಕೆ ಎಂಥವನಿಗೆ ತಾನೆ ಮನಸ್ಸು ಬಂದೀತು ? (ಎಂಥವನು+ಇಗೆ)

ಸಂಖ್ಯಾವಾಚಕಕ್ಕೆ :

ಇವನೊಬ್ಬನಿಗೆ ಯಾವ ಸಹಾಯವೂ ದೊರೆಯಲಿಲ್ಲ. (ಒಬ್ಬನು+ಇಗೆ)

ಸರ್ವನಾಮಕ್ಕೆ .

ಅವಳಿಗೆ ಕಡೆಕಡೆಯಲ್ಲಿ ತುಂಬ ತೊಂದರೆಯುಂಟಾಯಿತು. (ಅವಳು+ಇಗೆ

ಬಹುವಚನ—

ನಾಮವಾಚಕಕ್ಕೆ :

ಇಲ್ಲಿ ಬಡವರಿಗೆ ಉಚಿತವಾಗಿ ಔಷಧವನ್ನು ಕೊಡುತ್ತಾರೆ. (ಬಡವರು+ಇಗೆ)

ನಿನ್ನ ತಮ್ಮಂದಿರಿಗೆ ಪ್ರತಿದಿನವೂ ಪಾಠವನ್ನು ಹೇಳಿಕೊಡು. (ತಮ್ಮಂದಿರು+ಇಗೆ)

ನಮ್ಮ ಎಲೆಗಳಿಗೆ ಮೊದಲು ಅನ್ನ ಬಡಿಸಿ. (ಎಲೆಗಳು+ಇಗೆ)

ಗುಣವಾಚಕಕ್ಕೆ :

ಒಳ್ಳೆಯವರಿಗೆ ಇದು ಕಾಲವಲ್ಲ. (ಒಳ್ಳೆಯವರು+ಇಗೆ)

ಸಂಖ್ಯಾವಾಚಕಕ್ಕೆ :

ಮೂವರಿಗೆ ತಿಳಿದದ್ದು ಮೂರು ಲೋಕಕ್ಕೆ ತಿಳಿದಹಾಗೆ. (ಮೂವರು+ಇಗೆ)

ಸರ್ವನಾಮಕ್ಕೆ :

ಯಾರಿಗೆ ಯಾರು ಕಡಮೆ ? (ಯಾರು+ಇಗೆ)

೧೨. ಸಪ್ತಮೀ ವಿಭಕ್ತಿ :

ಮೇಲು, ಕೆಳಗು, ಹಿಂದು ಮುಂದು ಮೊದಲಾದ ಸ್ಥಾನ ದಿಕ್ಕುಗಳನ್ನು ಹೇಳುವ ನಾಮವಾಚಕಗಳಿಗೆ ಸಪ್ತಮೀ ವಿಭಕ್ತಿಯಲ್ಲಿ—ಎ ಎಂಬ ಪ್ರತ್ಯಯವು ಸೇರುತ್ತದೆ.

ಉದಾಹರಣೆ.

ಈ ಗಂಟನ್ನು ಪೆಟ್ಟಿಗೆಯ ಮೇಲೆ ಇಡು. (ಮೇಲು+ಎ)
ದಿಂಬಿನ ಕೆಳಗೆ ಒಂದು ಕಾಗದವನ್ನು ಇಟ್ಟಿದ್ದೇನೆ. (ಕೆಳಗು+ಎ)
ಮುಂದೆ ಕಳ್ಳರು, ಹಿಂದೆ ಹುಲಿ.
(ಮುಂದು+ಎ, ಹಿಂದು+ಎ)

ಹೀಗೆಯೇ :—ಒಳಗು—ಒಳಗೆ, ಹೊರಗು—ಹೊರಗೆ.

೧೩. ಸಂಬೋಧನ ವಿಭಕ್ತಿ :

ಸಂಬೋಧನ ವಿಭಕ್ತಿಯಲ್ಲಿ ಎ, ಏ ಎಂಬ ಪ್ರತ್ಯಯಗಳು ಪ್ರಕೃತಿಗೆ ಸೇರುತ್ತವೆ.

ಉದಾಹರಣೆ

ಏಕವಚನ :
ಅರಸನೆ, ಬಿನ್ನಹವೊಂದುಂಟು. (ಅರಸ+ನ್+ಎ
ಗಿಳಿಯೆ, ನೀನಾದರೂ ಒಂದು ಕಥೆಯನ್ನು ಹೇಳು. (ಗಿಳಿ+ಎ)
ದೇವರೇ, ನನಗೆ ಧೈರ್ಯವನ್ನು ಕೊಡು. (ದೇವರು+ಏ)
ಹಾವೇ ಹಾವೇ, ಹೆಡೆ ಬಿಚ್ಚು. (ಹಾವು+ಏ)

ಬಹುವಚನ :
ತಪಸ್ವಿಗಳೆ, ತಮ್ಮ ಆಶ್ರಮವೆಲ್ಲಿ? (ತಪಸ್ವಿಗಳು+ಎ)
ಮಹಿಳೆಯರೇ, ಮಹನೀಯರೇ—
(ಮಹಿಳೆಯರು+ಏ, ಮಹನೀಯರು+ಏ)

ಏಕವಚನದಲ್ಲಿ, ಪ್ರಕೃತಿ ರೂಪವನ್ನೇ ಸಂಬೋಧನ ವಿಭಕ್ತಿಯ ರೂಪವಾಗಿ ಉಪಯೋಗಿಸುವುದು ಹೆಚ್ಚು ; ಆಗ ಪ್ರಕೃತಿಯ ಕೊನೆಯ ಸ್ವರವು ದೀರ್ಘವಾಗುವುದೂ ಉಂಟು.

ಉದಾಹರಣೆ.

ಅಕ್ಕ, ಪಗಡೆಯಾಡೋಣ, ಬಾ.
ಅಕ್ಕಾ, ಪಗಡೆಯಾಡೋಣ, ಬಾ.
ಕಾಡಿನಲ್ಲಿ ಒಬ್ಬಳೇ ಉಳಿದಮೇಲೆ ಸೀತೆ, 'ಹಾ ರಾಮಾ' ಎಂದು ಅತ್ತಳು.
ಗೌರೀ, ನನ್ನ ಬಾಚಣಿಗೆಯನ್ನು ಕಂಡೆಯ?

ಬಹುವಚನದಲ್ಲಿ ಎ, ಏ ಎಂಬುದಲ್ಲದೆ, ಅ, ಆ, ಇರ, ಇರಾ ಎಂಬ ಪ್ರತ್ಯಯಗಳೂ ಸಂದರ್ಭಾನುಸಾರವಾಗಿ ಬರುತ್ತವೆ.

ಉದಾಹರಣೆ.

ನನ್ನ ಅಣ್ಣಂದಿರಾ, ಅಕ್ಕಂದಿರಾ, ನಿಮ್ಮ ಮನಸ್ಸು ಇನ್ನೂ ಮಾಗಿಗ ಲ್ಲವೆ! (ಅಣ್ಣಂದಿರು+ಆ, ಅಕ್ಕಂದಿರು+ಆ)

ಹುಡುಗರಿರಾ, ನನ್ನ ಹಣ್ಣಿನ ಗೂಡೆಯನ್ನೇಕೆ ಉರುಳಿಸಿದಿರಿ? (ಹುಡುಗರು+ಇರಾ)

ಸರ್ವನಾಮಗಳಿಗೆ ಸಂಬೋಧನ ವಿಭಕ್ತಿಯ ರೂಪಗಳು ಇಲ್ಲ.

## ಆಗಮಗಳು

೧೪. ಕೆಳಗೆ ಕೊಟ್ಟಿರುವ ವಿಭಕ್ತಿ ರೂಪಗಳನ್ನು ನೋಡಿ.

೧. ಹೊಳೆಯಿಂದ=ಹೊಳೆ+ಯ್+ಇಂದ
೨. ಅಣ್ಣನಿಂದ=ಅಣ್ಣ+ನ್+ಇಂದ
೩. ಮರದಿಂದ=ಮರ+ದ್+ಇಂದ
೪. ಹಸುವಿನಿಂದ=ಹಸು+ಇನ್+ಇಂದ
೫. ಅದರಿಂದ=ಅದು+ಅರ್+ಇಂದ

ಐದು ಕಡೆಗಳಲ್ಲೂ, ಪ್ರಕೃತಿ ಪ್ರತ್ಯಯಗಳ ನಡುವೆ ಕೆಲವು ವರ್ಣಗಳು ಬಂದು ಸೇರಿರುವುದು ಸರಿಯಷ್ಟೆ. ಇವುಗಳಲ್ಲಿ, 'ಹೊಳೆಯಿಂದ' ಎಂಬ ಕಡೆ ಸೇರಿರುವ ಯಕಾರವಂತೂ ಸಂಧಿಯ ಸಾಮಾನ್ಯ ನಿಯಮದಂತೆ ಬಂದಿರುವ ಆಗಮ. ಪ್ರಕೃತಿ ಪ್ರತ್ಯಯಗಳು ಸೇರುವಾಗ ಸಂಧಿಕಾರ್ಯಗಳು ತಪ್ಪದೆ ನಡೆಯಬೇಕಾಗಿರುವುದರಿಂದ ಇಲ್ಲಿ ಈ ಯಕಾರಾಗಮವು ಬಂದಿದೆ.

ಅಣ್ಣನಿಂದ, ಮರದಿಂದ, ಹಸುವಿನಿಂದ ಎಂಬ ಕಡೆಗಳಲ್ಲಿ ಬಂದಿರುವ —ನ್—, —ದ್—, —ಇನ್— ಎಂಬುವು ಇಂಥ ಆಗಮಗಳಲ್ಲ. ಕೆಲವು ವಿಭಕ್ತಿ ಪ್ರತ್ಯಯಗಳು ಪ್ರಕೃತಿಗೆ ಹತ್ತುವಾಗ ಮಾತ್ರ ಇವು ನಡುವೆ ಸೇರುತ್ತವೆ; ಅಲ್ಲದೆ, ಬೇರೆ ಬೇರೆ ಪ್ರಕೃತಿಗಳಿಗೆ ಸೇರುವುದಕ್ಕೆ ಬೇರೆ ಬೇರೆ ಆಗಮಗಳಿವೆ. ಮೇಲಿನ ಉದಾಹರಣೆಗಳಲ್ಲಿ ಬೇರೆ ಬೇರೆ ಪ್ರಕೃತಿಗಳಿಗೆ ಬೇರೆ ಬೇರೆ ಆಗಮಗಳು ಸೇರಿರುವುದನ್ನು ನೋಡಿ.

ಕೆಲವು ಪ್ರಕೃತಿಗಳಿಗೆ ಈ ಆಗಮಗಳು ಸೇರುವುದೇ ಇಲ್ಲ.

ಉದಾಹರಣೆ.

ಹೊಳೆಯನ್ನು, ಹೊಳೆಗೆ, ಹೊಳೆಯಲ್ಲಿ.

೧೫. ಈ ಆಗಮಗಳು ಬರುವುದು ಏಕವಚನದಲ್ಲಿ ಮಾತ್ರ. ಬಹುವಚನದಲ್ಲಿ ಯಾವ ಪ್ರಕೃತಿಗಳ ಮೇಲೂ ಇವು ಹತ್ತುವುದಿಲ್ಲ.

ಉದಾಹರಣೆ.

ಅರಸರಿಂದ (ಅರಸರು+ಇಂದ)
ಅಣ್ಣಂದಿರಿಂದ (ಅಣ್ಣಂದಿರು+ಇಂದ)
ಮರಗಳಿಂದ (ಮರಗಳು+ಇಂದ)
ಹಸುಗಳಿಂದ (ಹಸುಗಳು+ಇಂದ)
ಅವುಗಳಿಂದ (ಅವುಗಳು+ಇಂದ)
ದೊಡ್ಡವರಿಂದ (ದೊಡ್ಡವರು+ಇಂದ)

೧೬. ಈ ಆಗಮಗಳು ಯಾವುವು, ಎಲ್ಲೆಲ್ಲಿ ಸೇರುವುವು ಎಂಬುದನ್ನು ಕೆಳಗೆ ತಿಳಿಸಿದೆ.

೧೭. (೧) –ನ್– :

(ಅ) ಅಕಾರಾಂತವಾದ ಪುಲ್ಲಿಂಗ ಸ್ತ್ರೀಲಿಂಗ ಪ್ರಕೃತಿಗಳಿಗೆ ಎಲ್ಲಾ ವಿಭಕ್ತಿ ಪ್ರತ್ಯಯಗಳು ಹತ್ತುವಾಗಲೂ ನಡುವೆ ನಕಾರಾಗಮ ಬರುತ್ತದೆ.

ಉದಾಹರಣೆ.

ಅವರ ಮನೆ ಎಲ್ಲಿದೆ ಎನ್ನುವುದು ಈ ಹುಡುಗನನ್ನು ಕೇಳಿದರೆ ಗೊತ್ತಾಗಬಹುದು. (ಹುಡುಗ+ನ್+ಅನ್ನು)
ನಮ್ಮ ಹುಡುಗನಿಗೆ ಪರೀಕ್ಷೆಯಲ್ಲಿ ಏಕೆ ತೇರ್ಗಡೆಯಾಗಲಿಲ್ಲ? (ಹುಡುಗ+ನ್+ಇಗೆ)
ಭಾವ ಬಂದು ಅಕ್ಕನನ್ನು ಕರೆದುಕೊಂಡು ಹೋದನು. (ಅಕ್ಕ+ನ್+ಅನ್ನು)
ಹಿರಿಯಕ್ಕನ ಚಾಳಿ ಮನೆಗೆಲ್ಲಾ. (ಅಕ್ಕ+ನ್+ಅ)
ಹೀಗೆಯೇ:—ಹುಡುಗನನ್ನು, ಹುಡುಗನಿಂದ, ಹುಡುಗನ, ಹುಡುಗನಲ್ಲಿ, ಇತ್ಯಾದಿ.

(ಆ) ಬಸವ, ಗರುಡ, ಕೋಣ ಮೊದಲಾದ ಕೆಲವು ಅಕಾರಾಂತ ನಪುಂಸಕ ಪ್ರಕೃತಿಗಳಿಗೆ ವಿಭಕ್ತಿ ಪ್ರತ್ಯಯಗಳು ಹತ್ತುವಾಗ ನಡುವೆ ನಕಾರಾಗಮ ಬರುತ್ತದೆ.

ಉದಾಹರಣೆ.

ಈ ಬಸವನಿಗೆ ಮುದ್ರೆಯನ್ನು ಒತ್ತಿದ್ದಾರೆ. (ಬಸವ+ನ್+ಇಗೆ)
ಗರುಡನನ್ನು ಕಂಡರೆ ಹಾವು ಹೆದರುತ್ತದೆ. (ಗರುಡ+ನ್+ಅನ್ನು)
ಕೋಣನ ಮುಂದೆ ಕಿನ್ನರಿ ಬಾರಿಸಿದ ಹಾಗೆ. (ಕೋಣ+ನ್+ಅ)
ಹೀಗೆಯೇ:—ಬಸವನನ್ನು, ಬಸವನಿಂದ, ಬಸವನ, ಬಸವನಲ್ಲಿ, ಇತ್ಯಾದಿ.

೧೮. (೨)-ದ್-, (೩) -ವ್-

(ಅ) ಅಕಾರಾಂತವಾದ ನಪುಂಸಕಲಿಂಗ ಪ್ರಕೃತಿಗಳಿಗೆ ತೃತೀಯಾ, ಷಷ್ಠೀ, ಸಪ್ತಮೀ ವಿಭಕ್ತಿ ಪ್ರತ್ಯಯಗಳು ಸೇರುವಾಗ ನಡುವೆ ದಕಾರಾಗಮ ಬರುತ್ತದೆ.

ಉದಾಹರಣೆ.

ತೃತೀಯಾ : ಅಟ್ಟದಿಂದ ಬಿದ್ದವನನ್ನು ದಡಿಯಿಂದ ಹೊಡೆದರು. (ಅಟ್ಟ+ದ್+ಇಂದ)
ಷಷ್ಠಿ : ಪುಸ್ತಕದ ಮೇಲೆಲ್ಲ ಧೂಳು ಕವಿದಿದೆ. (ಪುಸ್ತಕ+ದ್+ಅ)
ಸಪ್ತಮೀ : ಹೊಲದಲ್ಲಿ ಕಳೆ ಕೀಳುತ್ತಿದ್ದಾರೆ. (ಹೊಲ+ದ್+ಅಲ್ಲಿ)

(ಆ) ದ್ವಿತೀಯಾ ವಿಭಕ್ತಿಯಲ್ಲೂ, ಪ್ರಥಮಾವಿಭಕ್ತಿಯಲ್ಲೂ ಸಂಬೋಧನವಿಭಕ್ತಿಗಳಲ್ಲಿ ಪ್ರತ್ಯಯ ಹತ್ತುವಾಗಲೂ ಪ್ರಕೃತಿ ಪ್ರತ್ಯಯಗಳಿಗೆ ನಡುವೆ ವಕಾರಾಗಮ ಬರುತ್ತದೆ.

ಉದಾಹರಣೆ.

ಪ್ರಥಮಾ : ಬಡತನವು ತುಂಬ ಕೆಟ್ಟದ್ದು. (ಬಡತನ+ವ್+ಉ)
ದ್ವಿತೀಯಾ : ಹೊಲವನ್ನು ಉಳುವಾಗ ರೈತನಿಗೆ ಒಂದು ಪೆಟ್ಟಿಗೆ ಸಿಕ್ಕಿತು. (ಹೊಲ+ವ್+ಅನ್ನು)
ಸಂಬೋಧನ : ನೆಲವೇ, ಜಲವೇ, ನೀವೂ ಈ ಮಾತಿಗೆ ಸಾಕ್ಷಿಗಳಾಗಿರಿ. (ನೆಲ+ವ್+ಏ, ಜಲ+ವ್+ಏ)

(ಇ) ಚತುರ್ಥೀ ವಿಭಕ್ತಿಯಲ್ಲಿ ಯಾವ ಆಗಮವೂ ಬರುವುದಿಲ್ಲ.

ಉದಾಹರಣೆ.

ಹೊಲಕ್ಕೆ, ಬಡತನಕ್ಕೆ, ಇತ್ಯಾದಿ.

೧೯. (೪) -ಇನ್-

(ಅ) ಉಕಾರಾಂತಗಳಾದ ನಾಮವಾಚಕಗಳಿಗೆಲ್ಲ ತೃತೀಯಾ, ಷಷ್ಠೀ, ಸಪ್ತಮೀ ವಿಭಕ್ತಿಗಳಲ್ಲಿ 'ಇನ್' ಎಂಬ ಆಗಮ ಬರುತ್ತದೆ.

ಉದಾಹರಣೆ.

ತೃತೀಯಾ : ಕೆಲಸಕ್ಕೆ ಬಾರದ ಮಾತಿನಿಂದ ಏನು ಫಲ ? (ಮಾತು+ಇನ್+ಇಂದ)
ಗುರುವಿನಿಂದ ಪಾಠವನ್ನು ಮಾತ್ರವಲ್ಲದೆ ಶೀಲವನ್ನೂ ಕಲಿಯಬೇಕು. (ಗುರು+ಇನ್+ಇಂದ)

ಷಷ್ಠೀ : ಊರಿನ ಹತ್ತಿರಕ್ಕೆ ಬಂದವಷ್ಟೆ. (ಊರು+ಇನ+ಅ)
ನಿನ್ನ ನಗುವಿನ ಅರ್ಥವೇನು ? (ನಗು+ಇನ್+ಅ)
ಸಪ್ತಮೀ : ಆ ಹಡಗಿನಲ್ಲಿ ವೈದ್ಯನೇ ಇರಲಿಲ್ಲವೇ ?
(ಹಡಗು+ಇನ್+ಅಲ್ಲಿ)
ಜೇಡರ ಹುಳುವಿನಲ್ಲಿ ನಿನಗೇಕೆ ಇಷ್ಟೊಂದು ಕುತೂಹಲ ?
(ಹುಳು+ಇನ್+ಅಲ್ಲಿ)

ಕೆಳಗಿನ ಉದಾಹರಣೆಗಳನ್ನು ನೋಡಿ:

ವರ್ತಮಾನ ಊರಿಂದ ಊರಿಗೆ ಹಬ್ಬಿತು. (ಊರು+ಇಂದ)
ಎತ್ತುಗಳು ಊರ ಕಡೆಗೆ ತಿರುಗಿದುವು. (ಊರು+ಅ)
ಹಣದ ಚೀಲವನ್ನು ಊರಲ್ಲಿ ಬಿಟ್ಟು ಬಂದೆನು. (ಊರು+ಅಲ್ಲಿ)

ಹೀಗೆ ' ಇನ್ ' ಆಗಮ ಕೆಲವು ವೇಳೆ ಬಾರದಿರುವುದೂ ಉಂಟು.

(ಆ) ಋಕಾರಾಂತ ನಾಮವಾಚಕಗಳಲ್ಲೂ ಈ ಆಗಮ ಬರುತ್ತದೆ.

ಉದಾಹರಣೆ.

ಕರ್ತೃವಿನಿಂದ, ಕರ್ತೃವಿನ, ಕರ್ತೃವಿನಲ್ಲಿ, ಇತ್ಯಾದಿ.

೨೦. (೫) –ಅರ್–

–ದ್–,–ಇನ್–ಇವುಗಳಂತೆಯೇ-ಅರ್-ಎಂಬುದೂ ತೃತೀಯಾ, ಷಷ್ಠೀ, ಸಪ್ತಮೀ ವಿಭಕ್ತಿಗಳ ಹಿಂದೆ ಬರುವ ಆಗಮ. ಇದು–

(ಅ) ನಪುಂಸಕಲಿಂಗ ಏಕವಚನದ ಗುಣವಾಚಕಗಳಿಗೆ ಸೇರುತ್ತದೆ

ಉದಾಹರಣೆ.

ಚಿಕ್ಕದರಿಂದ ದೊಡ್ಡದರ ಸ್ವಭಾವವನ್ನು ಊಹಿಸಬೇಕಾಗಿದೆ.
(ಚಿಕ್ಕದು+ಅರ್+ಇಂದ, ದೊಡ್ಡದು+ಅರ್+ಅ
ಹೊಸದರಲ್ಲಿ ಅಗಸ ಗೋಣಿಯನ್ನು ಎತ್ತಿ ಎತ್ತಿ ಒಗೆದನಂತೆ.
(ಹೊಸದು+ಅರ್+ಅಲ್ಲಿ)

ಹೀಗೆಯೇ :—ಅಂಥದರಿಂದ, ಅಂಥದರ, ಅಂಥದರಲ್ಲಿ ; ಅಷ್ಟರಿಂದ, ಅಷ್ಟರ ಅಷ್ಟರಲ್ಲಿ ; ಎಲ್ಲದರಿಂದ, ಎಲ್ಲದರ, ಎಲ್ಲದರಲ್ಲಿ, ಇತ್ಯಾದಿ.

(ಆ) ಉಕಾರಾಂತಗಳಾದ ಎಲ್ಲ ಸಂಖ್ಯಾ ವಾಚಕಗಳಿಗೂ ಸೇರುತ್ತದೆ.

ಉದಾಹರಣೆ.

ಒಂದರಿಂದ ಹತ್ತರವರೆಗೆ ಮಗ್ಗಿಯನ್ನು ಹೇಳು.
(ಒಂದು+ಅರ್+ಇಂದ, ಹತ್ತು+ಅರ್+ಅ)
ಹದಿನಾಲ್ಕರಲ್ಲಿ ಆರನ್ನು ಕಳೆದರೆ ಎಷ್ಟು ಉಳಿಯುತ್ತದೆ.
(ಹದಿನಾಲ್ಕು+ಅರ್+ಅಲ್ಲಿ)
ಇತ್ಯಾದಿ.

(ಇ) ಅದು, ಇದು, ಯಾವುದು ಎಂಬ ಸರ್ವನಾಮಗಳಿಗೆ ಸೇರುತ್ತದೆ.

ಉದಾಹರಣೆ.

ಅದರ ಬೆಲೆಯನ್ನು ಕಟ್ಟುವುದು ಅಸಾಧ್ಯ. (ಅದು+ಅರ್+ಅ)
ನನ್ನ ಪ್ರಾಣವೇ ಇದರಲ್ಲಿ ನಿಂತಿದೆ. (ಇದು+ಅರ್+ಅಲ್ಲಿ)
ಇಷ್ಟು ಅನರ್ಥವೂ ಯಾವುದರಿಂದ ಆಯಿತು ? (ಯಾವುದು+ಅರ್+ಇಂದ)

೨೧. ಮೇಲಿನ ನಿಯಮಗಳು ಅನ್ವಯಿಸಿದ ಮೇಲೆ ರೂಪಗಳು ಹೇಗಾಗುತ್ತವೆಂಬುದನ್ನು ತಿಳಿಸುವುದಕ್ಕೂ, ಕೆಲವು ವಿಶೇಷ ಶಬ್ದಗಳ ರೂಪಗಳನ್ನು ತಿಳಿಸುವುದಕ್ಕೂ ಬೇರೆ ಬೇರೆ ನಾಮಪ್ರಕೃತಿಗಳ ವಿಭಕ್ತಿರೂಪಗಳನ್ನು ಕೆಳಗೆ ಕೊಟ್ಟಿದೆ:

**೨೨. ನಾಮವಾಚಕಗಳು :**

ಅಕಾರಾಂತ ಪುಲ್ಲಿಂಗ : 'ಹುಡುಗ'

| | ಏಕ. | ಬಹು. |
|---|---|---|
| ಪ್ರ. | ಹುಡುಗ (ನು) | ಹುಡುಗರು |
| ದ್ವಿ. | ಹುಡುಗನನ್ನು | ಹುಡುಗರನ್ನು |
| ತೃ. | ಹುಡುಗನಿಂದ | ಹುಡುಗರಿಂದ |
| ಚ. | ಹುಡುಗನಿಗೆ | ಹುಡುಗರಿಗೆ |
| ಷ. | ಹುಡುಗನ | ಹುಡುಗರ |
| ಸ. | ಹುಡುಗನಲ್ಲಿ | ಹುಡುಗರಲ್ಲಿ |
| ಸಂ. | ಹುಡುಗನೇ, | ಹುಡುಗರೇ, |
| | ಹುಡುಗಾ, | ಹುಡುಗರಿರಾ |
| | ಇತ್ಯಾದಿ | ಇತ್ಯಾದಿ. |

ಅಕಾರಾಂತ ಸ್ತ್ರೀಲಿಂಗ : 'ಅಕ್ಕ'

| | ಏಕ. | ಬಹು. |
|---|---|---|
| ಪ್ರ. | ಅಕ್ಕ (ನು) | ಅಕ್ಕಂದಿರು |
| ದ್ವಿ. | ಅಕ್ಕನನ್ನು | ಅಕ್ಕಂದಿರನ್ನು |
| ತೃ. | ಅಕ್ಕನಿಂದ | ಅಕ್ಕಂದಿರಿಂದ |
| ಚ. | ಅಕ್ಕನಿಗೆ | ಅಕ್ಕಂದಿರಿಗೆ |
| ಷ. | ಅಕ್ಕನ | ಅಕ್ಕಂದಿರ |
| ಸ. | ಅಕ್ಕನಲ್ಲಿ | ಅಕ್ಕಂದಿರಲ್ಲಿ |
| ಸಂ. | ಅಕ್ಕನೇ, | ಅಕ್ಕಂದಿರೇ, |
| | ಅಕ್ಕಾ, | ಅಕ್ಕಂದಿರಾ, |
| | ಇತ್ಯಾದಿ | ಇತ್ಯಾದಿ. |

ಅಕಾರಾಂತ ನಪುಂಸಕಲಿಂಗ : 'ಬಸವ'

| | | |
|---|---|---|
| ಪ್ರ. | ಬಸವ (ನು) | ಬಸವಗಳು |
| ದ್ವಿ. | ಬಸವನನ್ನು | ಬಸವಗಳನ್ನು |
| ತೃ. | ಬಸವನಿಂದ | ಬಸವಗಳಿಂದ |
| ಚ. | ಬಸವನಿಗೆ | ಬಸವಗಳಿಗೆ |
| ಷ. | ಬಸವನ | ಬಸವಗಳ |
| ಸ. | ಬನವನಲ್ಲಿ | ಬಸವಗಳಲ್ಲಿ |
| ಸಂ. | ಬಸವನೇ, | ಬಸವಗಳೇ, |
| | ಬಸವಾ | ಬಸವಗಳಿರಾ |

ಅಕಾರಾಂತ ನಪುಂಸಕಲಿಂಗ : 'ಮರ'

| | | |
|---|---|---|
| ಪ್ರ. | ಮರ (ವು | ಮರಗಳು |
| ದ್ವಿ. | ಮರವನ್ನು | ಮರಗಳನ್ನು |
| ತೃ. | ಮರದಿಂದ | ಮರಗಳಿಂದ |
| ಚ. | ಮರಕ್ಕೆ | ಮರಗಳಿಗೆ |
| ಷ. | ಮರದ | ಮರಗಳ |
| ಸ. | ಮರದಲ್ಲಿ | ಮರಗಳಲ್ಲಿ |
| ಸಂ. | ಮರವೇ | ಮರಗಳೇ |
| | | ಮರಗಳಿರಾ |

ಇಕಾರಾಂತ ಸ್ತ್ರೀಲಿಂಗ: 'ಗೌರಿ'

| | | |
|---|---|---|
| ಪ್ರ. | ಗೌರಿ | ಗೌರಿಯರು |
| ದ್ವಿ. | ಗೌರಿಯನ್ನು | ಗೌರಿಯರನ್ನು |
| ತೃ. | ಗೌರಿಯಿಂದ | ಗೌರಿಯರಿಂದ |
| ಚ. | ಗೌರಿಗೆ | ಗೌರಿಯರಿಗೆ |
| | ಇತ್ಯಾದಿ | |

ಇಕಾರಾಂತ ನಪುಂಸಕಲಿಂಗ: 'ಗಿಳಿ'

| | | |
|---|---|---|
| ಪ್ರ. | ಗಿಳಿ | ಗಿಳಿಗಳು |
| ದ್ವಿ. | ಗಿಳಿಯನ್ನು | ಗಿಳಿಗಳನ್ನು |
| ತೃ. | ಗಿಳಿಯಿಂದ | ಗಿಳಿಗಳಿಂದ |
| ಚ. | ಗಿಳಿಗೆ | ಗಿಳಿಗಳಿಗೆ |
| | ಇತ್ಯಾದಿ. | |

ಈಕಾರಾಂತ ಶಬ್ದವಾದ 'ಸ್ತ್ರೀ' ಎಂಬುದನ್ನು 'ಗೌರಿ' ಎಂಬುದರಂತೆಯೂ, 'ಶ್ರೀ' ಎಂಬುದನ್ನು 'ಗಿಳಿ' ಎಂಬುದರಂತೆಯೂ ನಡೆಸಬಹುದು.

ಉದಾಹರಣೆ.

ಸ್ತ್ರೀಯನ್ನು–ಸ್ತ್ರೀಯರನ್ನು ; ಶ್ರೀಗೆ–ಶ್ರೀಗಳಿಗೆ, ಇತ್ಯಾದಿ,

ಏಕಾರಾಂತ ಶಬ್ದಗಳನ್ನೂ ಗೌರಿ, ಗಿಳಿ ಎಂಬುವುಗಳಂತೆ ನಡೆಸಬಹುದು.

ಉದಾಹರಣೆ.

ಸೊಸೆ : ಸೊಸೆಯಿಂದ–ಸೊಸೆಯರಿಂದ; ದೊರೆ: ದೊರೆಗೆ–ದೊರೆಗಳಿಗೆ, ಇತ್ಯಾದಿ,

| ಉಕಾರಾಂತ ಪುಲ್ಲಿಂಗ: 'ಗುರು' | | ಉಕಾರಾಂತ ನಪುಂಸಕಲಿಂಗ : 'ಊರು' | |
|---|---|---|---|
| ಗುರು | ಗುರುಗಳು | ಊರು | ಊರುಗಳು |
| ಗುರುವನ್ನು | ಗುರುಗಳನ್ನು | ಊರನ್ನು | ಊರುಗಳನ್ನು |
| ಗುರುವಿನಿಂದ | ಗುರುಗಳಿಂದ | ಊರಿನಿಂದ, ಊರಿಂದ | ಊರುಗಳಿಂದ |
| ಗುರುವಿಗೆ | ಗುರುಗಳಿಗೆ | ಊರಿಗೆ | ಊರುಗಳಿಗೆ |
| ಗುರುವಿನ | ಗುರುಗಳ | ಊರಿನ, ಊರ | ಊರುಗಳ |
| ಗುರುವಿನಲ್ಲಿ | ಗುರುಗಳಲ್ಲಿ | ಊರಿನಲ್ಲಿ, ಊರಲ್ಲಿ | ಊರುಗಳಲ್ಲಿ |
| ಗುರುವೇ, | ಗುರುಗಳೇ | ಊರೇ | ಊರುಗಳೇ |
| ಇತ್ಯಾದಿ | ಇತ್ಯಾದಿ. | ಇತ್ಯಾದಿ | ಇತ್ಯಾದಿ. |

ಋಕಾರಾಂತಗಳಾದ 'ಕರ್ತೃ' ಮೊದಲಾದುವನ್ನೂ 'ಗುರು' ಎಂಬುದರಂತೆ ನಡೆಸಬಹುದು.

ಉದಾಹರಣೆ.

ಕರ್ತೃ–ಕರ್ತೃಗಳು, ಕರ್ತೃವಿನ–ಕರ್ತೃಗಳ, ಇತ್ಯಾದಿ.

## ೨೩. ಗುಣವಾಚಕ, ಸಂಖ್ಯಾವಾಚಕ, ಸರ್ವನಾಮಗಳು.

'ದೊಡ್ಡ'

| ಪುಂಸ್ತ್ರೀ. | | ನಪುಂಸಕ. | |
|---|---|---|---|
| ದೊಡ್ಡವನು, ದೊಡ್ಡವಳು | ದೊಡ್ಡವರು | ದೊಡ್ಡದು | ದೊಡ್ಡವು |
| ದೊಡ್ಡವನನ್ನು, ದೊಡ್ಡವಳನ್ನು | ದೊಡ್ಡವರನ್ನು | ದೊಡ್ಡದನ್ನು | ದೊಡ್ಡವನ್ನು |
| ದೊಡ್ಡವನಿಂದ, ದೊಡ್ಡವಳಿಂದ | ದೊಡ್ಡವರಿಂದ | ದೊಡ್ಡದರಿಂದ | ದೊಡ್ಡವುಗಳಿಂದ |
| ದೊಡ್ಡವನಿಗೆ, ದೊಡ್ಡವಳಿಗೆ | ದೊಡ್ಡವರಿಗೆ | ದೊಡ್ಡದಕ್ಕೆ | ದೊಡ್ಡವಕ್ಕೆ |

'ದೊಡ್ಡ'

| ಪುಂಸ್ತ್ರೀ. | | ನಪುಂಸಕ. | |
|---|---|---|---|
| ಏಕ. | ಬಹು. | ಏಕ. | ಬಹು. |
| ದೊಡ್ಡವನ<br>ದೊಡ್ಡವಳ | ದೊಡ್ಡವರ | ದೊಡ್ಡದರ | ದೊಡ್ಡವುಗಳ |
| ದೊಡ್ಡವನಲ್ಲಿ<br>ದೊಡ್ಡವಳಲ್ಲಿ | ದೊಡ್ಡವರಲ್ಲಿ | ದೊಡ್ಡದರಲ್ಲಿ | ದೊಡ್ಡವುಗಳಲ್ಲಿ |
| ದೊಡ್ಡವನೇ<br>ದೊಡ್ಡವಳೇ | ದೊಡ್ಡವರೇ | ದೊಡ್ಡದೇ | ದೊಡ್ಡವೇ |

ಇದರಂತೆಯೇ—ಅವನು, ಅವಳು, ಅವರು, ಅದು, ಅವು ಎಂಬ ಸರ್ವನಾಮಗಳನ್ನು ನಡೆಸಬಹುದು.

ಅಷ್ಟು, ಇಷ್ಟು, ಎಷ್ಟು ಎಂಬ ಗುಣವಾಚಕಗಳು 'ದೊಡ್ಡದು' ಎಂಬುದರಂತೆ ಏಕವಚನದಲ್ಲಿ ಮಾತ್ರ ನಡೆಯುತ್ತವೆ. ಕೆಲವು, ಹಲವು ಎಂಬ ಗುಣವಾಚಕಗಳು 'ದೊಡ್ಡವು' ಎಂಬುದರಂತೆ ಬಹುವಚನದಲ್ಲಿ ಮಾತ್ರ ನಡೆಯುತ್ತವೆ.

ನಪುಂಸಕಲಿಂಗ ಬಹುವಚನದ ಗುಣವಾಚಕಗಳಿಗೂ ಸರ್ವನಾಮಗಳಿಗೂ ತೃತೀಯಾ, ಷಷ್ಠೀ, ಸಪ್ತಮೀ ವಿಭಕ್ತಿ ಪ್ರತ್ಯಯಗಳು ಹತ್ತುವಾಗ ಪ್ರಕೃತಿಗೂ ಪ್ರತ್ಯಯಕ್ಕೂ ನಡುವೆ '-ಗಳು' ಎಂಬ ಬಹುವಚನ ಪ್ರತ್ಯಯ ತಪ್ಪದೆ ಬರುತ್ತದೆ ಎಂಬುದು ಮೇಲಿನ ರೂಪಗಳಿಂದ ಗೊತ್ತಾಗುತ್ತದೆ. ಮಿಕ್ಕ ವಿಭಕ್ತಿಗಳಲ್ಲಿ ದೊಡ್ಡವು, ದೊಡ್ಡವುಗಳು; ದೊಡ್ಡವನ್ನು ದೊಡ್ಡವುಗಳನ್ನು; ದೊಡ್ಡವಕ್ಕೆ, ದೊಡ್ಡವುಗಳಿಗೆ; ದೊಡ್ಡವೇ, ದೊಡ್ಡವುಗಳೇ— ಹೀಗೆ ಎರಡೆರಡು ರೂಪಗಳುಂಟು.

ಸಂಖ್ಯಾವಾಚಕಗಳ ರೂಪಗಳೆಲ್ಲ ದೊಡ್ಡದು ಎಂಬುದರ ರೂಪಗಳಂತೆ ಆಗುತ್ತವೆ.

ಉದಾಹರಣೆ.

ಒಂದು—ಒಂದನ್ನು—ಒಂದರಿಂದ—ಒಂದಕ್ಕೆ—ಒಂದರ—ಒಂದರಲ್ಲಿ;
ಎರಡು—ಎರಡನ್ನು—ಎರಡರಿಂದ—ಎರಡಕ್ಕೆ—ಎರಡರ—ಎರಡರಲ್ಲಿ, ಇತ್ಯಾದಿ.

ಸಾವಿರ, ಲಕ್ಷ, ಕೋಟಿ, ಅರ್ಬುದ ಮೊದಲಾದ ಸಂಖ್ಯಾವಾಚಕಗಳು ಮರ, ಗಿಳಿ ಎಂಬ ನಾಮವಾಚಕಗಳಂತೆ ನಡೆಯುತ್ತವೆ.

ಉದಾಹರಣೆ.

ಸಾವಿರನ್ನು—ಸಾವಿರದಿಂದ—ಸಾವಿರಕ್ಕೆ;
ಕೋಟಿಯನ್ನು—ಕೋಟಿಯಿಂದ—ಕೋಟಿಗೆ, ಇತ್ಯಾದಿ.

'ಎಲ್ಲ' ಎಂಬುದರ ರೂಪಗಳು :

| ಏಕ. | ಬಹು. |
|---|---|
| ಎಲ್ಲ, ಎಲ್ಲಾ | ಎಲ್ಲ (ವು), ಎಲ್ಲಾ |
| ಎಲ್ಲದನ್ನು | ಎಲ್ಲವನ್ನು, ಎಲ್ಲವುಗಳನ್ನು |
| ಎಲ್ಲದರಿಂದ | ಎಲ್ಲವುಗಳಿಂದ |
| ಎಲ್ಲದಕ್ಕೆ, ಎಲ್ಲಕ್ಕೆ | ಎಲ್ಲಕ್ಕೆ, ಎಲ್ಲವುಗಳಿಗೆ |
| ಎಲ್ಲದರ | ಎಲ್ಲವುಗಳ |
| ಎಲ್ಲದರಲ್ಲಿ | ಎಲ್ಲವುಗಳಲ್ಲಿ |

ನೀನು, ನಾನು, ತಾನು ಎಂಬ ಸರ್ವನಾಮಗಳ ರೂಪಗಳು ಕೆಳಗೆ ಕಂಡಂತೆ ಆಗುತ್ತವೆ:

| ನೀನು | | ನಾನು | | ತಾನು | |
|---|---|---|---|---|---|
| ನೀನು | ನೀವು | ನಾನು | ನಾವು | ತಾನು | ತಾವು |
| ನಿನ್ನನ್ನು | ನಿಮ್ಮನ್ನು | ನನ್ನನ್ನು | ನಮ್ಮನ್ನು | ತನ್ನನ್ನು | ತಮ್ಮನ್ನು |
| ನಿನ್ನಿಂದ | ನಿಮ್ಮಿಂದ | ನನ್ನಿಂದ | ನಮ್ಮಿಂದ | ತನ್ನಿಂದ | ತಮ್ಮಿಂದ |
| ನಿನಗೆ | ನಿಮಗೆ | ನನಗೆ | ನಮಗೆ | ತನಗೆ | ತಮಗೆ |
| ನಿನ್ನ | ನಿಮ್ಮ | ನನ್ನ | ನಮ್ಮ | ತನ್ನ | ತಮ್ಮ |
| ನಿನ್ನಲ್ಲಿ | ನಿಮ್ಮಲ್ಲಿ | ನನ್ನಲ್ಲಿ | ನಮ್ಮಲ್ಲಿ | ತನ್ನಲ್ಲಿ | ತಮ್ಮಲ್ಲಿ |

'ಏನು' ಎಂಬ ಸರ್ವನಾಮಕ್ಕೆ ಏಕವಚನದಲ್ಲಿ ಮಾತ್ರ ರೂಪಗಳುಂಟು.

| ರೂಪ. | ಉದಾಹರಣೆ. |
|---|---|
| ಪ್ರ. ಏನು : | ಈ ಕಾಡುಹರಟೆಯಿಂದ ನಿನಗೆ ಏನು ಬಂದೀತು ? |
| ದ್ವಿ. ಏನನ್ನು : | ನಾನು ಏನನ್ನು ಕೇಳಿದರೂ ಅವನು ಇಲ್ಲವೆನ್ನುವುದಿಲ್ಲ. |
| ತೃ. ಏತರಿಂದ : | ಸಿಮೆಂಟನ್ನು ಏತರಿಂದ ಮಾಡುತ್ತಾರೆ ? |
| ಚ. ಏತಕ್ಕೆ, ಏಕೆ : | ಚಳಿಗಾಲದಲ್ಲಿ ಮರದ ಎಲೆಗಳು ಉದುರುವುದು ಏತಕ್ಕೆ ? |
| | ಅವನು ಏಕೆ ಮುನಿಸಿಕೊಂಡಿದ್ದಾನೋ ನಾನು ಕಾಣೆ. |
| ಷ. ಏತರ : | ಇದು ಏತರ ಮಾತು ? |
| ಸ. ಏತರಲ್ಲಿ : | ಆ ಮನುಷ್ಯನಿಗೆ ಏತರಲ್ಲಿ ನಂಬಿಕೆಯಿದೆ ? |

---

## ಹತ್ತನೆಯ ಅಧ್ಯಾಯ

### ಕ್ರಿಯಾಪದದ ರೂಪಭೇದಗಳು

೧. ನಾಮಪ್ರಕೃತಿಗಳನ್ನು ವಾಕ್ಯದಲ್ಲಿ ಉಪಯೋಗಿಸುವಾಗ ಅವುಗಳಿಗೆ ಉಂಟಾಗುವ ರೂಪಭೇಧಗಳನ್ನು ಹಿಂದಿನ ಅಧ್ಯಾಯಗಳಲ್ಲಿ ಗಮನಿಸಿದೆವು. ಭಾಷೆಯ ಶಬ್ದಗಳಲ್ಲಿ ಇನ್ನೊಂದು ಮುಖ್ಯವರ್ಗವಾದ ಧಾತುಗಳಿಗೆ ಯಾವ ರೂಪಭೇದಗಳುಂಟು ಎಂಬುದನ್ನು ಇನ್ನು ವಿಚಾರ ಮಾಡಬೇಕಾಗಿದೆ.

೨. ಕ್ರಿಯೆಯನ್ನು ತಿಳಿಸುವ ಪ್ರಕೃತಿಯೇ ಧಾತು. ಕನ್ನಡದಲ್ಲಿ—ಬದುಕು, ಇಕ್ಕು, ಮುಗಿ, ಹೋಗು, ಹಿಗ್ಗು, ಮಿಂಚು, ನೆಚ್ಚು, ಈಜು, ಉಜ್ಜು, ದಾಟು, ಹುಟ್ಟು, ನುಡಿ, ಕೊಡು, ಪಡು, ಮಾಡು, ಹೊರಡು, ಒಡ್ಡು, ನಡೆ, ಕುಣಿ, ಕಾಣು, ಸುತ್ತು, ಒದೆ, ಓದು, ತಿದ್ದು, ನೆನೆ, ಎನ್ನು, ಒಪ್ಪು, ನಂಬು, ಉಬ್ಬು, ಬೇ, ಚಿಮ್ಮು, ಹೊಯ್, ಸುರಿ, ಸೇರು, ಅದಿರು, ಸೋಲು, ಒಲಿ, ಬಳಸು, ಗುಡಿಸು, ತಿಳಿ, ಬಾಳು, ಕೊಳೆ, ಕಳವಳಿಸು, ಕನ್ನಡಿಸು, ಧಗಧಗಿಸು, ಭೇದಿಸು, ಚಲಿಸು; ಬದುಕಿಸು, ಓದಿಸು, ಬೇಯಿಸು, ತಿಳಿಸು; ದುಃಖಪಡು, ಹಿಂದಿರುಗು, ಅಡ್ಡಬೀಳು—ಮೊದಲಾದ ಹಲವು ಧಾತುಗಳು ಬಳಕೆಯಲ್ಲಿವೆ. ಇವುಗಳಿಗೆಲ್ಲ ಪ್ರತ್ಯಯಗಳು ಹತ್ತಿ ಕ್ರಿಯಾಪದರೂಪಗಳು ಹೇಗೆ ಉಂಟಾಗುತ್ತವೆ ಎಂಬುದನ್ನು ನೋಡೋಣ.

೩. ಕ್ರಿಯಾಪದವು ಕರ್ತೃವಿನ ಕೆಲಸವನ್ನು ಹೇಳುತ್ತದೆ; ಕರ್ತೃವಿನ ಲಿಂಗವಚನಗಳಿಗೆ ಅನುಸಾರವಾಗಿ ಇದೂ ಕೂಡ ಲಿಂಗ ವಚನ ಗಳಲ್ಲಿ ಬೇರೆ ಬೇರೆ ರೂಪಗಳನ್ನು ಹೊಂದುತ್ತದೆ.

ಉದಾಹರಣೆ.

> ರಾಮನ ಹಿಂದೆ ಸೀತೆ ಹೊರಟಳು; ಲಕ್ಷ್ಮಣನೂ ಹೊರಟನು; ಹೀಗೆ ಮೂವರೂ ಕಾಡಿಗೆ ಹೊರಟರು.
>
> ಮೆರವಣಿಗೆಯಲ್ಲಿ ಮೊದಲು ಆನೆ ಹೊರಟಿತು; ಆದರ ಹಿಂದೆ ಸೈನ್ಯದ ಕುದುರೆಗಳು ಹೊರಟವು.

ಮೇಲಿನ ವಾಕ್ಯಗಳಲ್ಲಿ 'ಹೊರಡು' ಎಂಬ ಧಾತುವಿಗೆ ಕರ್ತೃಪದಗಳ ಲಿಂಗವಚನಗಳಿಗೆ ಅನುಸಾರವಾಗಿ, ಸ್ತ್ರೀಲಿಂಗ ಏಕವಚನ, ಪುಲ್ಲಿಂಗ ಏಕವಚನ, ಪುಂಸ್ತ್ರೀ ಬಹುವಚನ, ನಪುಂಸಕ ಏಕವಚನ, ನಂಪುಸಕ ಬಹುವಚನ—ಇಷ್ಟರಲ್ಲಿಯೂ ಬೇರೆ ಬೇರೆ ರೂಪಗಳು ಬಂದಿವೆ.

೪. ಬೇಸಗೆಯ ರಜ ಬರುತ್ತಿದ್ದ ಹಾಗೆಯೇ ಅವನು ತನ್ನ ಊರಿಗೆ ಹೊರಟನು.

ಸಾವಿತ್ರಿ ಸತ್ಯವಾನನ ಜೊತೆಯಲ್ಲಿ ನೀನೇಕೆ ಕಾಡಿಗೆ ಹೊರಟೆ?
ಇದೋ ನಾನು ಹೊರಟೆನು ; ನನ್ನನ್ನು ಯಾರೂ ತಡೆಯದಿರಿ.

ಮೇಲಿನ ವಾಕ್ಯಗಳಲ್ಲಿ 'ಅವನು' ಎಂಬ ಪ್ರಥಮಪುರುಷದ ಕರ್ತೃವಿಗೆ ಅನುಗುಣವಾಗಿ 'ಹೊರಟನು' ಎಂದೂ, 'ನೀನು' ಎಂಬ ಮಧ್ಯಮ ಪುರುಷದ ಕರ್ತೃವಿಗೆ ಅನುಗುಣವಾಗಿ 'ಹೊರಟೆ' ಎಂದೂ, 'ನಾನು' ಎಂಬ ಉತ್ತಮಪುರುಷದ ಕರ್ತೃವಿಗೆ ಅನುಗುಣವಾಗಿ 'ಹೊರಟೆನು' ಎಂದೂ ಬೇರೆ ಬೇರೆ ರೂಪಗಳು 'ಹೊರಡು' ಧಾತುವಿಗೆ ಬಂದಿವೆ.

೫. ಹೀಗೆ ಕ್ರಿಯಾಪದಕ್ಕೆ ಲಿಂಗ, ವಚನ, ಪುರುಷಗಳಲ್ಲಿ ರೂಪ ಭೇದವುಂಟು.

೬. ಕೆಳಗಿನ ವಾಕ್ಯಗಳನ್ನು ನೋಡಿ :

ಬೇಸಗೆಯ ರಜ ಬರುತ್ತಿದ್ದ ಹಾಗೆಯೇ ಅವನು ತನ್ನ ಊರಿಗೆ ಹೊರಟನು.
ಶಂಕರನು ರೈಲಿಗೆ ಹೊರಡುತ್ತಾನೆ ; ಅವನ ಗಂಟು ಎಲ್ಲಿ?
ನನ್ನ ತಮ್ಮ ನಾಡಿದ್ದು ಬೆಂಗಳೂರಿಗೆ ಹೊರಡುವನು.

ಮೇಲೆ ಬಂದಿರುವ 'ಹೊರಟನು' ಎಂಬ ರೂಪವು ಕಳೆದುಹೋದ ಕಾಲದಲ್ಲಿ ಕ್ರಿಯೆ ನಡೆಯಿತು ಎಂಬುದನ್ನು ತಿಳಿಸುತ್ತದೆ. ಕಳೆದುಹೋದ ಕಾಲಕ್ಕೆ ಭೂತಕಾಲವೆಂದೂ, ಈ ಕ್ರಿಯಾಪದರೂಪಕ್ಕೆ ಭೂತಕಾಲದ ರೂಪವೆಂದೂ ಹೆಸರು. 'ಹೊರಡುತ್ತಾನೆ' ಎಂಬುದು ಈಗ ಎಂದರೆ ವರ್ತಮಾನಕಾಲದಲ್ಲಿ ಕ್ರಿಯೆ ನಡೆಯುವುದನ್ನು ತಿಳಿಸುತ್ತದೆ. ಇದು ವರ್ತಮಾನಕಾಲದ ರೂಪ, 'ಹೊರಡುವನು' ಎಂಬುದು ಮುಂದೆ ಬರುವ ಕಾಲದಲ್ಲಿ ಎಂದರೆ ಭವಿಷ್ಯತ್‌ಕಾಲದಲ್ಲಿ ಕ್ರಿಯೆ ನಡೆಯುವುದನ್ನು ತಿಳಿಸುತ್ತದೆ. ಇದು ಭವಿಷ್ಯತ್ಕಾಲದ ರೂಪ.

ಈಗ ಈ ಗಳಿಗೆಯಲ್ಲಿ, ನಡೆಯುತ್ತಿರುವುದು ವರ್ತಮಾನಕಾಲ. ಇದಕ್ಕೆ ಹಿಂದಿನದು ಭೂತಕಾಲ; ಇನ್ನು ಮುಂದೆ ಬರುವುದು ಭವಿಷ್ಯತ್ಕಾಲ, ಹೀಗೆ ಕಾಲವನ್ನು ಮೂರಾಗಿ ವಿಭಾಗಿಸಬಹುದು. ಇವುಗಳಲ್ಲಿ ಯಾವ ಕಾಲಕ್ಕೆ ಕ್ರಿಯೆ ಸೇರುತ್ತದೆ ಎಂಬುದನ್ನು ತೋರಿಸುವುದಕ್ಕೆ ಬೇರೆ ಬೇರೆ ರೂಪಗಳುಂಟು.

೭. ಕೆಳಗಿನ ವಾಕ್ಯಗಳನ್ನು ನೋಡಿ :

ನಿನಗೆ ಜೀವದ ಮೇಲೆ ಆಸೆಯಿದ್ದರೆ ಈ ಊರನ್ನು ಬಿಟ್ಟು ಹೊರಡು.
ಏನುಮಾಡಿದರೂ ಈ ಸೋಮಾರಿ ತನ್ನ ಕೋಣೆಯನ್ನು ಬಿಟ್ಟು ಹೊರಡನು.
ನಾಳೆ ಇಷ್ಟುಹೊತ್ತಿಗೆ ಶಂಕರನು ಮದರಾಸಿನಿಂದ ಹೊರಟಾನು.

ಇಲ್ಲಿ ' ಹೊರಡು ' ಎಂಬುದು ಕ್ರಿಯೆ ನಡೆಯಬೇಕೆಂದು ಅಪ್ಪಣೆ ಮಾಡುತ್ತದೆ (ವಿಧಿಸುತ್ತದೆ). ' ಹೊರಡನು ' ಎಂಬುದು ಕೆಲಸ ನಡೆಯುವುದಿಲ್ಲ. (ಅಥವಾ ನಡೆಯಲಿಲ್ಲ) ಎಂದು ತಿಳಿಸುತ್ತದೆ. ' ಹೊರಟಾನು ' ಎಂಬುದು ಕ್ರಿಯೆ ನಡೆದೇ ನಡೆಯುವುದೆಂಬ ನಿಶ್ಚಯವಿಲ್ಲದಿದ್ದರೂ ಅದು ನಡೆಯುವ ಸಂಭವ ಉಂಟೆಂಬುದನ್ನು ತಿಳಿಸುತ್ತದೆ. ಹೀಗೆ ಈ ಮೂರು ರೂಪಗಳೂ ಕ್ರಮವಾಗಿ ವಿಧಿ, ನಿಷೇಧ, ಸಂಭಾವನೆ—ಇವನ್ನು ತೋರಿಸುತ್ತವೆ.

ಈ ರೂಪಗಳನ್ನು ಉಪಯೋಗಿಸುವಾಗ ನಮಗೆ ಕಾಲದ ಕಡೆಗೆ ಅಷ್ಟು ಗಮನವಿರುವುದಿಲ್ಲ. ವಿಧಿ, ನಿಷೇಧ, ಸಂಭಾವನೆ—ಇವು ಒಂದು ಕ್ರಿಯೆಯ ವಿಷಯದಲ್ಲಿ ಮಾತಾಡುವಾತನ ಅಭಿಪ್ರಾಯವೇನು ಎಂಬುದನ್ನು ತಿಳಿಸುತ್ತವೆ. ಇದಕ್ಕೆ **ಅರ್ಥ**ವೆಂದು ಹೆಸರು. ಹೊರಡು, ಹೊರಡನು, ಹೊರಟಾನು ಎಂಬ ರೂಪಗಳು ಕ್ರಮವಾಗಿ **ವಿಧ್ಯರ್ಥ—ನಿಷೇಧಾರ್ಥ—ಸಂಭಾವನಾರ್ಥ**ಗಳಿಗೆ ಸೇರಿದುವು. ವರ್ತಮಾನ ಭೂತ ಭವಿಷ್ಯತ್ಕಾಲಗಳಲ್ಲಿ ಲಿಂಗ ವಚನ ಪುರುಷಗಳನ್ನು ತಿಳಿಸುವುದಕ್ಕೆ ಬೇರೆಬೇರೆ ರೂಪಗಳಿರುವಂತೆಯೇ ವಿಧಿ, ನಿಷೇಧ, ಸಂಭಾವನಾರ್ಥಗಳಲ್ಲಿಯೂ ಉಂಟು.

೮. ಈಗ ಇನ್ನೂ ಕೆಲವು ರೂಪಗಳನ್ನು ನೋಡೋಣ :

ಅವನು ಮನೆಯಿಂದ ಹೊರಡುತ್ತಾ ಮುಗ್ಗರಿಸಿದನು.
ನಾನು ಮದ್ದಗಿರಿಯಿಂದ ಹೊರಟು ಬಂದೆನು.
ನೀನು ಎಲ್ಲಿಗೆ ಹೊರಟರೆ ಅಲ್ಲಿಗೆ ಬರುತ್ತೇನೆ.
ಹುಡುಗರೆಲ್ಲ ತಮಾಷೆಬಂಗಲೆಗೆ ಹೊರಡಲು ತವಕಿಸುತ್ತಾರೆ.

ಮೇಲಿನ ' ಹೊರಡುತ್ತಾ, ಹೊರಟು, ಹೊರಟರೆ, ಹೊರಡಲು ' ಎಂಬ ರೂಪಗಳೆಷ್ಟೂ ' ಹೊರಡು ' ಎಂಬ ಧಾತುವಿನಿಂದಲೇ ಬಂದಿವೆ. ಆದರೆ ಇದಕ್ಕೂ, ನಾವು ಹಿಂದೆ ನೋಡಿದ ' ಹೊರಡುತ್ತಾನೆ, ಹೊರಟೆನು, ಹೊರಟಾನು ' ಮೊದಲಾದ ರೂಪಗಳಿಗೂ ಹಲವು ಅಂಶಗಳಲ್ಲಿ ವ್ಯತ್ಯಾಸವುಂಟು. ಒಂದು ' ಕಾಲ 'ವನ್ನಾಗಲಿ ' ಅರ್ಥ 'ವನ್ನಾಗಲಿ ಸೂಚಿಸುವ ಕ್ರಿಯಾಪದವನ್ನು ಉಪಯೋಗಿಸಿದರೆ ವಾಕ್ಯದ ಅರ್ಥವು ಪೂರ್ಣವಾಗುತ್ತದೆ. ಉದಾಹರಣೆಗೆ, ' ಅವನು ಮನೆಯಿಂದ ಹೊರಡುತ್ತಾನೆ' 'ನಾನು ಮದ್ದಗಿರಿಯಿಂದ ಹೊರಟೆನು'—ಇಷ್ಟನ್ನು ಹೇಳಿದರೆ ಸಾಕು; ವಾಕ್ಯದ ಅಭಿಪ್ರಾಯವು ಪೂರ್ಣವಾಗುವುದಕ್ಕೆ ಬೇರೆ ಯಾವ ಪದದ ಆಪೇಕ್ಷೆಯೂ ಇರುವುದಿಲ್ಲ. ಈ ಬಗೆಯ ಕ್ರಿಯಾಪದಗಳಿಗೆ **ಪೂರ್ಣಕ್ರಿಯಾಪದಗಳೆಂದು** ಹೆಸರು. ಆದರೆ, ' ಅವನು ಮನೆಯಿಂದ ಹೊರಡುತ್ತಾ . . . ' ನಾನು ಮದ್ದಗಿರಿಯಿಂದ ಹೊರಟು . . . ' ' ನೀನು ಎಲ್ಲಿಗೆ ಹೊರಟರೆ . . .' 'ಹುಡುಗರೆಲ್ಲ ತಮಾಷೆಬಂಗಲೆಗೆ ಹೊರಡಲು . . . ' ಎಂದು ನಿಲ್ಲಿಸಿದರೆ

ವಾಕ್ಯದ ಅರ್ಥ ಮುಗಿಯುವುದಿಲ್ಲ. ಹೊರಡುತ್ತಾ, ಹೊರಟು, ಹೊರಟರೆ, ಹೊರಡಲು ಈ ಕ್ರಿಯಾರೂಪಗಳು ಕ್ರಮವಾಗಿ ಮುಗ್ಗರಿಸಿದನು, ಬಂದೆನು, ಬರುತ್ತೇನೆ, ತವಕಿಸುತ್ತಾರೆ ಎಂಬ ಬೇರೆ ಕ್ರಿಯಾಪದಗಳನ್ನು ಅಪೇಕ್ಷಿಸುತ್ತವೆ. ಅವೂ ಒಂದು ವಾಕ್ಯಕ್ಕೆ ಸೇರಿದ ಹೊರತು ಈ ಕ್ರಿಯಾಪದಗಳ ಅರ್ಥ ಮುಗಿಯುವುದಿಲ್ಲ. ಹೀಗೆ ತಮ್ಮ ಅರ್ಥವನ್ನು ಪೂರ್ತಿ ಮಾಡುವುದಕ್ಕಾಗಿ ಬೇರೆ ಕ್ರಿಯಾಪದಗಳ ಸಹಾಯವನ್ನು ಅಪೇಕ್ಷಿಸುವ ಕ್ರಿಯಾಪದಗಳಿಗೆ **ಸಾಪೇಕ್ಷ ಕ್ರಿಯಾರೂಪಗಳೆಂದು** ಹೆಸರು.

೯. ಪೂರ್ಣಕ್ರಿಯಾಪದಗಳಿಗೂ ಸಾಪೇಕ್ಷ ಕ್ರಿಯಾರೂಪಗಳಿಗೂ ಮತ್ತೊಂದು ವ್ಯತ್ಯಾಸವುಂಟು ಪೂರ್ಣಕ್ರಿಯಾಪದಗಳಿಗೆ ಬೇರೆಬೇರೆ ಲಿಂಗ ವಚನ, ಪುರುಷಗಳಲ್ಲಿ ಬೇರೆಬೇರೆ ರೂಪಗಳಿರುತ್ತವೆ. ಸಾಪೇಕ್ಷಕ್ರಿಯಾರೂಪಗಳಾದರೆ ಎಲ್ಲ ಲಿಂಗ, ವಚನ, ಪುರುಷಗಳಲ್ಲೂ ಒಂದೇ ರೂಪದಲ್ಲಿರುತ್ತವೆ.

| | ಏಕವಚನ | ಬಹುವಚನ |
|---|---|---|
| ಪ್ರ. ಪು. ಪು. | ಅವನು ಹೊರಟು ಬಂದನು | ಅವರು ಹೊರಟು ಬಂದರು. |
| ಸ್ತ್ರೀ. | ಅವಳು ಹೊರಟು ಬಂದಳು | |
| ನಪುಂ. | ಅದು ಹೊರಟು ಬಂದಿತು | ಅವು ಹೊರಟು ಬಂದುವು. |
| ಮ. ಪು. | ನೀನು ಹೊರಟು ಬಂದೆ | ನೀವು ಹೊರಟು ಬಂದಿರಿ. |
| ಉ. ಪು. | ನಾನು ಹೊರಟು ಬಂದೆನು | ನಾವು ಹೊರಟು ಬಂದೆವು. |

ಇಲ್ಲಿ 'ಬರು' ಧಾತುವಿನ ಪೂರ್ಣಕ್ರಿಯಾಪದ ರೂಪಗಳು ಹೆಜ್ಜೆ ಹೆಜ್ಜೆಗೂ ಬದಲಾಯಿಸಿದರೂ 'ಹೊರಟು' ಎಂಬ ಸಾಪೇಕ್ಷ ಕ್ರಿಯಾರೂಪವು ಮಾತ್ರ ಉದ್ದಕ್ಕೂ ಒಂದೇ ರೂಪದಲ್ಲಿ ನಿಂತಿದೆ.

೧೦. ಈ ಸಾಪೇಕ್ಷ ಕ್ರಿಯಾರೂಪಗಳಿಗೆ ಕಾಲಭೇದ ಅರ್ಥಭೇದಗಳು ಮಾತ್ರ ಉಂಟು. ಉದಾಹರಣೆಗೆ 'ಹೊರಟು' ಎಂಬುದು ಭೂತಕಾಲವನ್ನೂ, 'ಹೊರಡುತ್ತಾ' ಎಂಬುದು ವರ್ತಮಾನ ಕಾಲವನ್ನೂ ತೋರಿಸುತ್ತವೆ; 'ಹೊರಟರೆ' ಎಂಬುದಕ್ಕೆ ಪಕ್ಷಾರ್ಥದ ರೂಪವೆಂದೂ, 'ಹೊರಡಲು' ಎಂಬುದಕ್ಕೆ ಭಾವಾರ್ಥದ ರೂಪವೆಂದೂ ಹೆಸರು. ಇವಲ್ಲದೆ ಇನ್ನೂ ಬೇರೆಯ ರೂಪಗಳೂ ಉಂಟು. ಈ ವಿವರಗಳನ್ನೆಲ್ಲಾ ಬೇರೊಂದು ಅಧ್ಯಾಯದಲ್ಲಿ ತಿಳಿಸಿದೆ.

---

## ಹನ್ನೊಂದನೆಯ ಅಧ್ಯಾಯ

### ಪೂರ್ಣ ಕ್ರಿಯಾಪದ : ಕಾಲಗಳು

೧ (ಅ) ತನ್ನ ಹರಕೆಯಂತೆ ಅವಳು ಈ ಜಾತ್ರೆಯಲ್ಲಿ ಕೆಂಡದ ಮೇಲೆ ನಡೆಯುತ್ತಾಳೆ.

(ಆ) ಈ ಮುಳ್ಳುನೆಲದ ಮೇಲೆ ಬರಿಗಾಲಿನಲ್ಲಿ ಏಕೆ ನಡೆಯುತ್ತೀಯೆ.

(ಇ) ನಮ್ಮ ಒಡೆಯನು ಹೇಳಿದಂತೆ ನಾವು ನಡೆಯುತ್ತೇವೆ.

(ಈ) ಈ ಲೋಭಿಯ ಮುಖವನ್ನು ನೋಡಿ ಭಿಕ್ಷಡವಳು ಮಾತಿಲ್ಲದೆ ನಡೆದಳು.

(ಉ) ಅಣ್ಣನ ಮೇಲಿನ ಮುನಿಸಿನಲ್ಲಿ ನೀನು ತಪ್ಪುದಾರಿಯಲ್ಲಿ ನಡೆದೆ.

(ಊ) ಆ ಹತ್ತು ಮೈಲಿಯನ್ನೂ ನಾವು ಕತ್ತಲೆಯಲ್ಲೇ ನಡೆದೆವು.

(ಋ) ಮೂರು ಹೊತ್ತೂ ಜಗಳವಾಡುವವರ ಮನೆಯನ್ನು ಬಿಟ್ಟು ಲಕ್ಷ್ಮಿ ನಡೆಯುವಳು.

(ೠ) ಎಂದಾಗರೂ ಒಂದು ದಿನ ನೀನೂ ನನ್ನಂತೆ ಕುಂಟಿಕೊಂಡು ನಡೆಯುವೆ.

(ಎ) ನಾವು ಪ್ರತಿಜ್ಞೆಗೆ ತಪ್ಪದೆ ನಡೆಯುವೆವು.

ಮೇಲಿನ ವಾಕ್ಯಗಳಲ್ಲಿ ' ನಡೆ ' ಎಂಬ ಧಾತುವಿನ ಒಂಬತ್ತು ಬೇರೆ ಬೇರೆ ರೂಪಗಳು ಬಂದಿವೆ. ಅವುಗಳನ್ನು ಕೆಳಗಿರುವಂತೆ ವಿಂಗಡಿಸಿ ಬಿಡಿಸಬಹುದು.

#### ವರ್ತಮಾನ ಕಾಲ

| | | |
|---|---|---|
| ಪ್ರಥಮ ಪು. ಏಕ. (ಸ್ತ್ರೀಲಿಂಗ) | ನಡೆಯುತ್ತಾಳೆ | = ನಡೆ+ಉತ್ತ+ಆಳೆ |
| ಮಧ್ಯಮ ಪು. ಏಕ. | ನಡೆಯುತ್ತೀಯೆ | = ನಡೆ+ಉತ್ತ+ಈಯೆ |
| ಉತ್ತಮ ಪು. ಬಹು. | ನಡೆಯುತ್ತೇವೆ | = ನಡೆ+ಉತ್ತ+ಏವೆ |

#### ಭೂತಕಾಲ

| | | |
|---|---|---|
| ಪ್ರ. ಪು. ಏಕ. ಸ್ತ್ರೀ. | ನಡೆದಳು | = ನಡೆ+ದ+ಅಳು |
| ಮ. ಪು. ಏಕ. | ನಡೆದೆ | = ನಡೆ+ದ+ಎ |
| ಉ. ಪು. ಬಹು | ನಡೆದೆವು | = ನಡೆ+ದ+ಎವು |

#### ಭವಿಷ್ಯತ್ಕಾಲ

| | | |
|---|---|---|
| ಪ್ರ. ಪು. ಏಕ. ಸ್ತ್ರೀ. | ನಡೆಯುವಳು | = ನಡೆ+ಉವ+ಅಳು |
| ಮ. ಪು. ಏಕ. | ನಡೆಯುವೆ | = ನಡೆ+ಉವ+ಎ |
| ಉ. ಪು. ಬಹು. | ನಡೆಯುವೆವು | = ನಡೆ+ಉವ+ಎವು |

೨. ಮೇಲಿನ ಒಂಬತ್ತು ರೂಪಗಳಲ್ಲೂ ' ನಡೆ ' ಧಾತುವಿಗೆ ಎರಡೆರಡು ಪ್ರತ್ಯಯಗಳು ಸೇರಿರುವುದು ಸ್ಪಷ್ಟವಾಗಿದೆ. ಈ ಪ್ರತ್ಯಯಗಳಲ್ಲಿ, ಧಾತುವಿಗೆ ಮೊದಲು ಸೇರಿರುವ –ಉತ್ತ–, –ದ–, –ಉವ–, ಎಂಬುವನ್ನು ನೋಡೋಣ. ವರ್ತಮಾನಕಾಲದ ಮೂರು ರೂಪಗಳಲ್ಲೂ –ಉತ್ತ– ಎಂಬುದೂ, ಭೂತಕಾಲದ ಮೂರು ರೂಪಗಳಲ್ಲೂ –ದ– ಎಂಬುದೂ, ಭವಿಷ್ಯತ್ಕಾಲದ ಮೂರು ರೂಪಗಳಲ್ಲೂ -ಉವ– ಎಂಬುದೂ ಬಂದಿವೆ. ಕ್ರಿಯಾಪದದ ಕಾಲ ಯಾವುದೆಂಬುದು ಗೊತ್ತಾಗತಕ್ಕದ್ದು ಇವು ಬಂದಿರುವುದರಿಂದಲೇ. ಈ ಪ್ರತ್ಯಯಗಳನ್ನು ಬದಲಾಯಿಸಿದರೆ ಕಾಲವೂ ಬದಲಾಯಿಸುತ್ತದೆ. ಉದಾಹರಣೆಗೆ 'ನಡೆದವು', ' ನಡೆಯುವೆವು' ಎಂಬ ರೂಪಗಳನ್ನು ಹೋಲಿಸಿ. ಎರಡಕ್ಕೂ ಧಾತು (' ನಡೆ '), ಕೊನೆಯ ಪ್ರತ್ಯಯ (–ಎವು) ಇವು ಸಮಾನವಾಗಿವೆ. ಆದರೆ ನಡುವೆ–ದ– ಪ್ರತ್ಯಯವನ್ನುಳ್ಳ ರೂಪವು ಭೂತಕಾಲವನ್ನು ತೋರಿಸುತ್ತದೆ; –ಉವ– ಪ್ರತ್ಯಯವನ್ನುಳ್ಳ ರೂಪವು ಭವಿಷ್ಯತ್ಕಾಲವನ್ನು ತೋರಿಸುತ್ತದೆ.

೩. ಹೀಗೆ ಧಾತುವಿಗೆ ಸೇರಿ ಕಾಲವನ್ನು ತೋರಿಸುವ ಪ್ರತ್ಯಯಗಳಿಗೆ **ಕಾಲಪ್ರತ್ಯಯಗಳೆಂದು** ಹೆಸರು. ವರ್ತಮಾನಕಾಲ ಪ್ರತ್ಯಯ : –ಉತ್ತ–; ಭೂತಕಾಲಪ್ರತ್ಯಯ : –ದ–; ಭವಿಷ್ಯತ್ಕಾಲ ಪ್ರತ್ಯಯ: --ಉವ--.

೪. ಕಾಲಪ್ರತ್ಯಯದ ಮುಂದೆ ಸೇರಿರುವ –ಅಳೆ–, –ಈಯೆ–, ಏವೆ– ಮೊದಲಾದ ಪ್ರತ್ಯಯಗಳನ್ನು ಇನ್ನು ನೋಡೋಣ. ಇವುಗಳಲ್ಲಿ ಒಂದೊಂದು ಕ್ರಿಯಾಪದದ ಪುರುಷ ವಚನಗಳನ್ನು (ಪ್ರಥಮ ಪುರುಷನಲ್ಲಿ ಲಿಂಗವನ್ನೂ) ಸೂಚಿಸುತ್ತದೆ. ಉದಾಹರಣೆಗೆ, –ಅಳೆ : ಇದು ಪ್ರಥಮ ಪುರುಷದಲ್ಲಿ ಸ್ತ್ರೀಲಿಂಗ ಏಕವಚನದ ಪ್ರತ್ಯಯ ; –ಈಯೆ : ಇದು ಮಧ್ಯಮ ಪುರುಷ ಏಕವಚನದ ಪ್ರತ್ಯಯ ; –ಏವೆ : ಇದು ಉತ್ತಮಪುರುಷ ಬಹುವಚನದ ಪ್ರತ್ಯಯ. ಪುರುಷ ವಚನ (ಲಿಂಗ)ಗಳು ಬೇರೆಯಾದಂತೆ ಇವೂ ಬೇರೆಯಾಗುತ್ತವೆ.

ಹೀಗೆ, ಪುರುಷ, ವಚನ, ಲಿಂಗಗಳನ್ನು ಸೂಚಿಸುವುದಕ್ಕಾಗಿ ಧಾತುವಿಗೆ ಸೇರುವ ಪ್ರತ್ಯಯಗಳಿಗೆ **ಆಖ್ಯಾತಪ್ರತ್ಯಯಗಳೆಂದು** ಹೆಸರು.

೫. ಮೇಲೆ ಪಟ್ಟಿಯಲ್ಲಿ ಬಿಡಿಸಿ ತೋರಿಸಿರುವ ಆಖ್ಯಾತ ಪ್ರತ್ಯಯಗಳನ್ನು ಗಮನಿಸಿ. ಇವು ವರ್ತಮಾನಕಾಲಕ್ಕೆ ಪ್ರತ್ಯೇಕವಾಗಿವೆ. ಭೂತ ಭವಿಷ್ಯತ್ಕಾಲಗಳಿಗೆ ಒಂದೇ ಆಗಿವೆ.

೬. ಧಾತುವಿಗೆ ಕಾಲಪ್ರತ್ಯಯ ಆಖ್ಯಾತಪ್ರತ್ಯಯಗಳು ಸೇರುವ ಕ್ರಮವನ್ನು ಗಮನಿಸಿ ; ಮೊದಲು ಧಾತು, ಬಳಿಕ ಕಾಲಪ್ರತ್ಯಯ, ಕೊನೆಯಲ್ಲಿ ಆಖ್ಯಾತ ಪ್ರತ್ಯಯ.

### ವರ್ತಮಾನಕಾಲ

೭. ಕಾಲಪ್ರತ್ಯಯ : -ಉತ್ತ-

ಆಖ್ಯಾತಪ್ರತ್ಯಯಗಳು :

| | | ಏಕ. | ಬಹು. |
|---|---|---|---|
| ಪ್ರಥಮ ಪು. | ಪುಲ್ಲಿಂಗ | -ಆನೆ | -ಆರೆ |
| | ಸ್ತ್ರೀ. | -ಆಳೆ | |
| | ನಪುಂ. | -ಅದೆ | -ಅವೆ |
| ಮಧ್ಯಮ ಪು. | | -ಈಯೆ | -ಈರಿ |
| ಉತ್ತಮ ಪು. | | -ಏನೆ | -ಏವೆ |

೮. ತಿಳಿ, ಮಾಡು ಎಂಬ ಧಾತುಗಳ ವರ್ತಮಾನಕಾಲದ ರೂಪಗಳನ್ನು ಕೆಳಗೆ ತೋರಿಸಿದೆ.

| | | 'ತಿಳಿ' ಏಕ. | 'ತಿಳಿ' ಬಹು. | 'ಮಾಡು' ಏಕ. | 'ಮಾಡು' ಬಹು. |
|---|---|---|---|---|---|
| ಪ್ರ. ಪು. | ಪು. | ತಿಳಿಯುತ್ತಾನೆ | ತಿಳಿಯುತ್ತಾರೆ | ಮಾಡುತ್ತಾನೆ | ಮಾಡುತ್ತಾರೆ |
| | ಸ್ತ್ರೀ. | ತಿಳಿಯುತ್ತಾಳೆ | | ಮಾಡುತ್ತಾಳೆ | |
| | ನಪುಂ. | ತಿಳಿಯುತ್ತದೆ | ತಿಳಿಯುತ್ತವೆ | ಮಾಡುತ್ತದೆ | ಮಾಡುತ್ತವೆ |
| ಮ. ಪು. | | ತಿಳಿಯುತ್ತೀಯೆ | ತಿಳಿಯುತ್ತೀರಿ | ಮಾಡುತ್ತೀಯೆ | ಮಾಡುತ್ತೀರಿ |
| ಉ. ಪು. | | ತಿಳಿಯುತ್ತೇನೆ | ತಿಳಿಯುತ್ತೇವೆ | ಮಾಡುತ್ತೇನೆ | ಮಾಡುತ್ತೇವೆ |

ತಿಳಿ + ಉತ್ತ = ತಿಳಿಯುತ್ತ – : ಇಲ್ಲಿ ಯಕಾರಾಗಮ ಸಂಧಿ.
ಮಾಡು + ಉತ್ತ = ಮಾಡುತ್ತ – : ಇಲ್ಲಿ ಲೋಪ ಸಂಧಿ.

೯. ಇನ್ನು ಕೆಲವು ಧಾತುಗಳ ರೂಪಗಳು :

ಮದುವೆಯ ಕಾಲದಲ್ಲಿ ಹೆಣ್ಣುಮಕ್ಕಳು ಕಲಿತ ಹಾಡುಗಳನ್ನೆಲ್ಲಾ ಹೇಳುತ್ತಾರೆ. (ಹೇಳು+ಉತ್ತ+ಆರೆ)

ಸೂರ್ಯನು ಮೂಡಲಲ್ಲಿ ಹುಟ್ಟುತ್ತಾನೆ, ಪಡುವಲಲ್ಲಿ ಮುಳುಗುತ್ತಾನೆ. (ಹುಟ್ಟು+ಉತ್ತ+ಆನೆ, ಮುಳುಗು+ಉತ್ತ+ಆನೆ)

ನನ್ನ ಹೆಜ್ಜೆ ಏಕೋ ನೋಯುತ್ತದೆ. (ನೋ+ಉತ್ತ+ಅದೆ)

ಈ ಮಗುವನ್ನು ಏಕೆ ಸುಮ್ಮನೆ ಬೈಯುತ್ತೀಯೆ ? (ಬೈ+ಉತ್ತ+ಈಯೆ)

ಈ ಮೇಜಿನ ಮೇಲುಭಾಗ ಕನ್ನಡಿಯಂತೆ ಥಳಥಳಿಸುತ್ತದೆ. (ಥಳಥಳಿಸು+ಉತ್ತ+ಅದೆ)

ನಾಳೆಯ ದಿನ ನನ್ನ ಹೊಸ ಟೋಪಿಯನ್ನು ಹಾಕಿಕೊಂಡು ಬರುತ್ತೇನೆ. (ಬರು+ಉತ್ತ+ಏನೆ)

೧೦. ಪ್ರಥಮಪುರುಷ ನಪುಂಸಕ ಏಕವಚನದಲ್ಲಿ, 'ಅಳುತ್ತದೆ' 'ಹೋಗುತ್ತದೆ', 'ಬರುತ್ತದೆ'— ಈ ಬಗೆಯ ರೂಪಗಳಿಗೆ ಬದಲಾಗಿ 'ಅಳುತ್ತೆ', 'ಹೋಗುತ್ತೆ', 'ಬರುತ್ತೆ'— ಎಂದು ಕೆಲವರು ಬರೆಯುವುದುಂಟು. ಆದರೆ ಬರೆವಣಿಗೆಯಲ್ಲಿ ಇದು ಶುದ್ಧವಲ್ಲ. 'ಮಗು ಅಳುತ್ತೆ' ಎಂದು ಬರೆಯಬಾರದು; "ಮಗು ಅಳುತ್ತದೆ' ಎಂದು ಬರೆಯಬೇಕು.

೧೧. 'ಇರು' ಧಾತುವಿಗೆ ವರ್ತಮಾನಕಾಲದಲ್ಲಿ ಎರಡು ವಿಧದ ರೂಪಗಳುಂಟು :

| | ಸಾಮಾನ್ಯ ರೂಪಗಳು | | ವಿಶೇಷ ರೂಪಗಳು | |
|---|---|---|---|---|
| | ಏಕ. | ಬಹು. | ಏಕ. | ಬಹು. |
| ಪ್ರ. ಪು. ಪು. | ಇರುತ್ತಾನೆ | ಇರುತ್ತಾರೆ | ಇದ್ದಾನೆ | ಇದ್ದಾರೆ |
| ಸ್ತ್ರೀ. | ಇರುತ್ತಾಳೆ | | ಇದ್ದಾಳೆ | |
| ನಪುಂ. | ಇರುತ್ತದೆ | ಇರುತ್ತವೆ | ಇದೆ | ಇವೆ |
| ಮ. ಪು. | ಇರುತ್ತೀಯೆ | ಇರುತ್ತೀರಿ | ಇದ್ದೀಯೆ | ಇದ್ದೀರಿ |
| ಉ. ಪು. | ಇರುತ್ತೇನೆ | ಇರುತ್ತೇವೆ | ಇದ್ದೇನೆ | ಇದ್ದೇವೆ |

೧೨. ಈ ಎರಡು ಬಗೆಯ ರೂಪಗಳಿಗೂ ಪ್ರಯೋಗದಲ್ಲಿ ಸ್ವಲ್ಪ ಭೇದವುಂಟು. ಉದಾಹರಣೆಗೆ, 'ಹಾವು ಹುತ್ತದಲ್ಲಿ ಇರುತ್ತದೆ' ಎಂದರೆ 'ಹಾವು ಹುತ್ತದಲ್ಲಿ ಸಾಮಾನ್ಯವಾಗಿ ಇರುವುದುಂಟು' ಎಂದು ಅರ್ಥ. 'ಹಾವು ಹುತ್ತದಲ್ಲಿ ಇದೆ' ಎಂದರೆ, 'ಈ ಗಳಿಗೆಯಲ್ಲಿ ಹಾವು ಹುತ್ತದಲ್ಲಿ ಇರುವುದು ಖಂಡಿತ' ಎಂದು ಅರ್ಥ, ಕೆಳಗಿನ ವಾಕ್ಯಗಳನ್ನೂ ಹೋಲಿಸಿ ನೋಡಿ :

ನಮ್ಮ ತಂದೆ ಬೆಳಿಗ್ಗೆ ಎಂಟು ಘಂಟೆಯವರೆಗೆ ಮನೆಯಲ್ಲಿ ಇರುತ್ತಾರೆ.

ನಮ್ಮ ತಂದೆ ಈಗ ಮನೆಯಲ್ಲಿ ಇದ್ದಾರೆ.

ನೀವು ಹಿಂದಿರುಗಿ ಬರುವತನಕ ನಾನು ಅಲ್ಲೇ ಇರುತ್ತೇನೆ.

ನಿನ್ನೆಯ ಮಧ್ಯಾಹ್ನದಿಂದಲೂ ನಾನು ಇಲ್ಲೇ ಇದ್ದೇನೆ ಇತ್ಯಾದಿ

೧೩. ಇದ್ದಾನೆ, ಇದ್ದಾಳೆ, ಇದ್ದಾರೆ, ಇದ್ದೀಯೆ, ಇದ್ದೀರಿ, ಇದ್ದೇವೆ—ಎಂಬ ರೂಪಗಳನ್ನು ಇದಾನೆ, ಇದಾಳೆ, ಇದಾರೆ, . . . ಇದೇವೆ—ಹೀಗೆ ಸಂಯುಕ್ತಾಕ್ಷರವಿಲ್ಲದೆ ಉಪಯೋಗಿಸುವುದೂ ಉಂಟು.

'ಇದೆ' ಎಂಬುದನ್ನು 'ಇಥೆ' ಎಂದು ಬರೆಯಬಾರದು.

## ಭೂತ ಕಾಲ.

೧೪. ಭೂತ ಭವಿಷ್ಯತ್ಕಾಲಗಳಿಗೆ ಒಂದೇ ಬಗೆಯ ಆಖ್ಯಾತ ಪ್ರತ್ಯಯಗಳು ಸೇರುತ್ತವೆಂದು ಹಿಂದೆ ನೋಡಿದೆವಷ್ಟೆ. ಆ ಪ್ರತ್ಯಯಗಳನ್ನು ಕೆಳಗೆ ಕೊಟ್ಟಿದೆ:

| | ಏಕ. | ಬಹು. |
|---|---|---|
| ಪ್ರ. ಪು. ಪು. | –ಅನು | –ಅರು |
| ಸ್ತ್ರೀ. | –ಅಳು | |
| ನಪುಂ. | (ಭೂತಕಾಲದಲ್ಲಿ)–ಇತು<br>(ಭವಿಷ್ಯತ್ಕಾಲದಲ್ಲಿ)–ಉದು | –ಉವು |
| ಮ. ಪು. | –ಎ | –ಇರಿ |
| ಉ. ಪು. | –ಎನು | –ಎವು |

ಭೂತಕಾಲಕ್ಕೂ ಭವಿಷ್ಯತ್ಕಾಲಕ್ಕೂ ಪ್ರಥಮಪುರುಷ ನಪುಂಸಕ ಏಕವಚನದಲ್ಲಿ ಮಾತ್ರ ಈ ಪ್ರತ್ಯಯಗಳು ಬೇರೆಯಾಗಿ, ಭೂತಕಾಲದಲ್ಲಿ, –ಇತು ಎಂಬುದೂ ಭವಿಷ್ಯತ್ಕಾಲದಲ್ಲಿ–ಉದು ಎಂಬುದೂ ಬರುತ್ತವೆಂದು ಮೇಲಿನ ಪಟ್ಟಿಯಿಂದ ಗೊತ್ತಾಗುತ್ತದೆ.

೧೫. ಈಗ ಭೂತಕಾಲದ ರೂಪಗಳನ್ನು ಮೊದಲು ನೋಡೋಣ. ಕೆಳಗೆ 'ತಿಳಿ,' 'ಮಾಡು' ಎಂಬ ಧಾತುಗಳ ಭೂತಕಾಲದ ರೂಪಗಳನ್ನು ಕೊಟ್ಟಿದೆ.

| | 'ತಿಳಿ' ಏಕ. | 'ತಿಳಿ' ಬಹು. | 'ಮಾಡು' ಏಕ. | 'ಮಾಡು' ಬಹು. |
|---|---|---|---|---|
| ಪ್ರ. ಪು. ಪು. | ತಿಳಿದನು | ತಿಳಿದರು | ಮಾಡಿದನು | ಮಾಡಿದರು |
| ಸ್ತ್ರೀ. | ತಿಳಿದಳು | | ಮಾಡಿದಳು | |
| ನಪುಂ. | ತಿಳಿಯಿತು | ತಿಳಿದುವು | ಮಾಡಿತು | ಮಾಡಿದುವು |
| ಮ. ಪು. | ತಿಳಿದೆ | ತಿಳಿದಿರಿ | ಮಾಡಿದೆ | ಮಾಡಿದಿರಿ |
| ಉ. ಪು. | ತಿಳಿದೆನು | ತಿಳಿದೆವು | ಮಾಡಿದೆನು | ಮಾಡಿದೆವು |

೧೬. ಭೂತಕಾಲ ಪ್ರತ್ಯಯ '–ದ–' ಎಂಬುದಷ್ಟೆ. ಇದು ಧಾತುವಿಗೆ ಸೇರುವಾಗ ಹಲವು ಬಗೆಯ ವ್ಯತ್ಯಾಸಗಳುಂಟಾಗುತ್ತವೆ. ಉದಾಹರಣೆಗೆ 'ಮಾಡಿದನು', 'ಮಾಡಿದಳು' ಈ ಮೊದಲಾದ ರೂಪಗಳಲ್ಲಿ (ಮಾಡು+ಇ+ದ+ಅನು, ಮಾಡು+ಇ+ದ+ಅಳು) ಧಾತುವಿಗೂ ಕಾಲಪ್ರತ್ಯಯಕ್ಕೂ ನಡುವೆ –ಇ– ಎಂಬುದು ಬಂದಿದೆ. ಕೆಲವು ಕಡೆಗಳಲ್ಲಿ –ದ– ಪ್ರತ್ಯಯವು ಹತ್ತುವುದೇ ಇಲ್ಲ. ಉದಾಹರಣೆಗೆ 'ತಿಳಿಯಿತು', 'ಮಾಡಿತು' (ತಿಳಿ+ಇತು : ಆಗಮ ಸಂಧಿ, ಮಾಡು+ಇತು : ಲೋಪ ಸಂಧಿ) ಎಂಬ ರೂಪಗಳನ್ನು ನೋಡಿ. ಜೊತೆಗೆ ಇನ್ನೂ ಕೆಲವು ಉದಾಹರಣೆಗಳನ್ನು ಗಮನಿಸೋಣ.

೧. ಆ ಮುದುಕಿ ಮೆಲ್ಲಗೆ ಹೊಳೆಗೆ ಇಳಿದಳು. (ಇಳಿ+ದ+ಅಳು)
ನನ್ನ ತಮ್ಮನನ್ನು ಏಕೆ ಹೊಡೆದೆ? (ಹೊಡೆ+ದ+ಎ)
ನಮ್ಮ ತಂದೆ ಆಳನ್ನು ಬೈದರು. (ಬೈ+ದ+ಅರು)
ಗುಲಾಬಿಯ ಹೂವನ್ನು ನಾನು ಕೊಯ್ದೆನು. (ಕೊಯ್+ದ+ಎನು)
(ಈ ಕಡೆಗಳಲ್ಲಿ-ದ-ಪ್ರತ್ಯಯ ಹತ್ತಿದಾಗ ಯಾವ ವ್ಯತ್ಯಾಸವೂ ಆಗಿಲ್ಲ)

೨. ಅವನು ಆ ಹಳ್ಳವನ್ನು ಹೇಗೋ ದಾಟಿದನು. (ದಾಟು+ದ+ಅನು)
ಆ ನಾಯಿಯನ್ನು ನಿಮ್ಮಲ್ಲಿ ಯಾರು ಓಡಿಸಿದಿರಿ? (ಓಡಿಸು+ದ+ಇರಿ)
(ಇಲ್ಲಿ ಧಾತುವಿಗೂ ದಕಾರಕ್ಕೂ ನಡುವೆ 'ಇ' ಎಂಬುದು ಬಂದಿದೆ)

೩. ಮಗುವಿನ ಮಾತನ್ನು ಕೇಳಿ ತಾಯಿ ನಕ್ಕಳು. (ನಗು+ದ+ಅಳು)

೪. ಅವನು ಒಂದು ತಿಂಗಳು ಊಟವನ್ನು ಬಿಟ್ಟನು. (ಬಿಡು+ದ+ಅನು)

೫. ಹನುಮಂತನು ಲಂಕೆಯನ್ನು ಸುಟ್ಟನು. (ಸುಡು+ದ+ಅನು)

೬. ಇಲಿಗಳು ಟೋಪಿಯ ಒಳಗಡೆ ಗೂಡನ್ನು ಮಾಡಿ ಮರಿಗಳನ್ನು ಹೆತ್ತುವು. (ಹೆರು+ದ+ಉವು)

೭. ಅವನು ಏಣಿಯಿಂದ ಬಿದ್ದನು. (ಬೀಳು+ದ+ಅನು)

೮. ದಾರಿಯಲ್ಲಿ ಒಂದು ಸೋಜಿಗವನ್ನು ಕಂಡೆನು. (ಕಾಣು+ದ+ಎನು)

೯. ಈ ಹೂವನ್ನು ಯಾವಾಗ ಕಿತ್ತೆ? (ಕೀಳು+ದ+ಎ)

೧೦. ಒಬ್ಬ ಬೇಡಿತಿಯೂ ಅವಳ ಮಕ್ಕಳೂ ಆ ಊರಿಯಲ್ಲಿ ಬೆಂದರು. (ಬೇ+ದ+ಅರು)

೧೧. ಜಗಳದಲ್ಲಿ ಯಾರು ಗೆದ್ದರು, ಯಾರು ಸೋತರು? (ಗೆಲ್ಲು+ದ+ಅರು, ಸೋಲು+ದ+ಅರು)

೧೨ ಕೋತಿ ಕೊಟ್ಟ ಕಬ್ಬನ್ನು ಅವರು ತಿಂದನು. (ತಿನ್+ದ+ಅನು)

೧೩. ಗಂಗೆ ಶಿವನ ಜಡೆಯಿಂದ ಇಳಿದು ಬಂದಳು. (ಬರು+ದ+ಅಳು)

೧೪. ಏನನ್ನು ನೋಡುತ್ತಾ ನಿಂತೇ? (ನಿಲ್ಲು+ದ+ಎ)

೧೫. ತಾನಾಜಿ ಸಿಂಹಗಡದ ಮುತ್ತಿಗೆಯಲ್ಲಿ ಸತ್ತನು. (ಸಾ+ದ+ಅನು)

೧೬. ಪರಿಮಳೆ ಅಕ್ಕನ ಚಾಳಿಯನ್ನೇ ಕಲಿತಳು. (ಕಲಿ+ದ+ಅಳು)

೧೭. ನಾವಿಬ್ಬರೂ ಉಪಾಧ್ಯಾಯರ ಬಳಿಗೆ ಹೋದೆವು. (ಹೋಗು+ದ+ಎವು)

೧೮. ಆಮೇಲೆ ಎಲ್ಲರೂ ಸುಖವಾಗಿ ಇದ್ದರು. (ಇರು+ದ+ಅರು)
ಇತ್ಯಾದಿ.

ಮೇಲಿನ ವ್ಯತ್ಯಾಸಗಳಲ್ಲಿ ಒಂದರಂತೆ ಇನ್ನೊಂದು ಇಲ್ಲ. ಕೆಲವು ಕಡೆಗಳಲ್ಲಿ ಧಾತುವಿನ ವರ್ಣಗಳೂ ಕೆಲವು ಕಡೆಗಳಲ್ಲಿ ಕಾಲಪ್ರತ್ಯಯದ ದಕಾರವೂ, ಮತ್ತೆ ಕೆಲವುಗಳಲ್ಲಿ ಎರಡೂ ವ್ಯತ್ಯಾಸ ಹೊಂದಿವೆ. ಇಂಥ ವ್ಯತ್ಯಾಸಗಳು ಇನ್ನೂ ಇರುವುದರಿಂದ, ಅವುಗಳನ್ನೆಲ್ಲಾ ಭಾಷಾರೂಢಿ

ಯನ್ನು ನೋಡಿ ಕಲಿತುಕೊಳ್ಳಬೇಕು. ಸಂಭಾವನಾರ್ಥದ ಪ್ರತ್ಯಯಗಳೂ ಕೆಲವು ಸಾಪೇಕ್ಷಕ್ರಿಯಾರೂಪಗಳ ಪ್ರತ್ಯಯಗಳೂ ಧಾತುವಿಗೆ ಸೇರುವಾಗ ಹೆಚ್ಚು ಕಡಮೆ ಇದೇ ಬಗೆಯ ವ್ಯತ್ಯಾಸಗಳುಂಟಾಗುತ್ತವೆ. ಆದ್ದರಿಂದ ಮುಖ್ಯವಾದ ಕೆಲವು ಧಾತುಗಳಿಗೆ ಈ ಕಾಲಾರ್ಥಗಳಲ್ಲಿ ಉಂಟಾಗುವ ವ್ಯತ್ಯಾಸಗಳ ಹೆಗ್ಗುರುತನ್ನು ಒಂದು ಪಟ್ಟಿಯಲ್ಲಿ ತೋರಿಸಿ, ಆ ಪಟ್ಟಿಯನ್ನು ಈ ಗ್ರಂಥದ ಕೊನೆಯ 'ಪರಿಶಿಷ್ಟ'ದಲ್ಲಿ ಕೊಡಲಾಗುತ್ತದೆ.

೧೭. ಭೂತಕಾಲದಲ್ಲಿ ಪ್ರಥಮಪುರುಷ ನಪುಂಸಕ ಏಕವಚನದ ಪ್ರತ್ಯಯವು (—ಇತು) ಧಾತುವಿಗೆ ಸೇರುವಾಗ ಹಲವು ಕಡೆಗಳಲ್ಲಿ --ದ-- ಎಂಬ ಕಾಲಪ್ರತ್ಯಯವು ಬರುವುದಿಲ್ಲವೆಂದು ಹಿಂದೆ ಸೂಚಿಸಿದೆ. ಈ ಕೆಳಗಿನ ಉದಾಹರಣೆಗಳನ್ನು ನೋಡಿ :

ವಿಮಾನವು ಭೂಮಿಗೆ ಇಳಿಯಿತು. (ಇಳಿ+ಇತು)
ಮಳೆ ಬಂದು ಊರಿನ ಬೀದಿಗಳನ್ನೆಲ್ಲಾ ತೊಳೆಯಿತು. (ತೊಳೆ+ಇತು)
ಕಪಿ ಬಾಲವನ್ನು ಅಳ್ಳಾಡಿಸಿತು. (ಅಳ್ಳಾಡಿಸು+ಇತು)
ಆ ಕತ್ತೆ ಯಾರ ಭೀತಿಯೂ ಇಲ್ಲದೆ ಹೊಲದಲ್ಲಿ ರಾತ್ರಿಯೆಲ್ಲಾ ಮೇಯಿತು. (ಮೇ+ಇತು)
ನಿಮ್ಮ ಒಂಟೆ ಈ ದಾರಿಯಲ್ಲೇ ಹೋಯಿತು. (ಹೋಗು+ಇತು : 'ಗು' ಲೋಪವಾಗಿದೆ.)

ಇತ್ಯಾದಿ.

೧೮. ಕೆಲವು ಕಡೆಗಳಲ್ಲಿ–ದ–ಸೇರುತ್ತದೆ.

ಉದಾಹರಣೆ.

ಟಪಾಲು ಹೊತ್ತಾಗಿ ಬಂದಿತು. (ಬರು+ದ+ಇತು)
ಮಳೆ ಚೆನ್ನಾಗಿ ಬಿದ್ದಿತು. (ಬೀಳು+ದ+ಇತು)
ನಿನ್ನೆಯ ದಿನ ಆತನ ಉಪನ್ಯಾಸವಿದ್ದಿತು. (ಇರು+ದ+ಇತು)
ನಿನ್ನಿಂದ ನನ್ನ ಕೆಲಸವೆಲ್ಲ ಕೆಟ್ಟಿತು. (ಕೆಡು+ದ+ಇತು)
ಆ ದೊರೆಯನ್ನು ನೋಡಿ ಆ ಹಾನು ನಕ್ಕಿತು. (ನಗು+ದ+ಇತು)

ಇತ್ಯಾದಿ.

೧೯. ಇದ್ದಿತು, ಬಿದ್ದಿತು, ಬಂದಿತು ಎಂಬ ರೂಪಗಳಿಗೆ ಬದಲಾಗಿ ಇತ್ತು, ಬಿತ್ತು, ಬಂತು ಎಂಬ ರೂಪಗಳನ್ನು ಉಪಯೋಗಿಸುವುದುಂಟು.

ಉದಾಹರಣೆ.

ಮರದ ಪೊಟರೆಯಲ್ಲಿ ಒಂದು ತತ್ತಿ ಇತ್ತು.
ತೆಂಗಿನ ಗರಿ ಎಮ್ಮೆಯ ಬೆನ್ನಿನ ಮೇಲೆ ಬಿತ್ತು.
ದಂಡು ಬಂತು ! ದಂಡು ಬಂತು !

## ಭವಿಷ್ಯತ್ಕಾಲ.

೨೦. ತಿಳಿ, ಮಾಡು ಎಂಬ ಧಾತುಗಳ ಭವಿಷ್ಯತ್ಕಾಲ ರೂಪಗಳನ್ನು ಮುಂದೆ ಕೊಟ್ಟಿದೆ :

| | 'ತಿಳಿ' | | 'ಮಾಡು' | |
|---|---|---|---|---|
| | ಏಕ. | ಬಹು. | ಏಕ. | ಬಹು. |
| ಪ್ರ. ಪು. ಪು. | ತಿಳಿಯುವನು | ತಿಳಿಯುವರು | ಮಾಡುವನು | ಮಾಡುವರು |
| ಸ್ತ್ರೀ | ತಿಳಿಯುವಳು | | ಮಾಡುವಳು | |
| ನಪುಂ. | ತಿಳಿಯುವುದು | ತಿಳಿಯುವುವು | ಮಾಡುವುದು | ಮಾಡುವುವು |
| ಮ. ಪು. | ತಿಳಿಯುವೆ | ತಿಳಿಯುವಿರಿ | ಮಾಡುವೆ | ಮಾಡುವಿರಿ |
| ಉ. ಪು. | ತಿಳಿಯುವೆನು | ತಿಳಿಯುವೆವು | ಮಾಡುವೆನು | ಮಾಡುವೆವು |

ತಿಳಿಯುವನು = ತಿಳಿ + ಉವ + ಅನು ; ಮಾಡುವನು = ಮಾಡು + ಉವ + ಅನು ; 'ಉವ' ಎಂಬ ಕಾಲಪ್ರತ್ಯಯವು ಉಕಾರಾಂತ ಧಾತುಗಳಿಗೆ ಸೇರುವಾಗ ಲೋಪಸಂಧಿಯೂ ಮಿಕ್ಕ ಧಾತುಗಳಿಗೆ ಸೇರುವಾಗ ಆಗಮಸಂಧಿಯೂ ಆಗುತ್ತದೆ.

೨೧. ಭವಿಷ್ಯತ್ಕಾಲದ ರೂಪಗಳಿಗೆ ಕೆಲವು ಉದಾಹರಣೆಗಳು :

ನಡೆಯುವವನು ಒಮ್ಮೆಯಾದರೂ ಮುಗ್ಗರಿಸುವನು ; ಅದನ್ನು ನೋಡಿ ದುರ್ಜನರು ನಗುವರು, ಸಜ್ಜನರು ಸಂತೈಸುವರು.
(ಮುಗ್ಗರಿಸು + ಉವ + ಅನು, ನಗು + ಉವ + ಅರು, ಸಂತೈಸು + ಉವ + ಅರು)

ಇರುವೆ, ನೀನು ಎಲ್ಲೆಲ್ಲೂ ಇರುವೆ. (ಇರು + ಉವ + ಎ)

ಉದ್ಯೋಗಶೀಲನಿಗೆ ಲಕ್ಷ್ಮಿ ಒಲಿಯುವಳು. (ಒಲಿ + ಉವ + ಅಳು)

ಶ್ರವಣಬೆಳ್ಗೊಳದಲ್ಲಿ ಗೋಮಟೇಶ್ವರನ ಮಸ್ತಕಾಭಿಷೇಕವು ಹನ್ನೆರಡು ವರ್ಷಗಳಿಗೆ ಒಂದು ಬಾರಿ ನಡೆಯುವುದು. (ನಡೆ + ಉವ + ಉದು)

ನಮ್ಮ ದೇಶದಲ್ಲಿ ಪೈರನ್ನು ಕುಡುಗೋಲಿನಿಂದ ಕೊಯ್ಯುವರು ; ಪಶ್ಚಿಮ ದೇಶಗಳಲ್ಲಿ ಈ ಕೆಲಸಕ್ಕೆ ಯಂತ್ರಗಳನ್ನು ಉಪಯೋಗಿಸುವರು.
(ಕೊಯ್ + ಉವ + ಅರು : ಇಲ್ಲಿ 'ಯ' ಕಾರಕ್ಕೆ ದ್ವಿತ್ವವುಂಟಾಗಿದೆ ; ಉಪಯೋಗಿಸು + ಉವ + ಅರು.)

ನೀನು ಕೈಹಿಡಿಯದಿದ್ದರೆ ನಾವು ಸಾಯುವೆವು. (ಸಾ + ಉವ + ಎವು)

ಇತ್ಯಾದಿ.

೨೨. ಪ್ರಥಮಪುರುಷ ನಪುಂಸಕ ಏಕವಚನಕ್ಕೆ ಭವಿಷ್ಯತ್ಕಾಲದಲ್ಲಿ —ಉದು ಎಂದೂ, ಬಹುವಚನಕ್ಕೆ ಭೂತ ಭವಿಷ್ಯತ್ಕಾಲಗಳಲ್ಲಿ —ಉವು ಎಂದೂ ಆಖ್ಯಾತ ಪ್ರತ್ಯಯಗಳಷ್ಟೆ. ಕೆಲವರು ಈ ಪ್ರತ್ಯಯಗಳಿಗೆ ಬದಲಾಗಿ—ಅದು, —ಅವು ಎಂದು ಉಪಯೋಗಿಸುತ್ತಾರೆ.

ಉದಾಹರಣೆ.

ಆ ಕೆಲಸ ನಾಳೆ ನಡೆಯುವುದು. (ನಡೆ+ಉವ+ಅದು)
ನಮ್ಮ ಬಂಡಿಗಳು ಎಂದು ಬರುವುವು ? (ಬರು+ಉವ+ಅವು)
ಪುಸ್ತಕಗಳು ಇಲ್ಲೇ ಉಳಿದವು. (ಉಳಿ+ದ+ಅವು)

೨೩. ಭೂತಕಾಲದಲ್ಲಿ ಉತ್ತಮಪುರುಷ ಏಕವಚನದ ಪ್ರತ್ಯಯವಾದ —ಏನು ಎಂಬುದರ ಕೊನೆಯ ಅಕ್ಷರ ಎಷ್ಟೋ ವೇಳೆ ಬಿಟ್ಟುಹೋಗಿ —ಎ ಎಂದೇ ನಿಲ್ಲುತ್ತದೆ.

ಉದಾಹರಣೆ.

'ಇಕೊ, ಈ ಆಟದಲ್ಲಿ ನಾನು ಗಂಡಿನ ಕಡೆಯವನಲ್ಲ' ಎಂದು ಹೇಳಿಬಿಟ್ಟೆ ; ಗಂಡಿನ ಕಡೆಯವರು ಏನೇನನ್ನು ಅನುಭವಿಸಬೇಕಾಗುತ್ತದೋ ಎಂದು ಹೆದರಿದೆ. (ಬಿಡು+ದ+ಎ ; ಹೆದರು+ದ+ಎ)

## ಕಾಲಪಲ್ಲಟ.

೨೪. ಕ್ರಿಯೆ ಈಗ ನಡೆಯುವುದನ್ನು ವರ್ತಮಾನಕಾಲದ ರೂಪಗಳೂ, ಕಳೆದುಹೋದ ಕಾಲದಲ್ಲಿ ನಡೆದದ್ದನ್ನು ಭೂತಕಾಲದ ರೂಪಗಳೂ, ಮುಂದೆ ಬರುವ ಕಾಲದಲ್ಲಿ ನಡೆಯುವುದನ್ನು ಭವಿಷ್ಯತ್ಕಾಲದ ರೂಪಗಳೂ ತಿಳಿಸುವುವೆಂದು ಹಿಂದೆ ಓದಿದೆವು. ಆದರೆ ಹಲವು ಸಂದರ್ಭಗಳಲ್ಲಿ ಒಂದು ಕಾಲದ ರೂಪಕ್ಕೆ ಬದಲಾಗಿ ಮತ್ತೊಂದು ಕಾಲದ ರೂಪ ಬರುತ್ತದೆ. ಕೆಳಗಿನ ವಾಕ್ಯಗಳನ್ನು ನೋಡಿ :

೧. ಜೋಗದ ಜಲಪಾತದಲ್ಲಿ ಶರಾವತಿ ಒಂಬೈನೂರು ಅಡಿಗಳ ಎತ್ತರದಿಂದ ಧುಮುಕುತ್ತದೆ.
ಜೋಗದ ಜಲಪಾತದಲ್ಲಿ . . . ಎತ್ತರದಿಂದ ಧುಮುಕುವುದು.

೨. ಈ ರಸ್ತೆ ಹಾಸನಕ್ಕೆ ಹೋಗುತ್ತದೆ.
ಈ ರಸ್ತೆ ಹಾಸನಕ್ಕೆ ಹೋಗುವುದು.

೩. ಪರೀಕ್ಷೆಯ ಫಲಿತಾಂಶಗಳನ್ನು ಮುಂದಿನ ತಿಂಗಳು ೨೨ನೆಯ ತಾರೀಖಿನ ವೇಳೆಗೆ ಪ್ರಕಟಿಸುವರು.
ಪರೀಕ್ಷೆಯ ಫಲಿತಾಂಶಗಳನ್ನು . . . ಪ್ರಕಟಿಸುತ್ತಾರೆ.

೪. ಅಮ್ಮಾ, ಇನ್ನು ಕೆಲವು ದಿನಗಳಲ್ಲೇ ನಿನ್ನ ಪತಿಯನ್ನು ಸೇರುವೆ.
ಅಮ್ಮಾ, . . . ಪತಿಯನ್ನು ಸೇರುತ್ತೀಯೆ.

ಮೇಲೆ ವರ್ತಮಾನಕಾಲದ ರೂಪಗಳಿಗೆ ಬದಲಾಗಿ ಭವಿಷ್ಯತ್ಕಾಲದ ರೂಪಗಳೂ, ಭವಿಷ್ಯತ್ಕಾಲದ ರೂಪಗಳಿಗೆ ಬದಲಾಗಿ ವರ್ತಮಾನಕಾಲದ ರೂಪಗಳೂ ಭೇದವಿಲ್ಲದೆ ಬಂದಿವೆ. ಹೊಸಗನ್ನಡದಲ್ಲಿ ವರ್ತಮಾನ ಭವಿಷ್ಯತ್ಕಾಲಗಳೆರಡನ್ನು ತೋರಿಸುವುದಕ್ಕೂ ವರ್ತಮಾನಕಾಲದ ರೂಪ

ಗಳನ್ನು ಉಪಯೋಗಿಸುವುದೇ ರೂಢಿಯಾಗಿದೆ. ಭವಿಷ್ಯತ್ಕಾಲದ ರೂಪಗಳು ಹೆಚ್ಚು ಬಳಕೆಯಲ್ಲಿಲ್ಲ.

೨೫. ಕೆಳಗಿನ ವಾಕ್ಯಗಳನ್ನು ನೋಡಿ :

೧ 'ರಂಗಾ, ನಿನ್ನ ಕೆಲಸ ಇನ್ನೂ ಮುಗಿಯಲಿಲ್ಲವೆ ?' 'ಇಗೋ ಮುಗಿಯಿತು.'

೨. ಒಂದು ಏಟು ಬೆನ್ನಮೇಲೆ ಬೀಳುತ್ತಲೇ ಆ ಮುದುಕನು 'ಅಯ್ಯೋ ನಾನು ಸತ್ತೆ, ಎಂದು ಕಿರಿಚಿಕೊಂಡನು.

೩. ನೀನು ನಿಜವನ್ನು ಹೇಳಿದರೆ ಬದುಕಿದೆ, ಇಲ್ಲದಿದ್ದರೆ ಕೆಟ್ಟೆ.

ಮೊದಲನೆಯ ವಾಕ್ಯದಲ್ಲಿ ಕೆಲಸವು ಇನ್ನೂ ಮುಗಿದಿಲ್ಲ. 'ಮುಗಿಯುವುದು' ಎಂಬ ಭವಿಷ್ಯತ್ಕಾಲದ ರೂಪವನ್ನು ಉಪಯೋಗಿಸುವ ಬದಲು, ತ್ವರೆಯನ್ನು ಸೂಚಿಸುವುದಕ್ಕಾಗಿ 'ಮುಗಿಯಿತು' ಎಂಬ ಭೂತಕಾಲದ ರೂಪ ಬಂದಿದೆ. 'ನಾನು ಸತ್ತೆ,' 'ನೀನು ಬದುಕಿದೆ . . . ಕೆಟ್ಟೆ' ಎಂಬ ಕಡೆಗಳಲ್ಲಿ ಕ್ರಿಯೆ ಇನ್ನೂ ನಡೆದಿಲ್ಲ. ಆದರೆ ಖಂಡಿತ ನಡೆಯುವುದೆಂಬ ನಿಶ್ಚಯವನ್ನು ತೋರಿಸುವುದಕ್ಕಾಗಿ ಭೂತಕಾಲದ ರೂಪ ಬಂದಿದೆ.

ಹೀಗೆ ತ್ವರೆಯನ್ನೂ ನಿಶ್ಚಯವನ್ನೂ ತೋರಿಸುವುದಕ್ಕಾಗಿ, ಕ್ರಿಯೆ ಇನ್ನೂ ನಡೆಯದಿದ್ದರೂ ಭೂತಕಾಲದ ರೂಪ ಬರುತ್ತದೆ.

೨೬. ಕೆಳಗೆ ಕೊಟ್ಟಿರುವ ವಾಕ್ಯಗಳ ಗುಂಪುಗಳನ್ನು ನೋಡಿ :

೧. ಅಷ್ಟು ಹೊತ್ತಿಗೆ ಸೂತನು ಭೀಷ್ಮರ ಪತಾಕೆಯಲ್ಲಿ ಸಿಕ್ಕಿಕೊಂಡಿದ್ದ ಒಂದು ಬಾಣವನ್ನು ತಂದು ಅದರಲ್ಲಿ ಹೆಸರು ಬರೆದಿದೆ ಎಂದು ಹೇಳಿ ಕೊಡುವನು. ಭೀಷ್ಮರು ಓದಿಕೊಂಡು, "ನನ್ನ ಕಣ್ಣು ಮಂಜು ; ಸರಿಯಾಗಿ ಕಾಣುವುದಿಲ್ಲ, ಇದನ್ನು ಓದು ಗಾಂಧಾರರಾಜ !" ಎಂದು ಶಕುನಿಯ ಕೈಗೆ ಕೊಡುವರು. ಶಕುನಿಯು ಅರ್ಜುನನ ಹೆಸರನ್ನು ಓದಿನೋಡಿ ಆ ಬಾಣವನ್ನು ಬೀಸಾಡುವನು. ಅದು ದ್ರೋಣರ ಕಾಲಮೇಲೆ ಬೀಳುವುದು. . . .

೨ ಅಷ್ಟು ಹೊತ್ತಿಗೆ ಸರಿಯಾಗಿ ಕರ್ಣನ ರಥದ ಚಕ್ರವು ನೆಲದಲ್ಲಿ ಹೂತುಕೊಳ್ಳುತ್ತದೆ. ಆಗ ಕರ್ಣನು ಅರ್ಜುನನನ್ನು ನೋಡಿ "ಎಲೈ ಅರ್ಜುನಾ, ನನ್ನ ರಥದ ಚಕ್ರವನ್ನು ಎತ್ತಿ ಸರಿಪಡಿಸಬೇಕು ; ಅದುವರೆಗೂ ಸ್ವಲ್ಪ ಸುಮ್ಮನಿರು" ಎಂದು ಹೇಳುವನು. ಆದರೆ ಕೃಷ್ಣನು "ಅರ್ಜುನನೇ, ಇದೇ ಸಮಯ, ಬೇಗ ಬಾಣವನ್ನು ಹೂಡು" ಎಂದು ತ್ವರೆಪಡಿಸುವನು.

ಮೇಲೆ ಎರಡು ಕಡೆಗಳಲ್ಲೂ ಹೇಳಿರುವ ಕಾರ್ಯಗಳು ನಡೆದು ಎಷ್ಟೋ ಕಾಲ ಕಳೆದಿದೆ. ಆದ್ದರಿಂದ ಅವುಗಳಲ್ಲಿ ಗುರುತು ಮಾಡಿರುವ ಕ್ರಿಯಾಪದಗಳೆಲ್ಲಾ ಭೂತಕಾಲದ ರೂಪದಲ್ಲಿ ಇರಬೇಕಾಗಿದ್ದಿತು. ಆದರೆ ಈ ಕಾರ್ಯಗಳೆಲ್ಲ ಕಣ್ಣೆದುರಿಗೆ ನಡೆಯುವಂತೆ ಭಾವಿಸಿಕೊಂಡು ಹೇಳಿರುವುದರಿಂದ ಭೂತಕಾಲದ ರೂಪಗಳಿಗೆ ಪ್ರತಿಯಾಗಿ ವರ್ತಮಾನ ಭವಿಷ್ಯತ್ಕಾಲಗಳ ರೂಪಗಳು ಬಂದಿವೆ.

---

# ಹನ್ನೆರಡನೆಯ ಅಧ್ಯಾಯ

## ಪೂರ್ಣ ಕ್ರಿಯಾಪದ: ಅರ್ಥಗಳು

### ೧. ವಿಧ್ಯರ್ಥ

೧. ಒಂದು ಕ್ರಿಯೆಯ ವಿಷಯದಲ್ಲಿ ವಿಧಿ, ನಿಷೇಧ, ಸಂಭಾವನೆಗಳನ್ನು ತಿಳಿಸುವುದಕ್ಕಾಗಿ ವಿಧ್ಯರ್ಥ, ನಿಷೇಧಾರ್ಥ, ಸಂಭಾವನಾರ್ಥ ರೂಪಗಳು ಧಾತುವಿಗೆ ಬರುತ್ತವೆಂದು ಹಿಂದೆ ನೋಡಿದೆವು. ಇವುಗಳಲ್ಲಿ ವಿಧ್ಯರ್ಥದ ರೂಪಗಳನ್ನು ಮೊದಲು ಪರಿಶೀಲಿಸೋಣ :

೨. ವಿಧ್ಯರ್ಥದ ಪ್ರತ್ಯಯಗಳು ಈ ಕೆಳಗೆ ಕಂಡಂತೆ ಇವೆ. ಇವು ಧಾತುವಿಗೆ ನೇರವಾಗಿ ಹತ್ತುತ್ತವೆ.

| | ಏಕ. | ಬಹು. |
|---|---|---|
| ಪ್ರ. ಪು. | -ಅಲಿ | -ಅಲಿ |
| ಮ. ಪು. | — | -ಇರಿ, -ಇ |
| ಉ. ಪು. | (ಅಲಿ) | -ಓಣ |

೩. ತಿಳಿ, ಮಾಡು ಎಂಬ ಧಾತುಗಳ ವಿಧ್ಯರ್ಥದ ರೂಪಗಳು :

| | 'ತಿಳಿ' ಏಕ. | 'ತಿಳಿ' ಬಹು. | 'ಮಾಡು' ಏಕ. | 'ಮಾಡು' ಬಹು. |
|---|---|---|---|---|
| ಪ್ರ. ಪು. | ತಿಳಿಯಲಿ | ತಿಳಿಯಲಿ | ಮಾಡಲಿ | ಮಾಡಲಿ |
| ಮ. ಪು. | ತಿಳಿ | ತಿಳಿಯಿರಿ | ಮಾಡು | ಮಾಡಿರಿ, ಮಾಡಿ |
| ಉ. ಪು. | (ತಿಳಿಯಲಿ) | ತಿಳಿಯೋಣ | (ಮಾಡಲಿ) | ಮಾಡೋಣ |

೪. ವಿಧ್ಯರ್ಥಕ್ಕೆ ಸಂಬಂಧಿಸಿದ ಕೆಲವು ವಿಶೇಷಾಂಶಗಳನ್ನು ಈಗ ನೋಡೋಣ.

೫. **ಪ್ರಥಮ ಪುರುಷ :**

(೧) ಪ್ರಥಮ ಪುರುಷದಲ್ಲಿ ಲಿಂಗ ವಚನ ಭೇದವಿಲ್ಲ.

ಉದಾಹರಣೆ.

ಪುಲ್ಲಿಂಗ : ರಾಮನು ಹದಿನಾಲ್ಕು ವರ್ಷಗಳ ಕಾಲ ಕಾಡಿಗೆ ಹೋಗಲಿ ; ಭರತನು ರಾಜ್ಯವನ್ನಾಳಲಿ, (ಹೋಗು+ಅಲಿ, ಆಳು+ಅಲಿ)

ಸ್ತ್ರೀಲಿಂಗ : ಪರಿಮಳೆ ಹೂವುಗಳನ್ನು ಕೊಯ್ಯಲಿ. (ಕೊಯ್+ಅಲಿ ; ದ್ವಿತ್ವ)

ಪುಂಸ್ತ್ರೀ ಬಹುವಚನ : ಇವರೆಲ್ಲರೂ ನನ್ನ ಸಂಗಡ ನಾಟಕಕ್ಕೆ ಬರಲಿ. (ಬರು+ಅಲಿ)

ನಪುಂಸಕಲಿಂಗ : ನಿನ್ನ ಕಾಲಿನ ಹುಣ್ಣು ಬೇಗ ಮಾಯಲಿ. (ಮಾಯ್+ಅಲಿ)
ಹಸುಗಳು ಚೆನ್ನಾಗಿ ಹಾಲು ಕರೆಯಲಿ. (ಕರೆ+ಅಲಿ)

(೨) ಕೇಡನ್ನು ಹಾರೈಸುವಾಗ –ಅಲಿ ಪ್ರತ್ಯಯಕ್ಕೆ ಬದಲಾಗಿ –ಅ ಎಂಬ ಪ್ರತ್ಯಯ ಸೇರುವುದುಂಟು.

ಉದಾಹರಣೆ.

ಅವನಿಗೆ ಸಿಡಿಲು ಬಡಿಯು. (ಬಡಿ+ಅ)
ಅವನ ಮನೆ ಹಾಳಾಗ. (ಆಗು+ಅ)

'ಬಡಿಯಲಿ', 'ಹಾಳಾಗಲಿ',–ಎಂದೂ ಹೇಳಬಹುದು.

೬. **ಮಧ್ಯಮಪುರುಷ ಏಕವಚನ :**

(೧) ಮಧ್ಯಮಪುರುಷ ಏಕವಚನದಲ್ಲಿ ಪ್ರತ್ಯಯ ಯಾವುದೂ ಹತ್ತುವುದಿಲ್ಲ; ಧಾತುವಿನ ಪ್ರಕೃತಿರೂಪವೇ ಈ ಕ್ರಿಯಾಪದ ರೂಪವಾಗುತ್ತದೆ.

ಉದಾಹರಣೆ.

ಸತ್ಯವನ್ನು ಹೇಳು; ಧರ್ಮದಲ್ಲಿ ನಡೆ.
ನನ್ನ ಪ್ರಶ್ನೆಗೆ ಉತ್ತರಕೊಟ್ಟು, ಈ ಕೊಳದ ನೀರನ್ನು ಕುಡಿ.
ಈ ದಂಡವನ್ನು ಹಿಡಿ, ನನ್ನನ್ನು ಹಿಂಬಾಲಿಸು.

(೨) ಸಾ, ಬೇ, ನೋ ಮೊದಲಾದ ಒಂದು ಅಕ್ಷರವನ್ನು ಮಾತ್ರ ಉಳ್ಳ ಧಾತುಗಳಿಗೂ, ಬಯ್, ಕೊಯ್ ಮೊದಲಾದ ವ್ಯಂಜನಾಂತ ಧಾತುಗಳಿಗೂ –ಇ ಎಂಬ ಸ್ವರ ಸೇರಿ ಮಧ್ಯಮಪುರುಷ ಏಕವಚನದ ರೂಪಗಳಾಗುತ್ತವೆ.

ಉದಾಹರಣೆ.

ಉಳಿಯುವ ಆಸೆಯಿದ್ದರೆ ಬೇಗ ಧುಮುಕು, ಇಲ್ಲದಿದ್ದರೆ ಅಲ್ಲೇ ಸಾಯಿ. (ಸಾ+ಇ)
ಮಾವಿನ ಹಣ್ಣುಗಳನ್ನು ಈ ಚೂರಿಯಿಂದ ಕೊಯ್ಯಿ. (ಕೊಯ್+ಇ: ದ್ವಿತ್ವ)
ಹೀಗೆಯೇ— ಬೇ–ಬೇಯಿ, ನೋ–ನೋಯಿ, ಬಯ್–ಬಯ್ಯಿ (ಬೈಯಿ), ಮಾಯ್–ಮಾಯಿ, ಇತ್ಯಾದಿ.

(೩) ತರು, ಬರು, ಕೊಳ್ಳು ಎಂಬ ಧಾತುಗಳಿಗೆ ತಾ, ಬಾ, ಕೋ (ಅಥವಾ ಕೊ) ಎಂಬ ರೂಪಗಳು ಬರುತ್ತವೆ.

ಉದಾಹರಣೆ.

ನನಗೆ ಒಂದು ಲೋಟದ ತುಂಬ ಪಾನಕವನ್ನು ತಾ.
ಬಾ ನನ್ನ ಕಂದ, ಬಾ ನನ್ನ ಚಿನ್ನ.
ಈ ಒಡವೆಗಳನ್ನು ಕೆಲವು ಕಾಲ ನಿನ್ನ ಬಳಿ ಇರಿಸಿಕೊ.

೭ ಮಧ್ಯಮಪುರುಷ ಬಹುವಚನ :

(೧) –ಇರಿ ಎಂಬ ಪ್ರತ್ಯಯ ಎಲ್ಲ ಧಾತುಗಳಿಗೂ ಹತ್ತುತ್ತದೆ.

(೨) ಉಕಾರಾಂತ ಧಾತುಗಳಿಗೆ ಮಾತ್ರ –ಇ ಎಂಬುದು ಸೇರುವುದು ಹೆಚ್ಚು ರೂಢಿಯಾಗಿದೆ.

ಉದಾಹರಣೆ.

–ಇರಿ :

ವೈರವನ್ನು ತೊರೆಯಿರಿ ; ಗೆಳೆಯರಾಗಿ ಒಬ್ಬರ ಕೈಯನ್ನೊಬ್ಬರು ಹಿಡಿಯಿರಿ. (ತೊರೆ+ಇರಿ, ಹಿಡಿ+ಇರಿ)
ಈ ತುಂಟನನ್ನು ನೀವಾದರೂ ಚೆನ್ನಾಗಿ ಬೈಯಿರಿ. (ಬೈ+ಇರಿ)

–ಇ :

ನೀವೆಲ್ಲರೂ ಒಂದು ಸಾಲಾಗಿ ನಿಲ್ಲಿ. (ನಿಲ್ಲು+ಇ)
(ನಿಲ್ಲಿರಿ ಎಂದೂ ಹೇಳಬಹುದು.)
ಈಗ ಪಶ್ಚಿಮಕ್ಕೆ ತಿರುಗಿ (ರಿ) ; ಶುಕ್ರಗ್ರಹವೆಲ್ಲಿದೆ ತೋರಿಸಿ (ರಿ).
ಈ ಅಲ್ಪವಾದ ಕಾಣಿಕೆಯನ್ನು ಕೊಳ್ಳಿ (ರಿ).

(೩) ತರು, ಬರು ಎಂಬ ಧಾತುಗಳಿಗೆ ತನ್ನಿ (ರಿ), ಬನ್ನಿ (ರಿ) ಎಂಬ ರೂಪಗಳು ಬರುತ್ತವೆ.

ಉದಾಹರಣೆ.

ಅಂಗಡಿಯಿಂದ ಬರುವಾಗ ಒಂದು ಸೇರು ಬಾದಾಮಿಯನ್ನು ತನ್ನಿ.
ಓಡಿ ಬನ್ನಿ, ನೋಡಿ ಬನ್ನಿ, ಗುಂಡಲಲ್ಲದ ದುಂಡುಕಡಲೆ !

೮. ಮಧ್ಯಮಪುರುಷದ ಏಕವಚನ ಬಹುವಚನಗಳಲ್ಲಿ ವಿಧ್ಯರ್ಥವನ್ನು ತೋರಿಸುವುದಕ್ಕಾಗಿ ಧಾತುವಿಗೆ –ಉವುದು (=ಉವ+ಉದು) ಎಂಬ ಪ್ರತ್ಯಯ ಸೇರುವುದುಂಟು.

ಉದಾಹರಣೆ.

ಇಲ್ಲಿಗೆ ಬಂದ ಯಾಚಕರಿಗೆಲ್ಲಾ ನೀನು ಒಂದೊಂದು ಹಿಡಿ ಅಕ್ಕಿಯನ್ನು ಹಾಕುವುದು. (ಹಾಕು+ಉವುದು)
ಕತ್ತಲೆ ಕವಿದಮೇಲೆ ಕೋಟೆಯ ಬಾಗಿಲಿಗೆ ಬಂದವರನ್ನೆಲ್ಲಾ ನೀವು ತಡೆಯುವುದು. (ತಡೆ+ಉವುದು)

**೯. ಉತ್ತಮಪುರುಷ ಏಕವಚನ :**

ಉತ್ತಮಪುರುಷ ಏಕವಚನದಲ್ಲಿ ವಿಧ್ಯರ್ಥದ ರೂಪಗಳು ಸಾಮಾನ್ಯವಾಗಿ ದೊರೆಯುವುದಿಲ್ಲ. ವಾಕ್ಯದಲ್ಲಿ ಪ್ರಶ್ನೆಯೂ ಸೇರಿದ್ದರೆ, —ಅಲಿ ಎಂಬ ಪ್ರತ್ಯಯವು ಧಾತುವಿಗೆ ಹತ್ತುತ್ತದೆ.

ಉದಾಹರಣೆ.

ಕೈಹಿಡಿದ ಗಂಡನೇ ಕಾಡಿಗೆ ಅಟ್ಟಿದಮೇಲೆ ನಾನು ಯಾರನ್ನು ದೂರಲಿ ? (ದೂರು+ಅಲಿ)

ನಾನು ಬಟ್ಟೆಯನ್ನು ಒಗೆಯಲೇ, ಸೌದೆಯನ್ನು ಸೀಳಲೆ ?
(ಒಗೆ+ಅಲಿ+ಏ) (ಸೀಳು+ಅಲಿ+ಏ)

**೧೦. ಉತ್ತಮಪುರುಷ ಬಹುವಚನ :**

(೧) ಉತ್ತಮಪುರುಷ ಬಹುವಚನದಲ್ಲಿ ಧಾತುವಿಗೆ—ಓಣ ಎಂಬ ಪ್ರತ್ಯಯ ಸೇರುತ್ತದೆ.

ಉದಾಹರಣೆ.

ಸಂಜೆಗೆ ನಾವೆಲ್ಲ ಲಲಿತಾದ್ರಿಗೆ ಹೋಗೋಣ.
(ಹೋಗು+ಓಣ)
ನಾವೇ ಆತನಿಗೆ ಇನ್ನೊಂದು ಕಾಗದವನ್ನು ಬರೆಯೋಣ.
(ಬರೆ+ಓಣ)

(೨) —ಓಣ ಎಂಬುದಕ್ಕೆ ಬದಲಾಗಿ ಕೆಲವರು —ಉವ ಎಂಬ ಪ್ರತ್ಯಯವನ್ನು ಉಪಯೋಗಿಸುವುದುಂಟು.

ಉದಾಹರಣೆ.

ನಾವೆಲ್ಲರೂ ಸುಖವಾಗಿ ಬಂದು ಸೇರಿದೆವೋ ? ಎಣಿಸಿ ನೋಡುವ
(ನೋಡು+ಉವ)

ಈ ಪ್ರತ್ಯಯ ಈಗ ಅಷ್ಟು ಬಳಕೆಯಲ್ಲಿಲ್ಲ.

**೧೧. ವಿಧ್ಯರ್ಥದ ಪ್ರಯೋಗ :**

ವಿಧ್ಯರ್ಥದ ಕ್ರಿಯಾಪದರೂಪಗಳನ್ನು ಅಪ್ಪಣೆ ಮಾಡುವುದಕ್ಕೆ ಮಾತ್ರವೇ ಅಲ್ಲದೆ ಕೋರಿಕೆ, ಹಾರೈಕೆ, ಅನುಮತಿ, ಉದ್ದೇಶ ಮೊದಲಾದ ಇನ್ನೂ ಹಲವು ಅರ್ಥಗಳನ್ನು ತೋರಿಸುವುದಕ್ಕಾಗಿ ಉಪಯೋಗಿಸುತ್ತಾರೆ.

ಉದಾಹರಣೆ.

ಕೋರಿಕೆ : ಕಣ್ಣು ಕಾಣದ ಮುದುಕನಿಗೆ ಭಿಕ್ಷ ನೀಡಿ ತಾಯಿ!
(ನೀಡು+ಇ)
ಹಾರೈಕೆ : ಮಳೆಬೆಳೆಗಳು ಚೆನ್ನಾಗಿ ನಡೆಯಲಿ.
(ನಡೆ+ಅಲಿ)
ಅನುಮತಿ : ಅಪ್ಪಣೆ ಚೀಟಿಯನ್ನುಳ್ಳವರೆಲ್ಲರೂ ಒಳಕ್ಕೆ ಬನ್ನಿ.
(ಬರು+ಇ)
ಉದ್ದೇಶ : ಇನ್ನು ಊಟಕ್ಕೆ ಏಳೋಣ.
(ಏಳು+ಓಣ)

ಇತ್ಯಾದಿ

## ೨. ನಿಷೇಧಾರ್ಥ.

೧೨. ಒಂದು ಕೆಲಸ ನಡೆಯಲಿಲ್ಲ ಅಥವಾ ನಡೆಯುವುದಿಲ್ಲ ಎಂಬುದನ್ನು, ಎಂದರೆ ಕ್ರಿಯೆಯ ನಿಷೇಧವನ್ನು, ನಿಷೇಧಾರ್ಥದ ರೂಪಗಳು ತಿಳಿಸುತ್ತವೆ.

೧೩ ನಿಷೇಧಾರ್ಥದ ಆಖ್ಯಾತಪ್ರತ್ಯಯಗಳು ಬಲುಮಟ್ಟಿಗೆ ಭೂತಭವಿಷ್ಯತ್ಕಾಲದ ಆಖ್ಯಾತಪ್ರತ್ಯಯಗಳಂತೆಯೇ ಇವೆ; ಪ್ರಥಮ ಪುರುಷ ನಪುಂಸಕಲಿಂಗದಲ್ಲಿ ಮಾತ್ರ ಬೇರೆಯಾಗುತ್ತವೆ. ನಿಷೇಧಾರ್ಥದ ಆಖ್ಯಾತಪ್ರತ್ಯಯಗಳನ್ನು ಕೆಳಗೆ ಕೊಟ್ಟಿದೆ:

| | | ಏಕ. | ಬಹು. |
|---|---|---|---|
| ಪ್ರ. ಪು. | ಪು. | —ಅನು | —ಅರು. |
| | ಸ್ತ್ರೀ. | —ಅಳು | |
| | ನಪುಂ. | —ಅದು | —ಅವು |
| ಮ. ಪು. | | —ಎ | —ಇರಿ |
| ಉ. ಪು. | | —ಎನು | —ಎವು |

೧೪. ಈ ಪ್ರತ್ಯಯಗಳು ಧಾತುವಿಗೆ ನೇರವಾಗಿ ಹತ್ತುತ್ತವೆ. ತಿಳಿ, ಮಾಡು ಎಂಬ ಧಾತುಗಳ ನಿಷೇಧಾರ್ಥದ ರೂಪಗಳು ಕೆಳಗೆ ಕಂಡಂತೆ ಆಗುತ್ತವೆ.

| | | 'ತಿಳಿ' | | 'ಮಾಡು' | |
|---|---|---|---|---|---|
| | | ಏಕ. | ಬಹು. | ಏಕ. | ಬಹು. |
| ಪ್ರ. ಪು. | ಪು. | ತಿಳಿಯನು | ತಿಳಿಯರು | ಮಾಡನು | ಮಾಡರು |
| | ಸ್ತ್ರೀ. | ತಿಳಿಯಳು | | ಮಾಡಳು | |
| | ನಪುಂ. | ತಿಳಿಯದು | ತಿಳಿಯವು | ಮಾಡದು | ಮಾಡವು |
| ಮ. ಪು. | | ತಿಳಿಯೆ | ತಿಳಿಯಿರಿ | ಮಾಡೆ | ಮಾಡಿರಿ |
| ಉ. ಪು | | ತಿಳಿಯೆನು | ತಿಳಿಯೆವು | ಮಾಡೆನು | ಮಾಡೆವು |

೧೫. ಇನ್ನೂ ಕೆಲವು ಧಾತುಗಳ ರೂಪಗಳನ್ನು ನೋಡಿ:

ಆತನ ವಿಷಯದಲ್ಲಿ ಯಾರೂ ಕೆಟ್ಟದ್ದನ್ನು ನೆನೆಯರು.
(ನೆನೆ+ಅರು)
ಆ ಜಿಂಕೆ ಯಾವ ಬೇಟೆಗಾರನ ಗುರಿಗೂ ಸಿಕ್ಕದು.
(ಸಿಕ್ಕು+ಅದು)
ಕೆಲವು ಹೋರಿಗಳು ಹುಲಿಗೆ ಕೂಡ ಹೆದರವು.
(ಹೆದರು+ಅವು)
ಅವನು ಸತ್ತನು; ಇನ್ನು ಹುಟ್ಟನು. (ಹುಟ್ಟು+ಅನು)
ಅವರ ತಾಯಿ ಪ್ರತಿದಿನವೂ ಸೂರ್ಯದರ್ಶನವಾದ ಹೊರತು ಊಟ ಮಾಡಳು. (ಮಾಡು+ಅಳು)
ಅವರಿಬ್ಬರಿಗೂ ಎಷ್ಟು ಸ್ನೇಹವೆಂಬುದನ್ನು ನೀನು ಅರಿಯೆ.
(ಅರಿ+ಎ)
ಇನ್ನು ಆ ಮನೆಯ ಕಡೆಗೆ ತಿರುಗಿ ನೋಡೆವು. (ನೋಡು+ಎವು)
ಇತ್ಯಾದಿ

೧೬. ನಿಷೇಧಾರ್ಥದ ಪ್ರತ್ಯಯಗಳು ಹತ್ತುವಾಗ ತರು, ಬರು ಎಂಬ ಧಾತುಗಳ ಮೊದಲನೆಯ ಸ್ವರವು ದೀರ್ಘವಾಗುತ್ತದೆ.

ಉದಾಹರಣೆ.

ನಲ್ಲೆ ಹೋದಳು, ಮತ್ತೆ ಬಾರಳು.
ತಾರನು, ತಾರಳು, ತಾರದು, ತಾರೆನು; ಬಾರನು, ಬಾರಳು, ಬಾರದು, ಬಾರವು, ಬಾರೆನು, ಇತ್ಯಾದಿ.

೧೭. ಪ್ರಥಮಪುರುಷ ಪುಲ್ಲಿಂಗ ಏಕವಚನದ—ಅನು, ಉತ್ತಮ ಪುರುಷ ಏಕವಚನದ—ಏನು ಎಂಬ ಪ್ರತ್ಯಯಗಳ ಕೊನೆಯ ಅಕ್ಷರವು ಲೋಪವಾಗಿ, —ಅ, —ಎ ಎಂದು ನಿಲ್ಲುವುದುಂಟು.

ಉದಾಹರಣೆ.

ತಾನೂ ತಿನ್ನ, ಪರರಿಗೂ ಕೊಡ,
(ತಿನ್ನ+ಅ, ಕೊಡು+ಅ)
ಇದರ ರಹಸ್ಯವನ್ನು ನಾನಂತೂ ಅರಿಯೆ. (ಅರಿ+ಎ)

೧೮. ಈ ನಿಷೇಧಾರ್ಥದ ರೂಪಗಳನ್ನು ಉಪಯೋಗಿಸುವುದು ಈಗ ಬಲುಮಟ್ಟಿಗೆ ಕಡಮೆಯಾಗಿವೆ. ಇವಕ್ಕೆ ಬದಲಾಗಿ, 'ಹೇಳಲಿಲ್ಲ, ಹೇಳುವುದಿಲ್ಲ, ಹೇಳಿಲ್ಲ ಹೇಳುತ್ತಿಲ್ಲ' —ಈ ಬಗೆಯ ಸಂಯುಕ್ತ ಕ್ರಿಯಾ ಪದಗಳನ್ನು ಉಪಯೋಗಿಸುವುದೇ ರೂಢಿ. ಇವುಗಳ ವಿಚಾರವನ್ನು ಬೇರೊಂದು ಅಧ್ಯಾಯದಲ್ಲಿ ಹೇಳಲಾಗುತ್ತದೆ.

### ೩. ಸಂಭಾವನಾರ್ಥ

೧೯. ಸಂಭಾವನಾರ್ಥದ ಆಖ್ಯಾತ ಪ್ರತ್ಯಯಗಳು ಕೆಳಗೆ ಕಂಡಂತೆ ಇವೆ :

| | ಏಕ. | ಬಹು. |
|---|---|---|
| ಪ್ರ. ಪು. ಪು. | —ಆನು | —ಆರು |
| ಸ್ತ್ರೀ. | —ಆಳು | |
| ನಪುಂ. | —ಈತು | —ಆವು |
| ಮ. ಪು. | —ಈಯೆ | —ಈರಿ |
| ಉ. ಪು. | —ಏನು | —ಏವು |

೨೦. ತಿಳಿ, ಮಾಡು ಎಂಬ ಧಾತುಗಳ ಸಂಭಾವನಾರ್ಥದ ರೂಪಗಳು :

'ತಿಳಿ'

| | ಏಕ. | ಬಹು. |
|---|---|---|
| ಪ್ರ. ಪು. ಪು. | ತಿಳಿದಾನು | ತಿಳಿದಾರು |
| ಸ್ತ್ರೀ. | ತಿಳಿದಾಳು | |
| ನಪುಂ. | ತಿಳಿದೀತು | ತಿಳಿದಾವು |
| ಮ. ಪು. | ತಿಳಿದೀಯೆ | ತಿಳಿದೀರಿ |
| ಉ. ಪು. | ತಿಳಿದೇನು | ತಿಳಿದೇವು |

'ಮಾಡು'

| | | |
|---|---|---|
| ಪ್ರ. ಪು. ಪು. | ಮಾಡಿಯಾನು | ಮಾಡಿಯಾರು |
| ಸ್ತ್ರೀ. | ಮಾಡಿಯಾಳು | |
| ನಪುಂ. | ಮಾಡೀತು | ಮಾಡಿಯಾವು |
| ಮ. ಪು. | ಮಾಡೀಯೆ | ಮಾಡೀರಿ |
| ಉ. ಪು. | ಮಾಡೇನು | ಮಾಡೇವು |

೨೧. ಮೇಲಿನ 'ತಿಳಿದಾನು, ಮಾಡಿಯಾನು' ಮೊದಲಾದ ರೂಪಗಳನ್ನು ಬಿಡಿಸಿನೋಡಿ :

ತಿಳಿ+ದ+ಆನು=ತಿಳಿದಾನು,,
ಮಾಡು+ಇ+ಆನು=ಮಾಡಿಯಾನು, ಇತ್ಯಾದಿ.

'ತಿಳಿ' ಧಾತುವಿಗೂ ಸಂಭಾವನಾರ್ಥದ ಆಖ್ಯಾತಪ್ರತ್ಯಯಗಳಿಗೂ ನಡುವೆ _ದ _ಎಂಬ ಪ್ರತ್ಯಯ ಬಂದಿದೆ. 'ಮಾಡು' ಧಾತುವಿಗೆ ಸಂಭಾವನಾರ್ಥದ ಆಖ್ಯಾತಪ್ರತ್ಯಯಗಳು ನೇರವಾಗಿ ಸೇರಿವೆ. ಆದರೆ ಪ್ರಥಮ ಪುರುಷದಲ್ಲಿ _ಈತು ಎಂಬುದು ಹೊರತು ಮಿಕ್ಕ ನಾಲ್ಕು ಪ್ರತ್ಯಯಗಳು ಸೇರುವಾಗ ಈ ಧಾತುವಿಗೂ ಪ್ರತ್ಯಯಕ್ಕೂ ನಡುವೆ–ಇ–ಎಂಬುದು ಸೇರಿದೆ.

೨೨. ಈಗ ಕೆಲವು ಧಾತುಗಳ ಭೂತಕಾಲದ ರೂಪಗಳನ್ನೂ ಸಂಭಾವನಾರ್ಥದ ರೂಪಗಳನ್ನೂ ಹೋಲಿಸಿ ನೋಡಿ:

| ಧಾತು | (ಪ್ರ. ಪು. ಏಕ.) ಭೂತಕಾಲದ ರೂಪ | (ಪ್ರ. ಪು. ಏಕ.) ಸಂಭಾವನಾರ್ಥದ ರೂಪ |
|---|---|---|
| ಮಾಡು | ಮಾಡಿದನು | ಮಾಡಿಯಾನು |
| ಕಲಿಸು | ಕಲಿಸಿದನು | ಕಲಿಸಿಯಾನು |
| ಓಡಿಸು | ಓಡಿಸಿದನು | ಓಡಿಸಿಯಾನು |
| ಮಲಗು | ಮಲಗಿದನು | ಮಲಗಿಯಾನು |
| ತಿಳಿ | ತಿಳಿದನು | ತಿಳಿದಾನು |
| ತಡೆ | ತಡೆದನು | ತಡೆದಾನು |
| ಕೊಯ್ | ಕೊಯ್ದನು | ಕೊಯ್ದಾನು |
| ನಗು | ನಕ್ಕನು | ನಕ್ಕಾನು |
| ಕೊಡು | ಕೊಟ್ಟನು | ಕೊಟ್ಟಾನು |
| ಬೀಳು | ಬಿದ್ದನು | ಬಿದ್ದಾನು |
| ಬೇ | ಬೆಂದನು | ಬೆಂದಾನು |
| ಸೋಲು | ಸೋತನು | ಸೋತಾನು |
| ಹೋಗು | ಹೋದನು | ಹೋದಾನು |
| ಇರು | ಇದ್ದನು | ಇದ್ದಾನು, ಇತ್ಯಾದಿ. |

ಮೇಲಿನ ಪಟ್ಟಿಯಿಂದ ಒಂದು ವಿಷಯ ಗೊತ್ತಾಗುತ್ತದೆ. ಭೂತಕಾಲ ಪ್ರತ್ಯಯವಾದ -ದ - ಎಂಬುದು ಯಾವ ಧಾತುಗಳಿಗೆ ಸೇರುವಾಗ ಧಾತುವಿಗೂ ಕಾಲಪ್ರತ್ಯಯಕ್ಕೂ ನಡುವೆ ಇಕಾರ ಬರುತ್ತದೋ ಅಂಥ ಧಾತುಗಳಿಗೆ ಸಂಭಾವನಾರ್ಥದಲ್ಲಿ ಯಾವ ನಡುವಣ ಪ್ರತ್ಯಯವೂ ಸೇರುವುದಿಲ್ಲ; ಪ್ರಥಮ ಪುರುಷದಲ್ಲಿ ಮಾತ್ರ -ಇ ಎಂಬುದು ಸೇರುತ್ತದೆ; ಉದಾಹರಣೆಗೆ, ಭೂತಕಾಲದಲ್ಲಿ; ಮಾಡಿದನು=ಮಾಡು+ಇ+ದ+ಅನು; ಸಂಭಾವನಾರ್ಥದಲ್ಲಿ; ಮಾಡಿಯಾನು = ಮಾಡು+ಇ+ಆನು.

ಮಿಕ್ಕ ಧಾತುಗಳಿಗೆಲ್ಲ ಸಂಭಾವನಾರ್ಥದ ಪ್ರತ್ಯಯಗಳು ಸೇರುವುದಕ್ಕೆ ಮುಂಚೆ -ದ ಎಂಬ ನಡುವಣ ಪ್ರತ್ಯಯ ಬರುತ್ತದೆ. ಭೂತಕಾಲಪ್ರತ್ಯಯ ಸೇರುವಾಗ ನಡೆಯುವ ವ್ಯತ್ಯಾಸಗಳೇ ಈ ಪ್ರತ್ಯಯ ಸೇರುವಾಗಲೂ ನಡೆಯುತ್ತವೆ.

೨೩. ಸಂಭಾವನಾರ್ಥದ ರೂಪಗಳು ಬಂದಿರುವ ಕೆಲವು ವಾಕ್ಯಗಳನ್ನು ನೋಡಿ:

ತಾಳಿದವನು ಬಾಳಿಯಾನು. (ಬಾಳು+ಇ+ಆನು)

ಅವನ ಬೇಳುವೆ ಮಾತುಗಳಿಗೆ ಕಿವಿಯನ್ನು ಜೋಲಿಸೀಯೆ. ಜೋಕೆ (ಜೋಲಿಸು+ಈಯೆ)

ಕಾವೇರಿಯ ನೀರೆ ಇಲ್ಲಿಗೆ ಬಂದರೆ, ನಮ್ಮ ಬಡತನವೂ ನೀಗೀತು.
(ನೀಗು+ಈತು)
ರಾಮನ ಪಾದಗಳನ್ನು ನಾನು ಎಂದಿಗೆ ಕಂಡೇನು?
(ಕಾಣು+ದ+ಏನು)
ಬಾಗಿಲನ್ನು ಮೆಲ್ಲಗೆ ಮುಚ್ಚು; ಮಗುವಿಗೆ ಎಚ್ಚರವಾದೀತು.
(ಆಗು+ದ+ಈತು)
ಬಡವರ ಮನೆಗೆ ನೀವೇಕೆ ಬಂದೀರಿ? (ಬರು+ದ+ಈರಿ)

೨೪. ಮಾಡಿಯಾನು, ಮಾಡಿಯಾಳು, ಮಾಡಿಯಾರು, ಮಾಡಿಯಾವು—ಈ ಬಗೆಯ ರೂಪಗಳಿಗೆ ಬದಲಾಗಿ ಮಾಡ್ಯಾನು, ಮಾಡ್ಯಾಳು, ಮಾಡ್ಯಾರು, ಮಾಡ್ಯಾವು—ಎಂಬ ರೂಪಗಳನ್ನು ಉಪಯೋಗಿಸುವುದು ಸಾಧುವಲ್ಲ.

೨೫. ಒಂದು ಕ್ರಿಯೆ ನಡೆದರೂ ನಡೆಯಬಹುದು ಎಂದು ಊಹಿಸುವುದಕ್ಕೆ 'ಸಂಭಾವನೆ' ಎಂದು ಹೆಸರು. ಇದರಲ್ಲಿ ಕ್ರಿಯೆ ನಡೆದೇ ನಡೆಯುವುದೆಂಬ ನಂಬಿಕೆಯಿಲ್ಲ. ಆದರೆ ನಡೆಯುವುದೋ ಇಲ್ಲವೋ ಎಂಬ ಸಂಶಯಸ್ಥಿತಿಗಿಂತಲೂ ಇದು ಮೇಲು, ಆದ್ದರಿಂದ, ಕ್ರಿಯೆ ನಡೆಯದಿರುವುದಕ್ಕಿಂತಲೂ ನಡೆಯುವ ಸಂಭವವೇ ಹೆಚ್ಚು ಎಂಬುದನ್ನು ಸಂಭಾವನಾರ್ಥದ ರೂಪಗಳು ತೋರಿಸುತ್ತವೆ. ಮೇಲೆ ಕೊಟ್ಟಿರುವ ಉದಾಹರಣೆಯ ವಾಕ್ಯಗಳಿಂದ ಇದು ಸ್ಪಷ್ಟವಾಗುತ್ತದೆ.

೨೬. ಸಂಭಾವನಾರ್ಥದಲ್ಲಿ ಮಧ್ಯಮಪುರುಷದ ರೂಪಗಳು ಕೆಲವು ವೇಳೆ 'ಈ ಕೆಲಸವನ್ನು ಮಾಡಬೇಡ' ಎಂಬ ಪ್ರತಿಷೇಧದ ಅರ್ಥವನ್ನೂ ಕೊಡುತ್ತವೆ.

ಉದಾಹರಣೆ.

ಹೊಲದಲ್ಲಿ ಹೋಗುವಾಗ ಮುಳ್ಳು ತುಳಿದೀಯೆ.
(ಮುಳ್ಳು ತುಳಿಯುವ ಸಂಭವವುಂಟು; ಆದರೆ ತುಳಿಯಬೇಡ—ಎಂದು ಅರ್ಥ.)
ಪರೀಕ್ಷೆಗೆ ಹೋಗುವ ಸಡಗರದಲ್ಲಿ ಲೇಖನಿಗಳನ್ನೇ ಮರೆತು ಹೋದೀರಿ.

೨೭. 'ತಿಳಿಯಬಹುದು, ಮಾಡಬಹುದು' ಮೊದಲಾದ ಸಂಯುಕ್ತ ಕ್ರಿಯಾಪದಗಳು ಸಂಭಾವನಾರ್ಥದಲ್ಲಿ ಬಳಕೆಯಲ್ಲಿವೆ. ಅವುಗಳ ವಿಷಯವನ್ನು ಬೇರೊಂದು ಅಧ್ಯಾಯದಲ್ಲಿ ಹೇಳಲಾಗುತ್ತದೆ.

## ಹದಿಮೂರನೆಯ ಅಧ್ಯಾಯ

### ಪೂರ್ಣ ಕ್ರಿಯಾಪದ : ಕ್ರಿಯಾರ್ಥಕಾವ್ಯಯಗಳು

೧. ಈ ಮನೆಗೆ ಕಿಟಕಿಗಳೇ ಇಲ್ಲ ; ತೆಗ್ಗಾದ ಒಂದು ಬಾಗಿಲುಮಾತ್ರ ಉಂಟು.

ಎಂದಾದರೂ ಒಂದು ದಿನ ತಾಜ್‌ಮಹಲನ್ನು ನೋಡಬೇಕೆಂಬ ಆಸೆ ನನಗೆ ಉಂಟು.

ಯಜಮಾನರು ಮನೆಯಲ್ಲಿ ಇಲ್ಲ.

ಮೇಲಿನ ವಾಕ್ಯಗಳಲ್ಲಿ, 'ಇರುತ್ತದೆ, ಇರವು, ಇರರು'—ಈ ಬಗೆಯ ಪೂರ್ಣಕ್ರಿಯಾಪದಗಳೇ ಇಲ್ಲ. ಅವಕ್ಕೆ ಬದಲಾಗಿ 'ಉಂಟು, ಇಲ್ಲ' ಎಂಬ ಪದಗಳು ಬಂದು ಪೂರ್ಣಕ್ರಿಯಾಪದದ ಅರ್ಥವನ್ನು ಕೊಡುತ್ತವೆ. ಈ ಪದಗಳು ಲಿಂಗ, ವಚನ ಮೊದಲಾದುವುಗಳಿಗೆ ಅನುಸಾರವಾಗಿ ರೂಪದಲ್ಲಿ ಬದಲಾವಣೆಯನ್ನು ಹೊಂದಿಲ್ಲ.

ಹೀಗೆ, ರೂಪಭೇದ ಹೊಂದದೆ ಪೂರ್ಣಕ್ರಿಯಾಪದದ ಅರ್ಥವನ್ನು ಕೊಡುವ ಪದಕ್ಕೆ **ಕ್ರಿಯಾರ್ಥಕಾವ್ಯಯವೆಂದು** ಹೆಸರು.

೨. ಉಂಟು, ಇಲ್ಲ, ಹೌದು, ಅಲ್ಲ, ಬೇಕು, ಬೇಡ, ಸಾಕು ಮೊದಲಾದುವು ಕನ್ನಡದಲ್ಲಿ ಬಳಕೆಯಲ್ಲಿರುವ ಕ್ರಿಯಾರ್ಥಕಾವ್ಯಯಗಳು. ಇವುಗಳ ಪ್ರಯೋಗವನ್ನು ಕೆಲವು ಉದಾಹರಣೆಗಳ ಮೂಲಕ ಕೆಳಗೆ ಸೂಚಿಸಿದೆ.

೩. **ಉಂಟು, ಇಲ್ಲ :**

ಅವನಿಗೆ ಹಣವುಂಟು, ಗುಣವಿಲ್ಲ.
ತುಂಬಿದೀ ಊರಲ್ಲಿ ಮನೆ ಇವಳಿಗಿಲ್ಲ.
ತುಂಬಿದೀ ಜನರಲ್ಲಿ ನೆರೆ ಇವಳಿಗಿಲ್ಲ.

೪. **ಹೌದು, ಅಲ್ಲ :**

'ನೀನು ರಾಮಣ್ಣನವರ ಮಗನಲ್ಲವೆ?' 'ಹೌದು'

ಅವನು ಯಾವುದಕ್ಕೂ 'ಹೌದು' ಎನ್ನುವುದಿಲ್ಲ, 'ಅಲ್ಲ' ಎನ್ನುವುದಿಲ್ಲ.

ಇದು ಕಪ್ಪೆಯಚಿಪ್ಪು ; ಬೆಳ್ಳಿಯಲ್ಲ.

ಕೆಲವರು 'ಹೌದು' ಎಂಬುದನ್ನು 'ಅಹುದು' ಎಂಬ ರೂಪದಲ್ಲಿ ಉಪಯೋಗಿಸುತ್ತಾರೆ.

ಉದಾಹರಣೆ.

'ನಿಮ್ಮ ಒಂಟೆಯ ಬಲಗಾಲು ಕುಂಟಲ್ಲವೆ? ಎಡಗಣ್ಣು ಕುರುಡಲ್ಲವೆ?'
'ಅಹುದು, ಎರಡೂ ದಿಟ.'

೫. **ಬೇಕು, ಬೇಡ, ಸಾಕು :**

ಉದಾಹರಣೆ.

ಮಾವಿನ ಹಣ್ಣು ಬೇಕೇ ಮಾವಿನ ಹಣ್ಣು (ಬೇಕು+ಏ)
ಅವನಿಗೆ ಬುದ್ಧಿ ಬರುವುದಕ್ಕೆ ಇನ್ನೂ ಬಹುಕಾಲ ಬೇಕು.
ಹರಟೆಯೊಂದಿದ್ದರೆ ಅವನಿಗೆ ಊಟ ಬೇಡ, ನಿದ್ದೆ ಬೇಡ.
ಈ ಕತ್ತಲೆಯಲ್ಲಿ ಯಾರ ಮನೆಗೆ ಹೋಗುವುದೂ ಬೇಡ.
ಮಹಾರಾಯಾ, ನಿನ್ನ ಗಾಡಿಯ ಸಹವಾಸ ಸಾಕು.
ನನಗೆ ಈ ಉಪಚಾರ ಸಾಕು ; ಇನ್ನು ವಿಶ್ರಾಂತಿ ಬೇಕು.

ಮಧ್ಯಮಪುರುಷ ಬಹುವಚನದ ಅರ್ಥವನ್ನು ಕೊಡುವಾಗ, 'ಬೇಡ' ಎಂಬುದಕ್ಕೆ – ಇ ಎಂಬ ಪ್ರತ್ಯಯ ಸೇರುವುದೂ ಉಂಟು.

ಉದಾಹರಣೆ.

'ನಿಮಗೆ ಇನ್ನೊಂದು ಚಿರೋಟಿಯನ್ನು ಬಡಿಸಲೇ ?' 'ಬೇಡಿ, ಬೇಡಿ.'

೬. ಈ ಕ್ರಿಯಾರ್ಥಕಾವ್ಯಯಗಳ ಮುಂದೆ 'ಆಗು' ಧಾತುವಿನ ರೂಪಗಳು ಸೇರುವುದುಂಟು.

ಉದಾಹರಣೆ.

ಅವನ ಮಾತನ್ನು ಕೇಳಿ ಕೇಳಿ ನನಗೆ ತಲೆನೋವು ಉಂಟಾಯಿತು. (ಉಂಟು+ಆಯಿತು)
ನನ್ನೊಬ್ಬನ ಮಟ್ಟಿಗೆ ಅವನಲ್ಲಿ ಔದಾರ್ಯ ಇಲ್ಲವಾಯಿತು. (ಇಲ್ಲ + ಆಯಿತು)
ಅವರಿಗೆ ಬೇಕಾಗಲಿ, ಬೇಡವಾಗಲಿ, ನನ್ನ ಕೆಲಸವನ್ನೇನೋ ನಾನು ಮಾಡಿಬಿಡುತ್ತೇನೆ.
ದಿವಾಕರನು ಸುತ್ತಿ ಸುತ್ತಿ ಸಾಕಾದನು.

## ಹದಿನಾಲ್ಕನೆಯ ಅಧ್ಯಾಯ

### ಸಾಪೇಕ್ಷ ಕ್ರಿಯಾರೂಪಗಳು

೧. ತಮ್ಮ ಅರ್ಥವನ್ನು ಮುಗಿಸುವುದಕ್ಕೆ ಬೇರೊಂದು ಕ್ರಿಯಾಪದದ ಸಹಾಯವನ್ನು ಅಪೇಕ್ಷಿಸತಕ್ಕ ಕ್ರಿಯಾರೂಪಗಳು **ಸಾಪೇಕ್ಷಕ್ರಿಯಾರೂಪಗಳೆಂದು** ನಾವು ಹಿಂದೆ ನೋಡಿದ್ದೇವೆ. ಅಲ್ಲದೆ, ಇವಕ್ಕೆ ಪುರುಷ, ಲಿಂಗ, ವಚನಗಳಲ್ಲಿ ರೂಪಭೇದವಿಲ್ಲವೆಂದೂ, ಬೇರೆಬೇರೆ ಕಾಲಗಳನ್ನೂ ಅರ್ಥಗಳನ್ನೂ ತಿಳಿಸುವುದಕ್ಕೆ ಬೇರೆಬೇರೆ ರೂಪಗಳುಂಟೆಂದೂ ತಿಳಿದುಕೊಂಡಿದ್ದೇವೆ. ಈಗ ಈ ರೂಪಗಳಲ್ಲಿ ಮುಖ್ಯವಾದುವನ್ನು ಗಮನಿಸೋಣ.

### ೧. ವರ್ತಮಾನನ್ಯೂನ

೨. (೧) ಮಗು ಕುಣಿಯುತ್ತಾ ಬೀದಿಗೆ ಹೋಯಿತು.
(೨) ಅವನು ದೇವರ ನಾಮವನ್ನು ಹಾಡುತ್ತ ಭಿಕ್ಷೆ ಬೇಡುತ್ತಾನೆ.
(೩) ನಾವು ಅಳುತ್ತಾ ಬಂದೆವು, ನಗುತ್ತಾ ಹೋಗುವೆವು.
(೪) ನೀನು ಮಂತ್ರವನ್ನು ಜಪಿಸುತ್ತ ಗುಹೆಯೊಳಕ್ಕೆ ನುಗ್ಗು.

ಈ ವಾಕ್ಯಗಳಲ್ಲಿ ಮೊದಲನೆಯದನ್ನು ನೋಡಿ: ಅಲ್ಲಿ 'ಕುಣಿಯುತ್ತಾ' ಎಂಬ ಸಾಪೇಕ್ಷಕ್ರಿಯಾರೂಪವೂ 'ಹೋಯಿತು' ಎಂಬ ಪೂರ್ಣಕ್ರಿಯಾಪದವೂ ಇವೆ. 'ಹೋಯಿತು' ಎನ್ನುವುದು ಭೂತಕಾಲವನ್ನು ಹೇಳುತ್ತದೆ; ಹೋಗುವ ಕಾರ್ಯ ನಡೆದ ಕಾಲದಲ್ಲೇ ಕುಣಿಯುವ ಕಾರ್ಯವೂ ನಡೆಯಿತೆಂಬುದನ್ನು 'ಕುಣಿಯುತ್ತಾ' ಎಂಬ ರೂಪವು ತೋರಿಸುತ್ತದೆ.

ಎರಡನೆಯ ವಾಕ್ಯದಲ್ಲಿ 'ಬೇಡುತ್ತಾನೆ' ಎಂಬ ಪೂರ್ಣಕ್ರಿಯಾಪದವು ವರ್ತಮಾನ ಕಾಲದಲ್ಲಿದೆ; ಬೇಡುವ ಕಾರ್ಯ ನಡೆಯುವಾಗಲೇ ಹಾಡುವ ಕಾರ್ಯವೂ ನಡೆಯುವುದನ್ನು 'ಹಾಡುತ್ತ' ಎಂಬ ಸಾಪೇಕ್ಷ ಕ್ರಿಯಾರೂಪವು ತೋರಿಸುತ್ತದೆ.

ಮೂರನೆಯ ವಾಕ್ಯದಲ್ಲಿ, 'ಬಂದೆವು, ಹೋಗುವೆವು' ಎಂಬ ಎರಡು ಪೂರ್ಣಕ್ರಿಯಾಪದಗಳೂ ಕ್ರಮವಾಗಿ ಭೂತಕಾಲ ಭವಿಷ್ಯತ್ಕಾಲಗಳಲ್ಲಿದ್ದರೂ, ಅಳುವ ಕಾರ್ಯವೂ ಬರುವ ಕಾರ್ಯವೂ ಒಂದು ಕಾಲದಲ್ಲಿ ನಡೆಯುತ್ತವೆ, ಹೋಗುವ ಕಾರ್ಯವೂ ನಗುವ ಕಾರ್ಯವೂ ಒಂದು ಕಾಲದಲ್ಲಿ ನಡೆಯುತ್ತವೆ ಎಂಬುದನ್ನು 'ಅಳುತ್ತಾ,' 'ಹೋಗುತ್ತಾ' ಎಂಬ ರೂಪಗಳು ತೋರಿಸುತ್ತವೆ.

ನಾಲ್ಕನೆಯ ವಾಕ್ಯದಲ್ಲಿ, 'ನುಗ್ಗು' ಎಂಬುದು ವಿಧ್ಯರ್ಥದರೂಪ; ಅದು ನಡೆಯುವಾಗ ಜಪಿಸುವ ಕಾರ್ಯವೂ ನಡೆಯಬೇಕೆಂಬುದನ್ನು 'ಜಪಿಸು' ಎಂಬ ರೂಪ ತೋರಿಸುತ್ತದೆ.

ಹೀಗೆ, ಅರ್ಥಪೂರ್ತಿಗಾಗಿ ಬಂದಿರುವ ಕ್ರಿಯಾಪದಗಳ ಕಾರ್ಯ ಯಾವಾಗ ನಡೆಯುವುದೋ ಆಗಲೇ ಸಾಪೇಕ್ಷ ಕ್ರಿಯಾರೂಪದ ಕಾರ್ಯವೂ ನಡೆಯುವುದೆಂಬುದನ್ನು 'ಕುಣಿಯುತ್ತಾ, ಹಾಡುತ್ತಾ' ಮೊದಲಾದ ರೂಪಗಳು ತೋರಿಸುತ್ತವೆ. ಈ ರೂಪಗಳಿಗೆ ವರ್ತಮಾನನ್ಯೂನ ರೂಪಗಳೆಂದು ಹೆಸರು.

೩. ಈಗ ಈ ವರ್ತಮಾನನ್ಯೂನರೂಪಗಳನ್ನು ಬಿಡಿಸಿ ನೋಡಿ: ಕುಣಿಯುತ್ತಾ=ಕುಣಿ+ಉತ್ತಾ, ಹಾಡುತ್ತ=ಹಾಡು+ಉತ್ತ, ಇತ್ಯಾದಿ. ಧಾತುವಿಗೆ –**ಉತ್ತಾ** ಅಥವಾ –**ಉತ್ತ** ಎಂಬ ಪ್ರತ್ಯಯವನ್ನು ಸೇರಿಸಿದರೆ ವರ್ತಮಾನನ್ಯೂನ ರೂಪಗಳಾಗುತ್ತವೆ.

## ೨. ಭೂತನ್ಯೂನ

೪. (೧) ಅತ್ತು ಅತ್ತು ಅವಳ ಕಣ್ಣು ಕೆಂಪಗಾಯಿತು.

(೨) ಈ ಸುದ್ದಿಯನ್ನು ಕೇಳಿ ನಮ್ಮ ತಂದೆ ಕೊರಗುತ್ತಾರೆ.

(೩) ಅಲ್ಲಿ ಅಕಾರವನ್ನು ಹೊಡೆದು ಹಕಾರವನ್ನು ಸೇರಿಸು.

ಮೇಲಿನ ವಾಕ್ಯಗಳಲ್ಲಿ ಬಂದಿರುವ 'ಅತ್ತು, ಕೇಳಿ, ಹೊಡೆದು' ಎಂಬ ಕ್ರಿಯಾರೂಪಗಳನ್ನು ನೋಡಿ. ಕಣ್ಣು ಕೆಂಪಗಾಗುವುದಕ್ಕೆ ಮುಂಚೆ ಅಳುವ ಕಾರ್ಯ ನಡೆಯಿತೆಂದೂ, ತಂದೆ ಕೊರಗುವುದಕ್ಕೆ ಮುಂಚೆ ಸುದ್ದಿಯನ್ನು ಕೇಳುವ ಕಾರ್ಯ ನಡೆಯುವುದೆಂದೂ, ಸೇರಿಸು ಎಂಬ ವಿಧಿಯನ್ನು ಅನುಸರಿಸುವುದಕ್ಕೆ ಮುಂಚೆ ಅಕ್ಷರವನ್ನು ಹೊಡೆಯುವ ಕಾರ್ಯ ನಡೆಯಬೇಕೆಂದೂ 'ಅತ್ತು, ಕೇಳಿ, ಹೊಡೆದು' ಎಂಬ ರೂಪಗಳು ತೋರಿಸುತ್ತವೆ.

ಹೀಗೆ, ಅರ್ಥಪೂರ್ತಿಗಾಗಿ ಬಂದಿರುವ ಕ್ರಿಯಾಪದದ ಕಾರ್ಯನಡೆಯುವುದಕ್ಕೆ ಮುಂಚೆ ಸಾಪೇಕ್ಷ ಕ್ರಿಯಾಪದದ ಕಾರ್ಯ ನಡೆದಿರುತ್ತದೆಂಬುದನ್ನು ತೋರಿಸುವ ರೂಪಗಳಿಗೆ ಭೂತನ್ಯೂನ ರೂಪಗಳೆಂದು ಹೆಸರು.

೫. 'ಹೊಡೆದು, ಅತ್ತು, ಕೇಳಿ' ಎಂಬ ರೂಪಗಳನ್ನು ಬಿಡಿಸಿ ನೋಡಿ: ಹೊಡೆ+ದು, ಅಳು+ದು, ಕೇಳು+ಇ. ಮೊದಲ ಎರಡು ಕಡೆಗಳಲ್ಲಿ –ದು ಎಂಬ ಪ್ರತ್ಯಯವೂ, ಕೊನೆಯದರಲ್ಲಿ –ಇ ಎಂಬುದೂ ಬಂದಿವೆ. ಮೇಲಿನ ರೂಪಗಳನ್ನು ಸಂಭಾವನಾರ್ಥದ 'ಹೊಡೆದಾನು, ಅತ್ತಾನು, ಕೇಳಿಯಾನು' ಎಂಬ ರೂಪಗಳೊಂದಿಗೆ ಹೋಲಿಸಿ. ಅಲ್ಲಿ ಯಾವ ಧಾತುಗಳಿಗೆ –ದ– ಎಂಬ ನಡುವಣ ಪ್ರತ್ಯಯ ಸೇರುತ್ತದೋ ಇಲ್ಲಿ ಆ ಧಾತುಗಳಿಗೆಲ್ಲ ಭೂತನ್ಯೂನ ಪ್ರತ್ಯಯವಾಗಿ –ದು ಎಂಬುದು ಸೇರುತ್ತದೆ;

ಅಲ್ಲಿ ಉಂಟಾಗುವ ವ್ಯತ್ಯಾಸಗಳೇ ಇಲ್ಲೂ ಉಂಟಾಗುತ್ತವೆ. ಮಿಕ್ಕ ಧಾತು ಗಳಿಗೆಲ್ಲಾ ಅಲ್ಲಿ –ಇ– ಸೇರುವಂತೆ ಇಲ್ಲಿಯೂ ಭೂತನ್ಯೂನ ಪ್ರತ್ಯಯ ವಾಗಿ –ಇ– ಎಂಬುದು ಸೇರುತ್ತದೆ.

೬. ಇನ್ನೂ ಒಂದೆರಡು ಉದಾಹರಣೆಗಳನ್ನು ನೋಡಿ:

ನನಗೆ ನಿಂತು ನಿಂತು ಸಾಕಾಯಿತು. (ನಿಲ್ಲು+ದ.)
ಈ ಪಾಠವನ್ನು ಚೆನ್ನಾಗಿ ಕಲಿತು ನಾಳೆ ನನಗೆ ಒಪ್ಪಿಸು. (ಕಲ+ದು)
ಹೂವುಗಳನ್ನು ಬಿಡಿಸಿ ತರುತ್ತೇನೆ. (ಬಿಡಿಸು+ಇ)

ಹೀಗೆಯೇ—ಸೋಲು—ಸೋತು, ಕೊಯ್–ಕೊಯ್ದು, ಸಾ–ಸತ್ತು, ಬದುಕು–ಬದುಕಿ, ಇತ್ಯಾದಿ.

## ೩. ನಿಷೇಧನ್ಯೂನ

೭. (೧) ಅವನು ಪಾಠಶಾಲೆಗೆ ಹೋಗದೆ ನಿಂತನು.
(೨) ಕೊಳಲಿನ ನಾದವನ್ನು ಹಸುಗಳು ಹುಲ್ಲನ್ನು ಕೂಡ ಮೇಯದೆ ಆಲಿಸುತ್ತವೆ.

ಮೊದಲಿನ ವಾಕ್ಯದಲ್ಲಿ ಬಂದಿರುವ 'ಹೋಗದೆ' ಎಂಬ ರೂಪ ವನ್ನು ನೋಡಿ. ಹೋಗುವ ಕಾರ್ಯ ನಡೆಯಲಿಲ್ಲವೆಂದು ಕ್ರಿಯೆಯ ನಿಷೇಧ ವನ್ನು ಅದು ತೋರಿಸುತ್ತದೆ. ಆದರೆ ಅರ್ಥವಿನ್ನೂ ಮುಗಿದಿಲ್ಲ; ಅದು ಮುಗಿಯಬೇಕಾದರೆ 'ನಿಂತನು' ಎಂಬ ಬೇರೊಂದು ಕ್ರಿಯಾಪದದ ಸಹಾಯಬೇಕು. 'ಮೇಯದೆ' ಎಂಬುದರ ವಿಷಯವೂ ಹೀಗೆಯೇ

ಹೀಗೆ, ಒಂದು ಕ್ರಿಯೆಯ ನಿಷೇಧವನ್ನು ತಿಳಿಸಿ, ಅರ್ಥಪೂರ್ತಿಗಾಗಿ ಬೇರೊಂದು ಕ್ರಿಯೆಯ ಸಹಾಯವನ್ನು ಅಪೇಕ್ಷಿಸುವ ಕ್ರಿಯಾರೂಪಕ್ಕೆ **ನಿಷೇಧನ್ಯೂನ** ರೂಪವೆಂದು ಹೆಸರು.

೮. ಹೋಗದೆ=ಹೋಗು+ಅದೆ; ಮೇಯದೆ=ಮೇ+ಅದೆ. ಧಾತುವಿಗೆ–ಅದೇ ಎಂಬ ಪ್ರತ್ಯಯ ಸೇರಿದರೆ **ನಿಷೇಧನ್ಯೂನ** ರೂಪವಾಗು ತ್ತದೆ.

ಉದಾಹರಣೆ.

ನನಗೆ ತಿಳಿಸದೆ ನಳಮಹಾರಾಜನು ಎಲ್ಲಿಗೆ ಹೋದನು? (ತಿಳಿಸು+ಅದೆ)
ಇದೊಂದು ಬಾರಿಗೆ ಶಿಶುಪಾಲನನ್ನು ಕೊಲ್ಲದೆ ಉಳಿಸು. (ಕೊಲ್ಲು+ಅದೆ)

೯. ತರು, ಬರು ಧಾತುಗಳಿಗೆ ನಿಷೇಧನ್ಯೂನದಲ್ಲಿ ತಾರದೆ, ಬಾರದೆ ಎಂಬ ರೂಪಗಳು ಬರುತ್ತವೆ.

ಉದಾಹರಣೆ,

ವಿರಾಟನೊಬ್ಬನು ಏಕೆ ಈ ಯಾಗಕ್ಕೆ ಬಾರದೆ ನಿಂತನು?

೧೦. ಕೆಲವರು ತರದೆ, ಬರದೆ ಎಂಬ ರೂಪಗಳನ್ನು ಉಪಯೋಗಿಸುವುದೂ ಉಂಟು.

ಉದಾಹರಣೆ.

ಸಂಜೆಗೆ ಊಟಕ್ಕೆ ಬರದೆ ನಿಂತೀಯೆ.

### ೪. ಪಕ್ಷಾರ್ಥ

೧೧. (೧) ನಿನ್ನ ಮಾತನ್ನು ಕೇಳಿದರೆ ಅವರೆಲ್ಲರೂ ನಗುತ್ತಾರೆ.
(೨) ಧರ್ಮಕ್ಕೆ ಎಮ್ಮೆ ಕೊಟ್ಟರೆ, ಹಲ್ಲ ಹಿಡಿದು ನೋಡಿದನು.
(೩) ಸಕ್ಕರೆ ತಿಂದು ನೀರು ಕುಡಿದರೆ ಬಾಯಿ ಸಪ್ಪೆಯಾಗುವುದು.

ಮೇಲೆ ಬಂದಿರುವ 'ಕೇಳಿದರೆ' ಎಂಬ ರೂಪವನ್ನು ನೋಡಿ. ಈ ಕೇಳುವ ಕಾರ್ಯ ನಡೆದ ಪಕ್ಷದಲ್ಲಿ ನಗುವ ಕಾರ್ಯವೂ ನಡೆಯುತ್ತದೆ ; ಇಲ್ಲವಾದರೆ ಇಲ್ಲ. ನಗುವ ಕಾರ್ಯ ನಡೆಯುವುದಕ್ಕೆ ಆವಶ್ಯಕವಾದ ಪರಿಸ್ಥಿತಿಯನ್ನು 'ಕೇಳಿದರೆ' ಎಂಬ ರೂಪವು ತೋರಿಸುತ್ತದೆ. ಇದರಂತೆಯೇ 'ಕೊಟ್ಟರೆ, ಕುಡಿದರೆ' ಎಂಬ ರೂಪಗಳು.

ಇಂಥ ರೂಪಗಳಿಗೆ ಪಕ್ಷಾರ್ಥ ರೂಪಗಳೆಂದು ಹೆಸರು.

೧೨. ಕೇಳಿದರೆ=ಕೇಳು+ದ+ಅರೆ, ಕೊಟ್ಟರೆ=ಕೊಡು+ದ+ಅರೆ, ಕುಡಿದರೆ=ಕುಡಿ+ದ+ಅರೆ. ಧಾತುವಿಗೆ ಮೊದಲು -ದ- ಪ್ರತ್ಯಯವೂ ಬಳಿಕ -ಅರೆ ಪ್ರತ್ಯಯವೂ ಸೇರಿ ಪಕ್ಷಾರ್ಥದ ರೂಪಗಳಾಗುತ್ತವೆ. -ದ- ಎಂಬ ಪ್ರತ್ಯಯ ಸೇರುವಾಗ ಭೂತಕಾಲ ಪ್ರತ್ಯಯದ ಹಿಂದೆ ಉಂಟಾಗುವ ವ್ಯತ್ಯಾಸಗಳೇ ಉಂಟಾಗುತ್ತವೆ?

ಉದಾಹರಣೆ.

ಅತ್ತರೆ ಅಳಲವ್ವ, ಈ ಕೂಸು ನನಗಿರಲ.
ಬೆಂಕಿಯನ್ನು ಮುಟ್ಟಿದರೆ ಕೈ ಸುಡುತ್ತದೆ.
ಹಡಗು ಮುಳುಗಿದರೆ ನಮ್ಮ ಗತಿಯೇನು ?

ಹೀಗೆಯೇ— ಹೋಗು-ಹೋದರೆ, ಬೇ-ಬೆಂದರೆ, ನಿಲ್ಲು-ನಿಂತರೆ, ಇತ್ಯಾದಿ.

### ೫. ಭಾವಾರ್ಥ

೧೩. (೧) ಆ ಕೊಕ್ಕರೆ ಮೀನುಗಳನ್ನು ಹಿಡಿಯಲು ಒಂದು ಉಪಾಯವನ್ನು ಆಲೋಚಿಸಿತು.
(೨) ನಾಟಕವನ್ನು ನೋಡಲು ದೂರದ ಹಳ್ಳಿಗಳಿಂದ ಜನರು ಬಂದರು.

ಮೊದಲನೆಯ ವಾಕ್ಯದಲ್ಲಿ, ಆಲೋಚಿಸುವ ಕಾರ್ಯಕ್ಕೆ ಮೀನನ್ನು ಹಿಡಿಯುವುದೇ ಪ್ರಯೋಜನ. ಈ ಪ್ರಯೋಜನವನ್ನು 'ಹಿಡಿಯಲು' ಎಂಬ

ರೂಪವು ತೋರಿಸುತ್ತದೆ. ಎರಡನೆಯ ವಾಕ್ಯದಲ್ಲಿ 'ನೋಡಲು' ಎಂಬ ರೂಪವು 'ಬಂದರು' ಎಂಬ ಕ್ರಿಯೆಯ ಪ್ರಯೋಜನವನ್ನು ತೋರಿಸುತ್ತದೆ.

(೩) ಮುಖವನ್ನು ತೊಳೆಯಲಿಕ್ಕೆ ಅವನು ಹಳ್ಳದ ದಂಡೆಗೆ ಹೋಗುತ್ತಾನೆ.

ಇಲ್ಲಿ 'ತೊಳೆಯಲಿಕ್ಕೆ' ಎಂಬ ರೂಪವು 'ಹೋಗುತ್ತಾನೆ' ಎಂಬ ಕ್ರಿಯೆಯ ಪ್ರಯೋಜನವನ್ನು ತೋರಿಸುತ್ತದೆ.

(೪) ಪರೀಕ್ಷೆ ನಾಳೆಯೆನ್ನುವಾಗ ಅವನು ಪಾಠಗಳನ್ನು ಓದ ತೊಡಗಿದನು.

ಇಲ್ಲಿ 'ಓದ' ಎಂಬ ರೂಪವು 'ತೊಡಗಿದನು' ಎಂಬ ಕ್ರಿಯೆಯ ಪ್ರಯೋಜನವನ್ನು ಹೇಳುತ್ತದೆ.

೧೪. ಈಗ ಈ ರೂಪಗಳನ್ನು ಬಿಡಿಸಿ ನೋಡಿ ;

ಹಿಡಿಯಲು = ಹಿಡಿ + ಅಲು, ನೋಡಲು = ನೋಡು + ಅಲು.
ತೊಳೆಯಲಿಕ್ಕೆ = ತೊಳೆ + ಅಲಿಕ್ಕೆ.
ಓದ = ಓದು + ಅ.

೧೫. ಎರಡು ಕ್ರಿಯೆಗಳಲ್ಲಿ ಒಂದಕ್ಕಾಗಿ ಮತ್ತೊಂದು ನಡೆಯಿತೆಂದು ಹೇಳುವಾಗ ಮೊದಲನೆಯ ಕ್ರಿಯೆಯನ್ನು (ಎಂದರೆ ಪ್ರಯೋಜನವಾಗಿರತಕ್ಕ ಕ್ರಿಯೆಯನ್ನು) ತಿಳಿಸುವ ಧಾತುವಿಗೆ –ಅ, –ಅಲು, –ಅಲಿಕ್ಕೆ ಎಂಬ ಪ್ರತ್ಯಯಗಳು ಸೇರುವುವು.

೧೬. –ಅ ಎಂಬುದು ಸೇರಿದಾಗ 'ಓದತೊಡಗಿದನು' ಎಂಬ ಕಡೆಯಲ್ಲಿರುವಂತೆ ಎರಡು ಕ್ರಿಯಾರೂಪಗಳೂ ಜೊತೆಗೂಡಿ ಇರಬೇಕಾಗುತ್ತದೆ.

೧೭. –ಅಲು, –ಅಲಿಕ್ಕೆ, –ಅ ಎಂಬ ಪ್ರತ್ಯಯಗಳಿಗೆ **ಭಾವಾರ್ಥ ಪ್ರತ್ಯಯಗಳೆಂದು** ಹೆಸರು.

೧೮. ಪ್ರಯೋಜನರೂಪದ ಕ್ರಿಯೆಯನ್ನು ಇನ್ನೂ ಬೇರೆ ಪ್ರತ್ಯಯಗಳ ಮೂಲಕ ತೋರಿಸುವುದುಂಟು. ಕೆಳಗಿನ ಉದಾಹರಣೆಗಳನ್ನು ನೋಡಿ:

ನಾಟಕವನ್ನು ನೋಡಲು ಜನರು ಬಂದರು.
ನಾಟಕವನ್ನು ನೋಡಲಿಕ್ಕೆ ಜನರು ಬಂದರು.
ನಾಟಕವನ್ನು ಜನರು ನೋಡ ಬಂದರು.

(ಈ ಮೂರು ರೂಪಗಳನ್ನು ನಾವು ಆಗಲೇ ನೋಡಿದ್ದೇವೆ.)
ನಾಟಕವನ್ನು ನೋಡುವುದಕ್ಕೆ ಜನರು ಬಂದರು
ನಾಟಕವನ್ನು ನೋಡುವುದಕ್ಕಾಗಿ ಜನರು ಬಂದರು.
ನಾಟಕವನ್ನು ನೋಡುವುದಕ್ಕೋಸ್ಕರ ಜನರು ಬಂದರು.
ನಾಟಕವನ್ನು ನೋಡಲೆಂದು ಜನರು ಬಂದರು.

ನಾಟಕವನ್ನು ನೋಡಲಿಕ್ಕೆಂದು ಜನರು ಬಂದರು.
ನಾಟಕವನ್ನು ನೋಡಬೇಕೆಂದು ಜನರು ಬಂದರು, ಇತ್ಯಾದಿ.

## ೬. ಭಿನ್ನಕರ್ತೃಕಗಳು

೧೯. ಕೆಳಗಿನ ವಾಕ್ಯಗಳನ್ನು ಹೋಲಿಸಿ:

(೧) ರಂಗಯ್ಯನು ಕಾಯಿಪಲ್ಯವನ್ನು ತರಲು ಸಂತೆಗೆ ಹೋದನು.
(೨) ರಂಗಯ್ಯನು ಕಾಯಿಪಲ್ಯವನ್ನು ತರಲು, ಅವನ ತಂಗಿ ಅಡಿಗೆ ಮಾಡಿದಳು

ಮೊದಲಿನ ವಾಕ್ಯದಲ್ಲಿ 'ತರಲು,' 'ಹೋದನು' ಎಂಬ ಎರಡು ಕ್ರಿಯೆಗಳಿಗೂ 'ರಂಗಯ್ಯನು' ಎಂಬುದು ಒಂದೇ ಕರ್ತೃಪದ; ಎರಡು ಕೆಲಸಗಳನ್ನು ಮಾಡಿದವನೂ ಅವನೊಬ್ಬನೇ. ಎರಡನೆಯ ವಾಕ್ಯದಲ್ಲಿ 'ತರಲು' ಎಂಬುದಕ್ಕೆ ಮಾತ್ರ 'ರಂಗಯ್ಯನು' ಕರ್ತೃ; 'ಮಾಡಿದಳು' ಎಂಬ ಇನ್ನೊಂದು ಕ್ರಿಯಾಪದಕ್ಕೆ ಕರ್ತೃ 'ಅವನ ತಂಗಿ.' ಹೀಗೆ ಸಾಪೇಕ್ಷ ಕ್ರಿಯಾರೂಪಕ್ಕೂ ಅದರ ಅರ್ಥವನ್ನು ಪೂರ್ತಿಗೊಳಿಸುವ ಕ್ರಿಯಾಪದಕ್ಕೂ ಕರ್ತೃಪದಗಳು ಬೇರೆ ಬೇರೆ ಆಗಿರುವುದೂ ಉಂಟು.

೨೦. ಒಂದು ಕ್ರಿಯೆ ನಡೆದ ಕೂಡಲೇ ಮತ್ತೊಂದು ನಡೆಯಿತು; ಒಂದು ಕ್ರಿಯೆ ನಡೆದದ್ದರ ಪರಿಣಾಮವಾಗಿ ಮತ್ತೊಂದು ನಡೆಯಿತು—ಈ ಮೊದಲಾದ ಅಂಶಗಳನ್ನು ತಿಳಿಸುವಾಗ ಸಾಪೇಕ್ಷ ಕ್ರಿಯಾರೂಪವೂ ಅದರ ಅರ್ಥಪೂರ್ತಿಗಾಗಿ ಬರುವ ಕ್ರಿಯಾಪದವೂ ಬೇರೆ ಬೇರೆ ಕರ್ತೃಗಳನ್ನು ಹೊಂದುತ್ತವೆ.

ಉದಾಹರಣೆ.

ಉಪಾಧ್ಯಾಯರು ಬರುತ್ತಲೇ ಶಿಷ್ಯರೂ ಎದ್ದು ನಿಲ್ಲುವರು.
ದ್ರೋಣಿ ದಡವನ್ನು ಮುಟ್ಟುವುದೂ ಅವನು ಕೆಳಕ್ಕೆ ನೆಗೆದನು.
ನೂರು ಆಶೀರ್ವಾದಗಳು ಫಲಿಸಿ, ಆ ದೊರೆಗೆ ಒಬ್ಬ ಕುಮಾರನು ಹುಟ್ಟಿದನು.
ಆ ಹೆಣ್ಣುಮಗಳು ಹಾಗೆ ಭಾಷಣ ಮಾಡಲು, ಸಭಿಕರೆಲ್ಲರೂ ಆವೇಶದಿಂದ ಎದ್ದು ನಿಂತರು.
ಕೆರೆ ತುಂಬಿದರೆ, ಬಿತ್ತದ ಬೆಳೆಯಾಗುತ್ತದೆ.

ಮೇಲೆ, 'ಬರುತ್ತಲೇ,' 'ಮುಟ್ಟುವುದು' ಎಂಬ ಕಡೆಗಳಲ್ಲಿ ಹಿಂದೆ ನೋಡದಿರುವ ರೂಪಗಳು ಬಂದಿರುವುದನ್ನು ಗಮನಿಸಿ.

## ೭. ಸಾಪೇಕ್ಷ ಕ್ರಿಯಾರೂಪಗಳ ಅನ್ವಯ

೨೧. "ಮಗು ಕುಣಿಯುತ್ತಾ ಬೀದಿಗೆ ಹೋಯಿತು."

ಈ ವಾಕ್ಯವನ್ನು ಪರಿಶೀಲಿಸಿ. 'ಕುಣಿಯುತ್ತಾ' ಎಂಬ ಸಾಪೇಕ್ಷ ಕ್ರಿಯಾರೂಪದ ಅರ್ಥವನ್ನು ಪೂರ್ತಿಮಾಡತಕ್ಕ 'ಹೋಯಿತು' ಎಂಬುದು

ಪೂರ್ಣಕ್ರಿಯಾಪದ. ಇದುವರೆಗೆ ನಾವು ನೋಡಿದ ಉದಾಹರಣೆಗಳೆಲ್ಲವೂ ಇಂಥವೇ ಆದಮಾತ್ರಕ್ಕೆ, ಒಂದು ಸಾಪೇಕ್ಷ ಕ್ರಿಯಾರೂಪದ ಅರ್ಥವನ್ನು ಪೂರ್ತಿಮಾಡುವುದಕ್ಕೆ ಪೂರ್ಣ ಕ್ರಿಯಾಪದವೇ ಬರಬೇಕೆಂದು ಭಾವಿಸ ಕೂಡದು. ಕೆಳಗಿನ ಉದಾಹರಣೆಯನ್ನು ನೋಡಿ:

ಬೇಡನು ಆ ಜಿಂಕೆಯನ್ನು ಹುಡುಕುತ್ತಾ ಕೊಳದ ಬಳಿಗೆ ಬಂದು ಅಲ್ಲಿ ಒಬ್ಬ ಋಷಿಯನ್ನು ಕಂಡನು.

ಈ ವಾಕ್ಯದಲ್ಲಿ 'ಹುಡುಕುತ್ತಾ ಎಂಬ ವರ್ತಮಾನನ್ಯೂನದ ಅರ್ಥವನ್ನು ಪೂರ್ತಿಮಾಡುವುದಕ್ಕಾಗಿ 'ಬಂದು' ಎಂಬ ಭೂತನ್ಯೂನವು ಬಂದಿದೆ 'ಹುಡುಕುತ್ತಾ ಬಂದು' ಎಂದ ಕೂಡಲೆ 'ಹುಡುಕುತ್ತಾ' ಎಂಬುದರ ಆಕಾಂಕ್ಷೆ ಮುಗಿಯಿತು. ಇನ್ನು 'ಬಂದು' ಎಂಬುದರ ಆಕಾಂಕ್ಷೆ ಪೂರ್ಣವಾಗುವುದಕ್ಕಾಗಿ 'ಕಂಡನು' ಎಂಬ ಪೂರ್ಣಕ್ರಿಯಾಪದ ಬಂದಿದೆ. ಹೀಗೆ ವಾಕ್ಯದಲ್ಲಿರುವ ಪ್ರತಿಯೊಂದು ಸಾಪೇಕ್ಷ ಕ್ರಿಯಾರೂಪವೂ ನೇರವಾಗಿ ಪೂರ್ಣಕ್ರಿಯಾಪದವನ್ನೇ ಅಪೇಕ್ಷಿಸುವುದಿಲ್ಲ. ಅದರ ಅರ್ಥವನ್ನು ಪೂರ್ತಿಗೊಳಿಸುವುದಕ್ಕೆ ಕ್ರಿಯೆಯನ್ನು ಹೇಳುವ ಬೇರೊಂದು ರೂಪ ಬಂದರೆ ಸಾಕು. ಕೆಳಗಿನ ವಾಕ್ಯವನ್ನು ನೋಡಿ:

ದೊಂಬರ ಆಟವನ್ನು ನೋಡುತ್ತಾ ನಿಂತವನು ಮನೆಗೇ ಹೋಗಲಿಲ್ಲ.

ಇಲ್ಲಿ 'ನೋಡುತ್ತಾ' ಎಂಬ ಸಾಪೇಕ್ಷ ಕ್ರಿಯಾರೂಪವು 'ನಿಂತವನು' ಎಂಬುದರೊಂದಿಗೆ ನೇರವಾಗಿ ಅನ್ವಯಿಸುತ್ತದೆ. ಆದರೆ 'ನಿಂತವನು' ಎಂಬುದು ಕ್ರಿಯಾಪದವಲ್ಲ. ಕ್ರಿಯೆಯನ್ನು ಮಾಡುವವನನ್ನು ತಿಳಿಸುವ ಒಂದು ಬಗೆಯ ನಾಮಪದ.*

ಈಗ, ಈ ವಾಕ್ಯವನ್ನು ನೋಡಿ:

ಬಳಿಕ ಅವರು ದಣಿವನ್ನು ನೋಡದೆ ಎದ್ದು, ಕಲ್ಲು ಮುಳ್ಳು ನಟ್ಟು ಕೊಂಡಿರುವ ಕಾಲುಗಳಿಂದ ಕುಂಟುತ್ತ ಬಿಸಿಲನಲ್ಲಿ ನಡೆದು, ಅಲ್ಲಲ್ಲಿಯೇ ನಿಂತು ನಿಂತು ಹಿಂದಿರುಗಿ ನೋಡುತ್ತ, ಆ ದಿನವೆಲ್ಲ ಊಟವಿಲ್ಲದೆ, ಹೊತ್ತು ಮುಳುಗಿದಮೇಲೆ ಮಠಕ್ಕೆ ಬಂದು ಸೇರಿದರು.

ಈ ವಾಕ್ಯದ ತುಂಬ ಸಾಪೇಕ್ಷ ಕ್ರಿಯಾರೂಪಗಳೇ ಇವೆ. ಅವು ಒಂದನ್ನೊಂದು ಹೇಗೆ ಅನುಸರಿಸಿಕೊಂಡು ಬಂದಿವೆ, ನೋಡಿ. ವಾಕ್ಯದ ಕೊನೆಯಲ್ಲಿ ಮಾತ್ರ ಒಂದು ಪೂರ್ಣ ಕ್ರಿಯಾಪದವಿದೆ.

---

*ಇದಕ್ಕೆ ಕೃದಂತನಾಮವೆಂದು ಹೆಸರು. ಇದರ ವಿಷಯ ಬೇರೊಂದು ಅಧ್ಯಾಯದಲ್ಲಿ ಗೊತ್ತಾಗುತ್ತದೆ.

# ಹದಿನೈದನೆಯ ಅಧ್ಯಾಯ

## ಸಂಯುಕ್ತ ಕ್ರಿಯಾಪದಗಳು

### ೧. ವರ್ತಮಾನಕಾಲದ ರೂಪಗಳು

೧. ಹೊನ್ನಸೆಟ್ಟಿ ಸಂತೆಗೆ ಹೋಗುತ್ತಾನೆ.
ಅಲ್ಲಿ ನೋಡು, ಹೊನ್ನಸೆಟ್ಟಿ ಸಂತೆಗೆ ಹೋಗುತ್ತಿದ್ದಾನೆ.
ಈ ದಿವ ಹೊನ್ನಸೆಟ್ಟಿ ಸಂತೆಗೆ ಹೋಗಿದ್ದಾನೆ.

ಮೇಲೆ ದೊಡ್ಡ ಅಕ್ಷರದಲ್ಲಿ ಕೊಟ್ಟಿರುವ ಮೂರು ರೂಪಗಳನ್ನೂ ಹೋಲಿಸಿ.

'ಹೋಗುತ್ತಾನೆ' ಎಂಬುದು ವರ್ತಮಾನಕಾಲದ ರೂಪವಾದರೂ ಕ್ರಿಯೆ ಇಂಥ ಸಮಯದಲ್ಲೇ ನಡೆಯುವುದೆಂಬುದನ್ನು ನಿಷ್ಕರ್ಷಿಸಿ ಹೇಳುವುದಿಲ್ಲ. 'ಹೊನ್ನಸೆಟ್ಟಿ ಸಂತೆಗೆ ಹೋಗುತ್ತಾನೆ' ಎಂದರೆ—ಅವನು ಈಗ ಹೋಗುತ್ತಾನೆ, ನಾಳೆ ಹೋಗುತ್ತಾನೆ, ಇನ್ನು ಮೂರು ತಿಂಗಳಿಗೆ ಹೋಗುತ್ತಾನೆ, ಪ್ರತಿ ಶನಿವಾರವೂ ಹೋಗುತ್ತಾನೆ—ಇವುಗಳಲ್ಲಿ ಯಾವ ಅರ್ಥವಾದರೂ ಸರಿಹೋಗುತ್ತದೆ. ಆದ್ದರಿಂದ 'ಹೋಗುತ್ತಾನೆ' ಎಂಬ ರೂಪವು ವರ್ತಮಾನಕಾಲದ ಸಾಮಾನ್ಯಾರ್ಥವನ್ನು ಮಾತ್ರ ಕೊಡುತ್ತದೆ.

ಇನ್ನು 'ಹೋಗುತ್ತಿದ್ದಾನೆ' ಎಂಬ ರೂಪವನ್ನು ನೋಡೋಣ. ಹೋಗುವ ಕ್ರಿಯೆ ಈಗ—ನಾವು ಮಾತಾಡುತ್ತಿರುವ ಘಳಿಗೆಯಲ್ಲಿ—ನಡೆಯುವ ಸಂಗತಿಯನ್ನು ಇದು ತಿಳಿಸುತ್ತದೆ. ಈ ಕ್ರಿಯೆ ಆಗಲೇ ಆರಂಭವಾಗಿರುವುದರಿಂದ, 'ಹೊನ್ನಸೆಟ್ಟಿ ನಾಳೆ ಹೋಗುತ್ತಿದ್ದಾನೆ' ಎಂದು ಹೇಳುವುದು ತಪ್ಪಾಗುತ್ತದೆ. ಕ್ರಿಯೆ ಇನ್ನೂ ಮುಗಿದಿಲ್ಲವಾದಕಾರಣ, 'ಹೊನ್ನಸೆಟ್ಟಿ ಕಳೆದ ನಾಲ್ಕು ವಾರಗಳಿಂದಲೂ ಸಂತೆಗೆ ಹೋಗುತ್ತಿದ್ದಾನೆ' ಎಂದು ಹೇಳಬಹುದು.

'ಹೋಗಿದ್ದಾನೆ' ಎಂಬ ರೂಪವನ್ನು ಈಗ ನೋಡಿ. ಇದರಲ್ಲಿ, ಸಂತೆಗೆ ಹೋಗುವ ಕಾರ್ಯ ಮುಗಿದಿದೆ. ಆದರೆ, ನಮ್ಮ ಅಭಿಪ್ರಾಯದಲ್ಲಿ ಅದು ಮುಗಿದು ಹೆಚ್ಚು ಕಾಲವಾಗಲಿಲ್ಲ. (ಹೊನ್ನಸೆಟ್ಟಿ ಸಂತೆಯಿಂದ ಇನ್ನೂ ಹಿಂದಕ್ಕೆ ಬಂದಿಲ್ಲ.) ಆದಕಾರಣ, 'ಸಂತೆಗೆ ಹೋದನು' ಎಂದು ಹೇಳಿ ಅದನ್ನು ಭೂತಕಾಲಕ್ಕೆ ಸೇರಿಸುವಹಾಗಿಲ್ಲ. ('ಹೊನ್ನಸೆಟ್ಟಿ ನಿನ್ನೆ ಸಂತೆಗೆ ಹೋಗಿದ್ದಾನೆ' ಎಂದು ಯಾರೂ ಹೇಳುವುದಿಲ್ಲ.) ಆದ್ದರಿಂದ, ಇದೂ ವರ್ತಮಾನಕಾಲದ ರೂಪವೇ. ಕ್ರಿಯೆ ಮುಗಿದು ಹೆಚ್ಚುಕಾಲವಾಗಿಲ್ಲ ಎಂಬುದನ್ನು ಇದು ತಿಳಿಸುತ್ತದೆ.

ಈ ರೂಪಗಳನ್ನು ಬಿಡಿಸಿನೋಡಿ :

(೧) ಹೋಗುತ್ತಾನೆ = ಹೋಗು + ಉತ್ತ + ಅನೆ. (ಇದನ್ನು ನಾವು ಹಿಂದೆಯೇ ನೋಡಿದ್ದೇವೆ).
(೨) ಹೋಗುತ್ತಿದ್ದಾನೆ = ಹೋಗುತ್ತ + ಇದ್ದಾನೆ.
(೩) ಹೋಗಿದ್ದಾನೆ = ಹೋಗಿ + ಇದ್ದಾನೆ.

'ಹೋಗುತ್ತ, ಹೋಗಿ' ಎಂಬುವು ಕ್ರಮವಾಗಿ 'ಹೋಗು' ಧಾತುವಿನ ವರ್ತಮಾನನ್ಯೂನ, ಭೂತನ್ಯೂನ ರೂಪಗಳು; 'ಇದ್ದಾನೆ' ಎಂಬುದು 'ಇರು' ಧಾತುವಿನ ವರ್ತಮಾನಕಾಲದ ವಿಶೇಷರೂಪ.

ಮೇಲಿನ (೨), (೩)ನೆಯ ರೂಪಗಳಲ್ಲಿ ಒಂದು ಧಾತುವಿನ ಸಾಪೇಕ್ಷ ಕ್ರಿಯಾರೂಪವೂ ಇನ್ನೊಂದು ಧಾತುವಿನ ಪೂರ್ಣಕ್ರಿಯಾರೂಪವೂ ಸೇರಿವೆ. ಹೀಗೆ ಎರಡು ಅಥವಾ ಹಲವು ಧಾತುಗಳ ಬೇರೆ ಬೇರೆ ಕ್ರಿಯಾ ರೂಪಗಳು ಒಟ್ಟು ಸೇರಿ ಆಗುವ ಕ್ರಿಯಾಪದಕ್ಕೆ **ಸಂಯುಕ್ತಕ್ರಿಯಾಪದ**ವೆಂದು ಹೆಸರು.

೨. 'ಹೋಗುತ್ತಿದ್ದಾನೆ' ಎಂಬ ರೂಪಕ್ಕೆ 'ಕ್ರಿಯೆ ವರ್ತಮಾನ ಕಾಲದ್ದು; ಅದೂ ಇನ್ನೂ ಮುಗಿದಿಲ್ಲ' ಎಂದು ಅರ್ಥವಷ್ಟೆ. ಒಂದು ಧಾತುವಿನ ವರ್ತಮಾನನ್ಯೂನರೂಪಕ್ಕೆ 'ಇರು' ಧಾತುವಿನ ವರ್ತಮಾನ ಕಾಲದ ವಿಶೇಷರೂಪಗಳನ್ನು ಹತ್ತಿಸಿದರೆ **ಅಪೂರ್ಣವರ್ತಮಾನಕಾಲದ** ರೂಪಗಳಾಗುತ್ತವೆ.

೩. 'ಹೋಗಿದ್ದಾನೆ' ಎಂಬುದು 'ಕ್ರಿಯೆ ವರ್ತಮಾನಕಾಲದ್ದು; ಅದು ಈಗತಾನೆ ಮುಗಿದಿದೆ' ಎಂದು ತಿಳಿಸುವುದಷ್ಟೆ. ಒಂದು ಧಾತುವಿನ ಭೂತನ್ಯೂನ ರೂಪಕ್ಕೆ 'ಇರು' ಧಾತುವಿನ ವರ್ತಮಾನಕಾಲದ ವಿಶೇಷ ರೂಪಗಳನ್ನು ಹತ್ತಿಸಿದರೆ **ಪೂರ್ಣವರ್ತಮಾನಕಾಲದ** ರೂಪಗಳಾಗುತ್ತವೆ.

ಆದ್ದರಿಂದ,
ಹೋಗುತ್ತಾನೆ—ಸಾಮಾನ್ಯ ವರ್ತಮಾನಕಾಲ
ಹೋಗುತ್ತಿದ್ದಾನೆ—ಅಪೂರ್ಣ ವರ್ತಮಾನಕಾಲ
ಹೋಗಿದ್ದಾನೆ—ಪೂರ್ಣ ವರ್ತಮಾನಕಾಲ.

೪. ಈಗ ಇನ್ನು ಕೆಲವು ಧಾತುಗಳ ಅಪೂರ್ಣ ವರ್ತಮಾನ, ಪೂರ್ಣ ವರ್ತಮಾನ ಕಾಲಗಳ ರೂಪಗಳನ್ನು ನೋಡೋಣ :

ಅಪೂರ್ಣ ವರ್ತಮಾನಕಾಲಕ್ಕೆ :

ಬಿರುಗಾಳಿಗೆ ಗಿಡಮರಗಳು ಉರುಳುತ್ತಿವೆ. (ಉರುಳುತ್ತ + ಇವೆ)
ಮೇಕೆ ಬಂದು ನಮ್ಮ ಮಲ್ಲಿಗೆಬಳ್ಳಿಯನ್ನು ಕಡಿಯುತ್ತಿದೆ.
(ಕಡಿಯುತ್ತ + ಇದೆ)

'ವಿಶ್ವಾಮಿತ್ರರೆ, ಸ್ವರ್ಗದಿಂದ ತಲೆಕೆಳಗಾಗಿ ಬೀಳುತ್ತಿದ್ದೇನೆ' ಎಂದು ತ್ರಿಶಂಕು ಕೂಗಿಕೊಂಡನು. (ಬೀಳುತ್ತ+ಇದ್ದೇನೆ)

'ನಾಲ್ಕು ವರ್ಷಗಳಿಂದಲೂ ಈ ವಿಗ್ರಹವನ್ನು ಕೆತ್ತುತ್ತಿದ್ದೀಯೆ; ಇದು ಎಂದಿಗೆ ಮುಗಿಯುತ್ತದೆ?' (ಕೆತ್ತುತ್ತ+ಇದ್ದೀಯೆ)

ಪೂರ್ಣ ವರ್ತಮಾನಕಾಲಕ್ಕೆ :

ಇದೇಕೆ, ಈ ಗಿಳಿಮರಿ ರೆಕ್ಕೆ ಮುದುರಿಕೊಂಡು ಬಿದ್ದಿದೆ? (ಬಿದ್ದು+ಇದೆ)

ಮೈಸೂರಿನ ಖಾಸ್ ಬಂಗಲೆಯಲ್ಲಿ ಜಿರಾಫೆಗಳನ್ನು ಇರಿಸಿದ್ದಾರೆ. (ಇರಿಸಿ+ಇದ್ದಾರೆ)

ಈ ಮನೆ ಯಾರದೆಂದು ಭಾವಿಸಿದ್ದೀರಿ? (ಭಾವಿಸಿ+ಇದ್ದೀರಿ)

ಆತನಿಗೆ ಒಂದು ಕಣ್ಣು ಕಾಣಿಸದೆಂದು ಕೇಳಿದ್ದೇನೆ. (ಕೇಳಿ+ಇದ್ದೇನೆ)

## ೨. ಭೂತಕಾಲದ ರೂಪಗಳು

೫. ಈ ಕೆಳಗಿನ ವಾಕ್ಯಗಳನ್ನು ನೋಡಿ :

(೧) ಹೊನ್ನಸೆಟ್ಟಿ ಸಂತೆಗೆ ಹೋದನು.

(೨) ಹೊನ್ನಸೆಟ್ಟಿ ಸಂತೆಗೆ ಹೋಗುತ್ತಿದ್ದನು; ದಾರಿಯಲ್ಲಿ ಮಳೆ ಬಂದಿತು.

(೩) ಹೊನ್ನಸೆಟ್ಟಿ ಸಂತೆಗೆ ಹೋಗಿದ್ದನು; ಅಲ್ಲಿ ನಾಲ್ಕು ಪಲ್ಲ ಅಕ್ಕಿಯನ್ನು ವ್ಯಾಪಾರಮಾಡಿದನು.

ಮೇಲೆ ದೊಡ್ಡ ಅಕ್ಷರಗಳಲ್ಲಿ ತೋರಿಸಿರುವ ರೂಪಗಳಲ್ಲಿ 'ಹೋದನು' ಎಂಬ **ಸಾಮಾನ್ಯ ಭೂತಕಾಲದ** ರೂಪವು ಹೋಗುವ ಕ್ರಿಯೆ ಹಿಂದೆ ನಡೆಯಿತೆಂದು ಮಾತ್ರ ತಿಳಿಸುತ್ತದೆ. ಅದು ನಡೆದ ಕಾಲದ ವಿಷಯವಾಗಿ ಏನನ್ನೂ ಹೆಚ್ಚು ನಿಷ್ಕರ್ಷೆಯಾಗಿ ತಿಳಿಸುವುದಿಲ್ಲ. 'ಹೋಗುತ್ತಿದ್ದನು' ಎಂಬುದು ಹಿಂದೆ ನಡೆದ ಕ್ರಿಯೆಯ ವಿಷಯವನ್ನೇ ಹೇಳಿದ್ದರೂ ನಾವು ಯಾವ ಸಂದರ್ಭವನ್ನು ಕುರಿತು ಮಾತಾಡುತ್ತಾ ಇದ್ದೇವೋ ಆಗ ಇನ್ನೂ ಕ್ರಿಯೆ ಪೂರ್ಣವಾಗಿ ನಡೆದಿರಲಿಲ್ಲ ಎಂಬುದನ್ನು ತೋರಿಸುತ್ತದೆ. (ಮಳೆ ಬಂದಾಗ ಇನ್ನೂ ಹೊನ್ನಸೆಟ್ಟಿ ಸಂತೆಗೆ ಹೋಗಿ ಸೇರಿರಲಿಲ್ಲ.) ಆದ್ದರಿಂದ ಇದು **ಅಪೂರ್ಣ ಭೂತಕಾಲದ** ರೂಪವಾಯಿತು. 'ಹೋಗಿದ್ದನು' ಎಂಬುದೂ ಭೂತಕಾಲದ ರೂಪ. ಇದು ಕ್ರಿಯೆ ಸಂಪೂರ್ಣವಾಗಿ ನಡೆಯಿತು ಎಂಬ ಅರ್ಥವನ್ನು ಕೊಡುವುದಲ್ಲದೆ, ಈ ಕ್ರಿಯೆ ನಡೆದಾದಮೇಲೆ ಮತ್ತೊಂದು ಕ್ರಿಯೆಯೂ ಭೂತಕಾಲದಲ್ಲಿ ನಡೆಯಿತೆಂಬುದನ್ನೂ ಎಷ್ಟೋವೇಳೆ ಸೂಚಿಸುತ್ತದೆ. (ಹೊನ್ನಸೆಟ್ಟಿ ಸಂತೆಗೆ ಹೋಗಿ ಸೇರಿದ್ದು ಮಾತ್ರವಲ್ಲದೆ, ನಾಲ್ಕು ಪಲ್ಲ ಅಕ್ಕಿಯ ವ್ಯಾಪಾರವನ್ನು ಕೂಡ

ಮಾಡಿದನು) ಹೀಗೆ. 'ಹೋಗಿದ್ದನು' ಎಂಬುದು **ಪೂರ್ಣ ಭೂತ ಕಾಲದ ರೂಪ.**

ಹೋದನು = ಹೋಗು + ದ + ಅನು.

ಹೋಗುತ್ತಿದ್ದನು = ಹೋಗುತ್ತ + ಇದ್ದನು. (ಇಲ್ಲಿ 'ಹೋಗುತ್ತ' ಎಂಬ ವರ್ತಮಾನ ನ್ಯೂನ ರೂಪಕ್ಕೆ 'ಇದ್ದನು' ಎಂಬ ಇರು ಧಾತುವಿನ ಭೂತಕಾಲದ ರೂಪ ಸೇರಿದೆ.)

ಹೋಗಿದ್ದನು = ಹೋಗಿ + ಇದ್ದನು ('ಹೋಗಿ' ಎಂಬ ಭೂತ ನ್ಯೂನ ರೂಪಕ್ಕೆ 'ಇದ್ದನು' ಎಂಬುದು ಸೇರಿದೆ.)

೬. ಒಂದು ಧಾತುವಿನ ವರ್ತಮಾನನ್ಯೂನ ರೂಪಕ್ಕೆ 'ಇರು' ಧಾತುವಿನ ಭೂತಕಾಲದ ರೂಪಗಳನ್ನು ಸೇರಿಸಿದರೆ, ಆ ಧಾತುವಿನ **ಅಪೂರ್ಣ ಭೂತಕಾಲದ** ರೂಪಗಳಾಗುತ್ತವೆ; ಒಂದು ಧಾತುವಿನ ಭೂತನ್ಯೂನರೂಪಕ್ಕೆ 'ಇರು' ಧಾತುವಿನ ಭೂತಕಾಲದ ರೂಪಗಳನ್ನು ಸೇರಿಸಿದರೆ, ಆ ಧಾತುವಿನ **ಪೂರ್ಣ ಭೂತಕಾಲದ** ರೂಪಗಳಾಗುತ್ತವೆ.

೭. ಇನ್ನು ಕೆಲವು ಉದಾಹರಣೆಗಳು.—

ಅಪೂರ್ಣ ಭೂತಕಾಲಕ್ಕೆ:

ಕಳ್ಳರು ಬಂದಾಗ ಕಾವಲುಗಾರರೆಲ್ಲ ಗೊರಕೆ ಹೊಯ್ಯುತ್ತಿದ್ದರು. (ಹೊಯ್ಯುತ್ತ + ಇದ್ದರು)

ನಿನ್ನೆಯ ಬೆಳಗ್ಗೆ ಚೀಲವನ್ನು ಹೆಗಲ ಮೇಲೆ ಹಾಕಿಕೊಂಡು ನೀನು ಎಲ್ಲಿಗೆ ಹೋಗುತ್ತಿದ್ದೆ (ಹೋಗುತ್ತ + ಇದ್ದೆ)

ಅವನು ನಾಲ್ಕು ದಿನಗಳಿಗೆ ಒಂದು ಸಲ ಬೆಟ್ಟವನ್ನು ಹತ್ತುತ್ತಿದ್ದನು. (ಹತ್ತುತ್ತ + ಇದ್ದನು)

(ಇಲ್ಲಿ ಅಪೂರ್ಣ ಭೂತಕಾಲದ ರೂಪವು ರೂಢಿಯನ್ನು ತೋರಿಸುತ್ತದೆ.)

ನಿನ್ನ ಮಾತಿನಂತೆ ನಾನು ಆ ಜಾತ್ರೆಗೆ ಹೋಗಿದ್ದರೆ ತುಂಬ ಕಷ್ಟಕ್ಕೆ ಗುರಿಯಾಗುತ್ತಿದ್ದೆನು (ಗುರಿಯಾಗುತ್ತ + ಇದ್ದೆನು)

(ಇಲ್ಲಿ ಭೂತಕಾಲದಲ್ಲಿ ಸಂಭಾವನೆಯ ಅರ್ಥವನ್ನು ಅಪೂರ್ಣಭೂತ ಕಾಲದ ರೂಪವು ಕೊಡುತ್ತದೆ.)

ಪೂರ್ಣ ಭೂತಕಾಲಕ್ಕೆ:

ಮೂರು ಮಂದಿ ಸವಾರರ ಮುಖದ ಮೇಲೂ ದುಗುಡವು ಮುಸುಕಿದ್ದಿತು, (ಮುಸುಕಿ + ಇದ್ದಿತು)

ಈ ಹೊತ್ತು ಪಾಠಶಾಲೆಗೆ ಲಕ್ಷ್ಮಿ ಜರತಾರಿಯ ಲಂಗವನ್ನು ಹಾಕಿಕೊಂಡು ಬಂದಿದ್ದಳು (ಬಂದು + ಇದ್ದಳು)

ನಾಲ್ಕು ವರ್ಷಗಳ ಹಿಂದೆ ನಾನು ಕೃಷ್ಣಮೂರ್ತಿಯನ್ನು ಬೊಂಬಾಯಿಯಲ್ಲಿ ಕಂಡಿದ್ದೆನು. ಆಗ ಅವನು ಎಲ್‌ಎಲ್. ಬಿ. ಪರೀಕ್ಷೆಗೆ ಓದುತ್ತಿದ್ದನು. (ಕಂಡು + ಇದ್ದೆನು)

೮. 'ಇರು' ಧಾತುವಿನ ಮಿಕ್ಕ ಕ್ರಿಯಾರೂಪಗಳಾದ—ಇರುತ್ತಾನೆ (ವರ್ತಮಾನಕಾಲದ ಸಾಮಾನ್ಯರೂಪ). ಇರುವನು (ಭವಿಷ್ಯತ್ಕಾಲದ ರೂಪ), ಇರಲಿ, (ವಿಧ್ಯರ್ಥದ ರೂಪ), ಇದ್ದಾನು (ಸಂಭಾವನಾರ್ಥದ ರೂಪ), ಇದ್ದು (ಭೂತನ್ಯೂನ ರೂಪ), ಇದ್ದರೆ (ಪಕ್ಷಾರ್ಥದ ರೂಪ)—ಈ ಮೊದಲಾದುವು ಧಾತುಗಳ ವರ್ತಮಾನನ್ಯೂನ, ಭೂತನ್ಯೂನ ರೂಪಗಳಿಗೆ ಸೇರಿ ಮೇಲಿನಂತೆ ವಿಶೇಷಾರ್ಥವನ್ನು ಕೊಡುವ ಕ್ರಿಯಾಪದಗಳಾಗುತ್ತವೆ. ಅವುಗಳ ವಿಷಯವನ್ನು ಇಲ್ಲಿ ವಿವರವಾಗಿ ಹೇಳುವುದು ಅನಾವಶ್ಯಕ. ಒಂದೆರಡು ರೂಪಗಳನ್ನು ಮಾತ್ರ ಕೆಳಗೆ ಕೊಟ್ಟಿದೆ :

ಮೋಟಾರುಗಳು ಆಗಾಗ ಈ ರಸ್ತೆಯಲ್ಲಿ ಹೋಗುತ್ತಿರುತ್ತವೆ.
ಈ ವೇಳೆಗೆ ನನ್ನ ಕಾಗದ ಅವರ ಕೈಗೆ ಸೇರಿದ್ದೀತು.
ಶಾರದೆಯ ಮದುವೆಗೆ ನಾನು ಹೋಗದಿದ್ದರೆ ಹೇಗೆ?
(ಇಲ್ಲಿ, 'ಹೋಗದೆ' ಎಂಬ ನಿಷೇಧ ನ್ಯೂನಕ್ಕೆ 'ಇದ್ದರೆ' ಎಂಬ ಪಕ್ಷಾರ್ಥದ ರೂಪ ಸೇರಿದೆ.)

## ೩. ವಿಧ್ಯರ್ಥದ ರೂಪಗಳು

೯. ಈ ವಾಕ್ಯಗಳನ್ನು ನೋಡಿ ;

ಶಿವನಸಮುದ್ರಕ್ಕೆ ಹೋಗುವವರು ಮದ್ದೂರಿನಲ್ಲಿ ಇಳಿಯಬೇಕು.
ಈ ದಿನ ನಮ್ಮ ಮನೆಗೆ ತಾವು ಖಂಡಿತ ಊಟಕ್ಕೆ ದಯಮಾಡಿಸಬೇಕು.
ಎಂಟು ಗಂಟೆ ಹೊಡೆಯಿತು ; ಇನ್ನು ನಾನು ಮನೆಗೆ ಹೊರಡಬೇಕು.

ಮೇಲೆ ದೊಡ್ಡ ಅಕ್ಷರದಲ್ಲಿ ತೋರಿಸಿರುವ ರೂಪಗಳನ್ನು ನೋಡಿ; ಇಳಿಯುವ ಕಾರ್ಯವೂ, ದಯಮಾಡಿಸುವ ಕಾರ್ಯವೂ, ಹೊರಡುವ ಕಾರ್ಯವೂ ನಡೆಯುವುದು ಆವಶ್ಯಕವೆಂಬುದನ್ನು ಅವು ತೋರಿಸುತ್ತವೆ. ಆದಕಾರಣ 'ಇಳಿಯಲಿ, ದಯಮಾಡಿಸಿ' ಮೊದಲಾದರೂಪಗಳಂತೆ ಇವೂ ವಿಧ್ಯರ್ಥಕ್ಕೇ ಸೇರುತ್ತವೆ. ಇವು ಸಂಯುಕ್ತ ಕ್ರಿಯಾಪದಗಳು.

ಇಳಿಯಬೇಕು = ಇಳಿಯ (ಇಳಿ + ಅ) + ಬೇಕು
ದಯಮಾಡಿಸಬೇಕು = ದಯಮಾಡಿಸ (= ದಯಮಾಡಿಸು + ಅ) + ಬೇಕು
ಹೊರಡಬೇಕು = ಹೊರಡ (= ಹೊರಡು + ಅ) + ಬೇಕು

ಮೂರು ಕಡೆಗಳಲ್ಲೂ –ಅ ಎಂಬ ಪ್ರತ್ಯಯವನ್ನುಳ್ಳ ಧಾತುವಿನ ಭಾವಾರ್ಥದ ರೂಪದ ಮುಂದೆ 'ಬೇಕು' ಎಂಬ ಕ್ರಿಯಾರ್ಥಕಾವ್ಯಯ ಬಂದು ಸೇರಿ ವಿಧ್ಯರ್ಥದ ಸಂಯುಕ್ತ ಕ್ರಿಯಾಪದವಾಗಿದೆ.

೧೦. ಈ ವಾಕ್ಯವನ್ನು ನೋಡಿ ;

ಕೆಲಸಗಾರರೆಲ್ಲರೂ ಬೆಳಿಗ್ಗೆ ಏಳು ಗಂಟೆಯೊಳಗೆ ಕಾರ್ಖಾನೆಗೆ ಬರತಕ್ಕದು. (ಬರ+ತಕ್ಕದು)

ಇಲ್ಲಿ 'ಬರು' ಎಂಬುದರ ಭಾವಾರ್ಥ ರೂಪದ ಮುಂದೆ 'ತಕ್ಕದು' ಎಂಬುದು ಸೇರಿ 'ಬರಬೇಕು' ಎಂಬ ಅರ್ಥವನ್ನೇ ಕೊಡುತ್ತದೆ.

೧೧. ಹೀಗೆ, ಧಾತುವಿನ ಭಾವಾರ್ಥ ರೂಪಕ್ಕೆ ಹಲವು ಕ್ರಿಯಾರ್ಥಕ ಪದಗಳು ಸೇರಿ ಬೇರೆ ಬೇರೆ ಅರ್ಥಗಳನ್ನು ಕೊಡುವ ಸಂಯುಕ್ತ ಕ್ರಿಯಾಪದಗಳಾಗುತ್ತವೆ. ಅವುಗಳಲ್ಲಿ ಕೆಲವನ್ನು ಕೆಳಗೆ ಉದಾಹರಿಸಿದೆ.

೧೨. **ಕೂಡದು, ಆಗದು :**

ಕುದಿಯುವ ಹಾಲಿಗೆ ಹೆಪ್ಪುಹಾಕಕೂಡದು.
(ಹಾಕು+ಅ+ಕೂಡದು)
ಆ ಕೊಠಡಿಯೊಳಕ್ಕೆ ನೀನು ಹೋಗಕೂಡದು.
(ಹೋಗು+ಅ+ಕೂಡದು)
ಇಲ್ಲಿ ಕಂಡ ಸಂಗತಿಯನ್ನು ಯಾರಿಗೂ ಹೇಳಲಾಗದು.
(ಹೇಳು+ಅಲು+ಆಗದು)
ಇನ್ನು ತಡಮಾಡಲಾಗದು (ತಡಮಾಡು+ಅಲು+ಆಗದು)

ಇಲ್ಲಿ ಧಾತುವಿನ ಭಾವಾರ್ಥ ರೂಪಕ್ಕೆ 'ಕೂಡದು,' ಆಗದು' ಎಂಬ ಕ್ರಿಯಾರೂಪಗಳು ಸೇರಿ, ಕ್ರಿಯೆ ಖಂಡಿತ ನಡೆಯತಕ್ಕದ್ದಲ್ಲ ಎಂದು ವಿಧಿಸುತ್ತವೆ. ಆಗದು ಎಂಬ ಸ್ವರಾದಿ ಪದದ ಹಿಂದೆ ಅಲು–ಅಲು ಎಂಬ ಭಾವಾರ್ಥದ ಪ್ರತ್ಯಯ ಬಂದಿರುವುದನ್ನು ಗಮನಿಸಿ.

೧೩. **ಬಾರದು :**

ಬರಿಗಾಲಲ್ಲಿ ನಡೆಯಬಾರದು ; ಒದ್ದೆಯ ಬಟ್ಟೆಯನ್ನು ಧರಿಸಬಾರದು. (ಧರಿಸು+ಅ+ಬಾರದು)
ಒಣಹರಟೆಯಲ್ಲಿ ಕಾಲ ಕಳೆಯಬಾರದು. (ಕಳೆ+ಅ+ಬಾರದು)

ಮೇಲಿನ ರೂಪಗಳಲ್ಲಿ ಭಾವಾರ್ಥದ ಕ್ರಿಯೆಗೆ 'ಬಾರದು' ಎಂಬುದು ಸೇರಿದೆ. ಇದು ಕೆಲಸವಾಗಕೂಡದೆಂದೇ ಹೇಳಿದರೂ ಇದರ ಅರ್ಥವು ಆಗದು, ಕೂಡದು ಮೊದಲಾದುವುಗಳ ಅರ್ಥಕ್ಕಿಂತ ಮೃದುವಾಗಿದೆ.

೧೪. **ಬೇಡ, ಬೇಡಿ :**

ಕ್ರಿಯೆ ನಡೆಯಕೂಡದೆಂದು ವಿಧಿಸುವಾಗ. ಭಾವಾರ್ಥದ ಕ್ರಿಯೆಗೆ ಏಕವಚನದಲ್ಲಿ 'ಬೇಡ,' ಬಹುವಚನದಲ್ಲಿ 'ಬೇಡಿ' ಎಂಬುವು ಸೇರುತ್ತವೆ. ಇವು ಮಧ್ಯಮಪುರುಷದಲ್ಲಿ ಮಾತ್ರ ಬರುತ್ತವೆ.

ಬೇಡ: ಕೆಟ್ಟ ಧನಿಯಲ್ಲಿ ಕಿರಚಬೇಡ ; ಮಗು ಹೆದರಿಕೊಳ್ಳುತ್ತದೆ.
(ಕಿರಿಚು+ಅ+ಬೇಡ)

'ನಾನು ದಕ್ಷಿಣ ದಿಕ್ಕಿನಿಂದ ಹಿಂದಿರುಗುವವರೆಗೂ ನೀನು ಮೇಲಕ್ಕೆ ಏಳ ಬೇಡ' ಎಂದು ವಿಂಧ್ಯಪರ್ವತಕ್ಕೆ ಅಗಸ್ತ್ಯಋಷಿ ಹೇಳಿದನು.
(ಏಳು + ಅ + ಬೇಡ)

ಬೇಡಿ: ಮುಂದೆ ಬಂದರೆ ಹಾಯಬೇಡಿ. (ಹಾಯ್ + ಅ + ಬೇಡಿ)
ಹಿಂದೆ ಬಂದರೆ ಒದೆಯಬೇಡಿ. (ಒದೆ + ಅ + ಬೇಡಿ)
ಆ ಕಚ್ಚುವ ನಾಯಿಯ ಬಳಿಗೆ ಯಾರೂ ಹೋಗಬೇಡಿ.
(ಹೋಗು + ಅ + ಬೇಡಿ)

ಬಹುವಚನದಲ್ಲಿ 'ಬೇಡಿರಿ' ಎಂಬ ರೂಪವೂ ಉಂಟು.

ಉದಾಹರಣೆ.

ನಾನು ದುಡ್ಡಿನಾಸೆಯಿಂದ ಚಿಕಿತ್ಸೆಮಾಡುವುದಕ್ಕೆ ಬಂದನೆಂದು ತಿಳಿದುಕೊಳ್ಳ ಬೇಡಿರಿ.

### ೪. ನಿಷೇಧಾರ್ಥ

೧೫. ಇಲ್ಲ:

(೧)—ಅಲು ಎಂಬ ಪ್ರತ್ಯಯವನ್ನುಳ್ಳ ಭಾವಾರ್ಥದ ಕ್ರಿಯೆಗೆ 'ಇಲ್ಲ' ಎಂಬುದು ಸೇರಿ, ಭೂತಕಾಲದಲ್ಲಿ ಕ್ರಿಯೆ ನಡೆಯದಿರುವುದನ್ನು ತಿಳಿಸುತ್ತದೆ.

ಉದಾಹರಣೆ.

ಎಷ್ಟು ಸಮಾಧಾನ ಮಾಡಿದರೂ ಆ ಹುಡುಗಿ ಅಳುವನ್ನು ನಿಲ್ಲಿಸಲಿಲ್ಲ.
(ನಿಲ್ಲಿಸಲ್ + ಇಲ್ಲ)
ನಿಮ್ಮ ತೋಟದ ಹೂವುಗಳನ್ನು ನಾನು ಕೊಯ್ಯಲಿಲ್ಲ. (ಕೊಯ್ಯಲು + ಇಲ್ಲ)
ಮಳೆ ಬರಲಿಲ್ಲ; ಕೆರೆ ತುಂಬಲಿಲ್ಲ: ಜನರ ಹಾಹಾಕಾರ ತಪ್ಪಲಿಲ್ಲ.
(ಬರಲು + ಇಲ್ಲ; ತುಂಬಲು + ಇಲ್ಲ; ತಪ್ಪಲು + ಇಲ್ಲ)

೨. ಈ ರೂಪಗಳನ್ನು ನೋಡಿ:

ಮೂಗಿರುವ ತನಕ ನೆಗಡಿ ತಪ್ಪುವುದಿಲ್ಲ. (ತಪ್ಪುವುದು + ಇಲ್ಲ)
ಈ ಸೌದೆ ಚೆನ್ನಾಗಿ ಉರಿಯುವುದಿಲ್ಲ. (ಉರಿಯುವುದು + ಇಲ್ಲ)
ನಾಳೆಯ ದಿನ ನಾನು ಪಾಠಶಾಲೆಗೆ ಹೋಗುವುದಿಲ್ಲ. (ಹೋಗುವುದು + ಇಲ್ಲ)

ಇಲ್ಲಿ ತಪ್ಪುವುದು, ಉರಿಯುವುದು, ಹೋಗುವುದು—ಈ ಬಗೆಯ ಭಾವನಾಮ ರೂಪಗಳಿಗೆ * 'ಇಲ್ಲ' ಎಂಬುದು ಸೇರಿ ವರ್ತಮಾನ ಭವಿಷ್ಯತ್ಕಾಲಗಳಲ್ಲಿ ಕ್ರಿಯೆಯ ನಿಷೇಧವನ್ನು ಹೇಳುತ್ತದೆ.

---

* ಈ ರೂಪಗಳು ಆಯಾ ಧಾತುಗಳ ಭವಿಷ್ಯತ್ಕಾಲದ ಪ್ರಥಮ ಪುರುಷ ನಪುಂಸಕ ಏಕವಚನ ರೂಪಗಳೇ ಆಗಿವೆ. ಇವುಗಳ ವಿಷಯ ಮುಂದೆ ಬರುತ್ತದೆ.

(೩) ಕ್ರಿಯೆಯ ನಿಷೇಧವನ್ನು ತೋರಿಸುವುದಕ್ಕಾಗಿ ಧಾತುವಿನ ಭೂತನ್ಯೂನ, ವರ್ತಮಾನನ್ಯೂನ ರೂಪಗಳಿಗೂ 'ಇಲ್ಲ' ಎಂಬುದು ಸೇರುವುದುಂಟು.

ಉದಾಹರಣೆ.

ಈ ದಿನದ ಟಪಾಲು ಇನ್ನೂ ಬಂದಿಲ್ಲ. (ಬಂದು+ಇಲ್ಲ)
ರಂಗರಾಯರೊಬ್ಬರಿಗೆ ಮಾತ್ರ ಊಟಕ್ಕೆ ಹೇಳಿಲ್ಲ. (ಹೇಳಿ+ಇಲ್ಲ)
ನಾಲ್ಕು ದಿನಗಳಿಂದ ನಾನು ಕಚೇರಿಗೆ ಹೋಗುತ್ತಿಲ್ಲ. (ಹೋಗುತ್ತ+ಇಲ್ಲ)
ಹೊರಗಡೆ ಮಳೆ ಬೀಳುತ್ತಿಲ್ಲ. (ಬೀಳುತ್ತ+ಇಲ್ಲ)

ಬರಲಿಲ್ಲ—ಬಂದಿಲ್ಲ, ಬರುವುದಿಲ್ಲ—ಬರುತ್ತಿಲ್ಲ ಎಂಬ ಜೊತೆ ಜೊತೆಯ ರೂಪಗಳನ್ನು ಹೋಲಿಸಿ ನೋಡಿ. ಬಂದಿಲ್ಲ, ಬರುತ್ತಿಲ್ಲ ಎಂಬ ರೂಪಗಳು ಕ್ರಿಯೆ ಈಗ ನಡೆದಿಲ್ಲ ಅಥವಾ ನಡೆಯುತ್ತಿಲ್ಲ ಎಂದು ತಿಳಿಸಿ ಮುಂದೆ ನಡೆದರೂ ನಡೆಯಬಹುದು ಎಂಬುದನ್ನು ಸೂಚಿಸುತ್ತವೆ. ಬರಲಿಲ್ಲ, ಬರುವುದಿಲ್ಲ ಎಂಬ ರೂಪಗಳಲ್ಲಿ ಮುಂದೆ ಏನಾಗಬಹುದು ಎನ್ನುವುದರ ಸೂಚನೆ ಇಲ್ಲ.

## ೫. ಸಂಭಾವನಾರ್ಥ

೧೬. **ಬಹುದು :**

ಭಾವಾರ್ಥದ ಕ್ರಿಯೆಗೆ 'ಬಹುದು' ಎಂಬುದು ಸೇರಿ ಕ್ರಿಯೆ ನಡೆದೀತು ಎಂಬ ಸಂಭಾವನಾರ್ಥದ ಅಭಿಪ್ರಾಯವನ್ನು ಕೊಡುತ್ತದೆ.

ಉದಾಹರಣೆ.

ಈ ವರ್ಷ ನಮ್ಮ ಗೌರಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಬಹುದು.
ಇಷ್ಟು ಹೊತ್ತಿಗೆ ಮೋಟಾರು ಚಳ್ಳಕೆರೆಯನ್ನು ಮುಟ್ಟಿರಬಹುದು.

'ಬಹುದು' ಎಂಬುದು ಸೇರಿದ ರೂಪವು ಕೆಲವುವೇಳೆ ಒಪ್ಪಿಗೆಯನ್ನು ಸೂಚಿಸುತ್ತದೆ.

ಉದಾಹರಣೆ.

ನೀನು ಇನ್ನೂ ಕೆಲವು ದಿನ ಬೆಂಗಳೂರಿನಲ್ಲೇ ನಿಲ್ಲಬಹುದು.
"ಊಟಕ್ಕೆ ಎಲೆ ಹಾಕಬಹುದೆ?" "ಹಾಕಬಹುದು"

೧೭. 'ಆರು' ಧಾತುವಿನ ರೂಪಗಳು :

'ಆರು' (=ಶಕ್ತನಾಗು) ಎಂಬ ಧಾತುವಿನ ನಿಷೇಧಾರ್ಥದ ರೂಪಗಳು ಮಾತ್ರ ಈಗ ಬಳಕೆಯಲ್ಲಿವೆ. ಅವುಗಳನ್ನು ಕೆಳಗೆ ಕೊಟ್ಟಿದೆ.

| | ಏಕ | ಬಹು |
|---|---|---|
| ಪ್ರ. ಪು. ಪು. | ಆರ (ನು) | ಆರರು |
| ಸ್ತ್ರೀ. | ಆರಳು | |
| ನಪುಂ. | ಆರದು | ಆರವು |
| ಮ. ಪು. | ಆರೆ | ಆರಿರಿ |
| ಉ. ಪು. | ಆರೆ (ನು) | ಆರೆವು |

೧೮. ಈ ರೂಪಗಳು ಧಾತುವಿನ ಭಾವಾರ್ಥದ ರೂಪಕ್ಕೆ ಸೇರಿದರೆ, ಕಾರ್ಯ ನಡೆಯುದಿರುವ ಸಂಭವವೇ ಹೆಚ್ಚು ಎಂದಾಗಲಿ, ಒಂದು ಕಾರ್ಯವನ್ನು ಮಾಡುವ ಶಕ್ತಿಯಿಲ್ಲ ಎಂದಾಗಲಿ ಅರ್ಥವು ಬರುತ್ತದೆ.

ಉದಾಹರಣೆ.

ಆ ವಿಜಾಸೆ ಸುಗ್ಗಿ ಬೆಕ್ಕು ಇನ್ನು ಹಾಲಿನ ತಂಟೆಗೆ ಬರಲಾರದು.
(ಬರಲು+ಆರದು)
ಅರ್ಜುನನನ್ನು ಯುದ್ಧದಲ್ಲಿ ಯಾರೂ ಜಯಿಸಲಾರರು.
ಆ ಗಿಳಿಗಳು ಇನ್ನೂ ಮಣಿಪುರವನ್ನು ಸೇರಿರಲಾರವು.
ಕೊಟ್ಟ ಭಾಷೆಗೆ ತಪ್ಪಲಾರೆನು.
ಕೆಟ್ಟ ಯೋಚನೆ ಮಾಡಲಾರೆನು.

## ಹದಿನಾರನೆಯ ಅಧ್ಯಾಯ

### ಸಾಧಿತ ನಾಮಪದ—ಬಗೆಗಳು

೧. ನಾವು ಉಪಯೋಗಿಸುವ ಕೆಲವು ಶಬ್ದಗಳನ್ನು ನೋಡಿ :

| ಧಾತು | ನಾಮಪ್ರಕೃತಿ |
|---|---|
| ನಂಬು | ನಂಬಿಕೆ (=ನಂಬು+ಇಕೆ) |
| ಕುಣಿ | ಕುಣಿತ (=ಕುಣಿ+ತ) |
| **ನಾಮಪ್ರಕೃತಿ** | **ನಾಮಪ್ರಕೃತಿ** |
| ಎದೆ | ಎದೆಗಾರ (=ಎದೆ+ಗಾರ) |
| ದೊಡ್ಡ | ದೊಡ್ಡತನ (=ದೊಡ್ಡ+ತನ) |
| **ಧಾತು** | **ಧಾತು** |
| ಓಡು | ಓಡಿಸು (=ಓಡು+ಇಸು) |
| ಕಲಿ | ಕಲಿಸು (=ಕಲಿ+ಇಸು) |
| **ನಾಮಪ್ರಕೃತಿ** | **ಧಾತು** |
| ದುಃಖ | ದುಃಖಿಸು (=ದುಃಖ+ಇಸು) |
| ಆಸೆ | ಆಸೆಪಡು (=ಆಸೆ+ಪಡು) |

ಧಾತುಗಳಿಗೂ ನಾಮಪ್ರಕೃತಿಗಳಿಗೂ ಬೇರೆ ಬೇರೆ ಪ್ರತ್ಯಯಗಳನ್ನು ಹತ್ತಿಸಿದರೆ ಹೊಸ ಧಾತುಗಳೂ ನಾಮಪ್ರಕೃತಿಗಳೂ ಆಗಬಹುದೆಂಬುದು ಮೇಲಿನ ಪಟ್ಟಿಯಿಂದ ಸ್ಪಷ್ಟವಾಗುತ್ತದೆ. (' ಆಸೆಪಡು ' ಎಂಬ ಕಡೆಯಲ್ಲಿ ' ಆಸೆ ' ಎಂಬ ನಾಮಪ್ರಕೃತಿಗೆ ' ಪಡು ' ಎಂಬ ಧಾತುವೇ ಸೇರಿದೆ.) ಧಾತುವಿನಿಂದ ಹೊಸ ಧಾತುವಾದರೂ ಆಗಬಹುದು, ನಾಮಪ್ರಕೃತಿಯಾದರೂ ಆಗಬಹುದು. ನಾಮಪ್ರಕೃತಿಯಿಂದಲೂ ಹೀಗೆಯೇ.

೨. ನಾವು ಬಲ್ಲ ಎಷ್ಟೋ ಧಾತುಗಳಿಗೂ ನಾಮಪ್ರಕೃತಿಗಳಿಗೂ ಪ್ರತ್ಯಯ ಮೊದಲಾದುವನ್ನು ಸೇರಿಸಿ ಹೀಗೆ ಹೊಸ ಶಬ್ದಗಳನ್ನು ಸಾಧಿಸಬಹುದು. ಈ ರೀತಿಉಂಟಾದ ಶಬ್ದಗಳಿಗೆ ಸಾಧಿತ ಶಬ್ದಗಳೆಂದು ಹೆಸರು.

೩. ಸಾಧಿತ ನಾಮಪ್ರಕೃತಿಗಳು ಎಷ್ಟು ಬಗೆಯಾಗಿರಬಹುದೆಂಬುದನ್ನು ಮೊದಲು ನೋಡೋಣ.

#### (ಅ) ಕೃದಂತನಾಮ :

ಆ ದಿನ ಏನು ನಡೆಯಿತೆಂದು ತಿಳಿದವನು ಇಲ್ಲಿಯೇ ಇದ್ದಾನೆ.
ಸುಮ್ಮ ಸುಮ್ಮನೆ ಅಳುವವಳನ್ನು ಚೇಳು ಬೇರೆ ಕುಟುಕಿತು.
ಆಡಿದಂತೆ ಮಾಡದವರಿಗೆ ಅಧೋಗತಿಯೇ ಸರಿ.

ಮೇಲೆ ಬಂದಿರುವ 'ತಿಳಿದವನು, ಅಳುವವಳನ್ನು, ಮಾಡದವರಿಗೆ ' ಎಂಬ ಪದಗಳನ್ನು ' ತಿಳಿದನು, ಅಳುವಳು. ಮಾಡರು ' ಎಂಬ ಪದ

ಗಳೊಂದಿಗೆ ಹೋಲಿಸಿ. ತಿಳಿ, ಅಳು, ಮಾಡು ಎಂಬ ಧಾತುಗಳಿಂದಲೇ ಈ ಎರಡು ಜೊತೆಯ ರೂಪಗಳೂ ಬಂದಿವೆ. ಇವುಗಳಲ್ಲಿ ತಿಳಿದನು, ಅಳುವಳು, ಮಾಡರು ಎಂಬುವು ಕ್ರಿಯಾಪದಗಳು; ಒಂದು ಕಾರ್ಯ ನಡೆಯುವುದು ಅಥವಾ ನಡೆಯದಿರುವುದು—ಇಷ್ಟನ್ನೇ ಅವು ಮುಖ್ಯವಾಗಿ ತಿಳಿಸುತ್ತವೆ. ತಿಳಿದವನು, ಅಳುವವಳನ್ನು, ಮಾಡದವರಿಗೆ ಎಂಬ ಪದಗಳು ಕ್ರಿಯೆ ನಡೆಯುವುದನ್ನಾಗಲಿ ನಡೆಯದಿರುವುದನ್ನಾಗಲಿ ಮುಖ್ಯವಾಗಿ ತಿಳಿಸದೆ, ಆ ಕ್ರಿಯೆಗೆ ಸಂಬಂಧಪಟ್ಟವರನ್ನು ತೋರಿಸಿ ಅವರ ಹೆಸರುಗಳಾಗಿ ನಿಲ್ಲುವುದರಿಂದ ಇವು ನಾಮಪದಗಳ ಗುಂಪಿಗೆ ಸೇರುತ್ತವೆ. ಮೇಲಿನ ಉದಾಹರಣೆಗಳಲ್ಲಿ ಅಳುವವಳನ್ನು, ಮಾಡದವರಿಗೆ ಎಂಬ ಪದಗಳು –ಅನ್ನು, –ಇಗೆ ಎಂಬ ವಿಭಕ್ತಿ ಪ್ರತ್ಯಯಗಳನ್ನು ಹೊಂದಿರುವುದರಿಂದಲೂ ಇವು ನಾಮಪದಗಳೇ ಎಂದು ಗೊತ್ತಾಗುತ್ತದೆ.

ಹೀಗೆ ಧಾತುಗಳಿಂದ ಹುಟ್ಟಿದರೂ ಕ್ರಿಯಾಪದಗಳಾಗಿ ನಿಲ್ಲದೆ ಕ್ರಿಯೆಗೆ ಸಂಬಂಧಪಟ್ಟವರ ಹೆಸರುಗಳಾಗಿ ನಿಲ್ಲತಕ್ಕ ಶಬ್ದಗಳಿಗೆ **ಕೃದಂತ ನಾಮ**ಗಳೆಂದು ಹೆಸರು.

### (ಆ) ಕೃದಂತಭಾವನಾಮ :

ಧಾತುಗಳಿಂದ ಹುಟ್ಟತಕ್ಕ ಇನ್ನೊಂದು ಬಗೆಯ ನಾಮಪ್ರಕೃತಿಗಳನ್ನು ಈಗ ನೋಡೋಣ!

ಅಷ್ಟು ಜನದ ಮುಂದೆ ಹೋಗಿ ನಿಲ್ಲುವುದಕ್ಕೆ ನನಗೆ ನಾಚಿಕೆಯಾಯಿತು.
ಕರಡಿಯ ಕುಣಿತವನ್ನು ನೋಡಿ ಮಕ್ಕಳೆಲ್ಲರೂ ನಕ್ಕರು
ನಮಗೆ ಅಪಕಾರ ಮಾಡಿದವರಿಗೂ ನಾವು ಕೇಡನ್ನು ಬಯಸಬಾರದು.

ನಾಚಿಕೆ, ಕುಣಿತ, ಕೇಡು—ಈ ಮೂರು ಶಬ್ದಗಳೂ ಕ್ರಮವಾಗಿ ನಾಚು, ಕುಣಿ, ಕೆಡು ಎಂಬ ಧಾತುಗಳಿಂದ ಬಂದಿವೆ. ನಾಚಿಕೊಂಡರೆ ಉಂಟಾಗುವ ಮನಸ್ಸಿನ ಭಾವವನ್ನು 'ನಾಚಿಕೆ' ಎಂಬ ಶಬ್ದವೂ, ಕುಣಿಯುವ ಮತ್ತು ಕೆಡುವ ಸ್ಥಿತಿಗಳನ್ನು 'ಕುಣಿತ' 'ಕೇಡು' ಎಂಬ ಶಬ್ದಗಳೂ ತಿಳಿಸುತ್ತವೆ. ಈ ಮೂರೂ ಭಾವನಾಮಗಳೆಂದು ನಾವು ಹಿಂದೆಯೇ ಓದಿದ್ದೇವೆ. ಧಾತುವಿನಿಂದ ಹುಟ್ಟುವ ಭಾವನಾಮವನ್ನು **ಕೃದಂತಭಾವ ನಾಮ**ವೆಂದು ಕರೆಯುತ್ತಾರೆ.

### (ಇ) ತದ್ಧಿತಾಂತ ಭಾವನಾಮ ?

ಧಾತುಗಳಿಂದ ಭಾವನಾಮಗಳನ್ನು ಸಾಧಿಸುವಂತೆಯೇ ನಾಮಪ್ರಕೃತಿಗಳಿಂದಲೂ ಸಾಧಿಸಬಹುದು ?

ರಂಗಪ್ಪನವರ ಗೌಡಿಕೆಯಲ್ಲಿ ನಮ್ಮ ಹಳ್ಳಿ ಈ ಪ್ರಾಂತಕ್ಕೆಲ್ಲಾ ಹೆಸರಾಯಿತು.
ಅವನ ಕಿವುಡು ಯಾವ ಚಿಕಿತ್ಸೆಗೂ ಗುಣವಾಗಲಿಲ್ಲ.
ದೊಡ್ಡತನವನ್ನು ಕಳೆದುಕೊಳ್ಳುವುದು ಎಷ್ಟರಲ್ಲಿದೆ ?

ಗೌಡನ ವೃತ್ತಿ--ಗೌಡಿಕೆ; ಕಿವುಡನ ಸ್ಥಿತಿ--ಕಿವುಡು; ದೊಡ್ಡವರ ಭಾವ-ದೊಡ್ಡತನ. ಗೌಡ, ಕಿವುಡ ಎಂಬ ಎರಡು ಶಬ್ದಗಳೂ ನಾಮವಾಚಕಗಳು, 'ದೊಡ್ಡ' ಎಂಬುದು ಗುಣವಾಚಕ. ಈ ನಾಮಪ್ರಕೃತಿಗಳಿಂದ 'ಗೌಡಿಕೆ' ಮೊದಲಾದ ಭಾವನಾಮಗಳು ಬಂದಿವೆ. ಹೀಗೆ ನಾಮಪ್ರಕೃತಿಗಳಿಂದ ಸಾಧಿಸುವ ಭಾವನಾಮಗಳನ್ನು **ತದ್ಧಿತಾಂತಭಾವನಾಮ**ಗಳೆಂದು ಕರೆಯುತ್ತಾರೆ.

## (ಈ) ತದ್ಧಿತಾಂತನಾಮ

ಆ ಮೋಸಗಾರರಲ್ಲಿ ಒಬ್ಬನು ಬಂದು, "ದೀಕ್ಷಿತರೇ, ನಾಯಿಯನ್ನೇಕೆ ಹೆಗಲ ಮೇಲೆ ಹೊತ್ತುಕೊಂಡಿದ್ದೀರಿ?" ಎಂದು ಕೇಳಿದನು.

ಅವಳು ಬಡವರ ಮನೆಯಲ್ಲಿ ಹುಟ್ಟಿ ಹಣವಂತರ ಮನೆಯನ್ನು ಸೇರಿದಳು.

ಈ ಕೇಡಿಗನು ನನ್ನ ಮೇಲೆ ಎಲ್ಲರಿಗೂ ದೂರು ಹೇಳಿದ್ದಾನೆ.

'ಮೋಸ'ವನ್ನು ಮಾಡುವವನು-'ಮೋಸಗಾರ,' 'ಹಣ'ವನ್ನುಳ್ಳವನು—'ಹಣವಂತ'; ಕೇಡನ್ನು ಮಾಡುವವನು-'ಕೇಡಿಗ'. ಮೋಸ, ಹಣ, ಕೇಡು ಎಂಬ ನಾಮಪ್ರಕೃತಿಗಳಿಂದ ಮೋಸಗಾರ ಮೊದಲಾದ ಆಯಾ ವಿಷಯಗಳಿಗೆ ಸಂಬಂಧಪಟ್ಟವರ ಹೆಸರುಗಳನ್ನು ತಿಳಿಸುವ ನಾಮಪ್ರಕೃತಿಗಳು ಬಂದಿವೆ. ಹೀಗೆ ನಾಮಪ್ರಕೃತಿಗಳಿಂದ ಸಾಧಿಸುವ (ಭಾವನಾಮಗಳಲ್ಲದ)ನಾಮಪ್ರಕೃತಿಗಳನ್ನು **ತದ್ಧಿತಾಂತನಾಮ**ಗಳೆಂದು ಕರೆಯುತ್ತಾರೆ.

'ಕೇಡಿಗ' ಎಂಬ ಶಬ್ದವನ್ನು ಮತ್ತೊಂದು ಬಾರಿ ಗಮನಿಸಿ; 'ಕೆಡು' ಧಾತುವಿನಿಂದ ಬಂದ ಕೃದಂತಭಾವನಾಮ 'ಕೇಡು'; 'ಕೇಡು' ಎಂಬುದರಿಂದ 'ಕೇಡಿಗ'. ಹೀಗೆ ಒಂದು ಸಾಧಿತನಾಮಪ್ರಕೃತಿಯಿಂದ ಮತ್ತೊಂದನ್ನು ಸಾಧಿಸಬಹುದು.
(ಇದರಂತೆಯೇ ಎದೆ—ಎದೆಗಾರ; ಎದೆಗಾರ—ಎದೆಗಾರಿಕೆ, ಇತ್ಯಾದಿ.)

## (ಉ). ಸಮಾಸ

ಮಗುವಿನ ಕಾಲು ಬಳೆ ತುಂಬ ಸಡಿಲವಾಗಿದೆ.

ಇಂಗ್ಲೆಂಡ್ ಮೊದಲಾದ ದೇಶಗಳಲ್ಲಿ ಸೌದೆಗೆ ಬದಲಾಗಿ ಕಲ್ಲಿದ್ದಲನ್ನು ಉರಿಸುತ್ತಾರೆ.

ಆ ಒಂದು ದಿವಸದ ಮಳೆಯಲ್ಲೆ ಕೆರೆಕಟ್ಟೆಬಾವಿಗಳಿಗೆ ಸಮೃದ್ಧಿಯಾಗಿ ನೀರು ಬಂದಿತು.

ಮೇಲೆ ಬಂದಿರುವ 'ಕಾಲುಬಳೆ ಎಂಬ ಪದವನ್ನು ಬಿಡಿಸಿ ನೋಡಿದರೆ ಇದರಲ್ಲಿ 'ಕಾಲು, ಬಳೆ' ಎಂಬ ಎರಡು ಪದಗಳು ಒಟ್ಟುಗೂಡಿರುವುದು ಗೊತ್ತಾಗುತ್ತವೆ. ಇಲ್ಲಿ ಕಾಲಿಗೂ ಬಳೆಗೂ ಇರುವ ಸಂಬಂಧ

ವೇನೆಂಬುದನ್ನು ಬಾಯಿಬಿಟ್ಟು ಹೇಳಿದ್ದರೆ, 'ಕಾಲಿನ ಬಳೆ' (ಎಂದರೆ, ಕಾಲಿಗೆ ಹಾಕಿಕೊಳ್ಳುವ ಬಳೆ, ಎಂದು ಆಗುತ್ತಿತ್ತು. ಆಗ, 'ಕಾಲಿನ ಬಳೆ' ಎಂಬ ಎರಡು ಪದಗಳೂ, ಬೇರೆ ಬೇರೆ ನಿಲ್ಲುತ್ತಿದ್ದುವು. 'ಕಾಲುಬಳೆ' ಎಂಬುದರಲ್ಲಾದರೆ, ಕಾಲಿಗೂ ಬಳೆಗೂ ಇರತಕ್ಕ ಸಂಬಂಧವನ್ನು ತೋರಿಸುವ ಷಷ್ಠೀವಿಭಕ್ತಿ ಪ್ರತ್ಯಯ ಬಿಟ್ಟುಹೋಗಿದೆ; ಎರಡು ಪದಗಳೂ ಪ್ರಕೃತಿರೂಪದಲ್ಲಿ ಸೇರಿ ಒಂದೇ ಶಬ್ದವಾಗಿ ನಿಂತು 'ಕಾಲಿನ ಬಳೆ' ಎಂಬ ಅರ್ಥವನ್ನು ಕೊಡುತ್ತವೆ.

ಈಗ 'ಕಲ್ಲಿದ್ದಲು' ಎಂಬ ಶಬ್ದವನ್ನು ನೋಡಿ. ಇದಕ್ಕೆ 'ಕಲ್ಲಿನಂತಿರುವ ಇದ್ದಲು' ಎಂದು ಅರ್ಥ. ಇಲ್ಲಿ ಅರ್ಥಕೊಡತಕ್ಕ 'ಕಲ್ಲು' 'ಇದ್ದಲು' ಎಂಬ ಪದಗಳು ಪ್ರಕೃತಿರೂಪದಲ್ಲಿ ಸೇರಿ 'ಕಲ್ಲಿದ್ದಲು' ಎಂಬ ಒಂದು ಶಬ್ದವಾಗಿದೆ.

ಇನ್ನು ಮೂರನೆಯ ವಾಕ್ಯದ 'ಕೆರೆಕಟ್ಟೆಬಾವಿಗಳಿಗೆ' ಎಂಬ ಪದವನ್ನು ಬಿಡಿಸಿ ಬರೆದರೆ 'ಕೆರೆಗಳಿಗೂ ಕಟ್ಟೆಗಳಿಗೂ ಭಾವಿಗಳಿಗೂ' ಎಂದಾಗುತ್ತದೆ. ಇಲ್ಲಿ 'ಕೆರೆ' 'ಕಟ್ಟೆ' 'ಬಾವಿ' ಎಂಬ ಮೂರು ಪ್ರಕೃತಿಗಳೂ ಸೇರಿ 'ಕೆರೆಕಟ್ಟೆಬಾವಿ' ಎಂಬ ಒಂದು ಶಬ್ದವಾಗಿ ಅದಕ್ಕೆ ಬಹುವಚನ ಪ್ರತ್ಯಯವೂ ವಿಭಕ್ತಿ ಪ್ರತ್ಯಯವೂ ಹತ್ತಿವೆ.

ಹೀಗೆ ಎರಡು ಅಥವಾ ಹಲವು ಪದಗಳು ಒಟ್ಟುಗೂಡಿ ಒಂದು ಶಬ್ದವಾಗುವುದಕ್ಕೆ ಸಮಾಸವೆಂದು ಹೆಸರು.

೪. ಮೇಲೆ ನೋಡಿದಂತೆ ಸಾಧಿತ ನಾಮಪ್ರಕೃತಿಗಳನ್ನು (೧) ಕೃದಂತನಾಮ, (೨) ಕೃದಂತಭಾವನಾಮ, (೩) ತದ್ಧಿತಾಂತಭಾವನಾಮ, (೪) ತದ್ಧಿತಾಂತನಾಮ, (೫) ಸಮಾಸ—ಎಂದು ಐದು ಬಗೆಯಾಗಿ ವಿಂಗಡಿಸಬಹುದು. ಕೃದಂತನಾಮಗಳೂ ಕೃದಂತಭಾವನಾಮಗಳೂ ಧಾತುಗಳಿಂದ ಹುಟ್ಟುತ್ತವೆ; ತದ್ಧಿತಾಂತನಾಮಗಳೂ ತದ್ಧಿತಾಂತಭಾವನಾಮಗಳೂ ನಾಮಪ್ರಕೃತಿಗಳಿಂದ ಹುಟ್ಟುತ್ತವೆ. ಎರಡು ಅಥವಾ ಅನೇಕ ಪದಗಳು ಒಟ್ಟುಗೂಡಿ ಒಂದು ಶಬ್ದವಾಗಿ ಸಮಾಸಗಳಾಗುತ್ತವೆ.

ಈ ಬೇರೆ ಬೇರೆ ಬಗೆಯ ಸಾಧಿತ ನಾಮಪ್ರಕೃತಿಗಳನ್ನು ಕುರಿತು ಹೆಚ್ಚಿನ ಅಂಶಗಳನ್ನು ಮುಂದಿನ ಅಧ್ಯಾಯಗಳಲ್ಲಿ ಹೇಳಲಾಗುತ್ತದೆ.

---

## ಹದಿನೇಳನೆಯ ಅಧ್ಯಾಯ

### ಕೃದಂತನಾಮ

೧. (೧) ದೀಪವಿಲ್ಲದೆ ಈ ಬೀದಿಯಲ್ಲಿ ಹೋಗುವವನು ಖಂಡಿತವಾಗಿ ಕಾಲು ಮುರಿದುಕೊಳ್ಳುತ್ತಾನೆ.
(೨) ನೀರಿಗೆ ಹೋಗುವವಳು ಬಿಂದಿಗೆಯನ್ನು ಮರೆಯಬಹುದೆ?
(೩) ಇಂಗ್ಲೆಂಡಿಗೆ ಹೋಗುವವರು ಬೆಚ್ಚಗಿರುವ ಉಡುಪನ್ನು ಹೊಲಿಸಿಕೊಳ್ಳಬೇಕು.
(೪) ಈ ರೈಲುಗಾಡಿಗಳಲ್ಲಿ ಬೆಂಗಳೂರಿಗೆ ಹೋಗುವುದು ಮೊದಲು ಹೊರಡುತ್ತದೆ; ಅರಸೀಕೆರೆಗೂ ಚಾಮರಾಜನಗರಕ್ಕೂ ಹೋಗುವುವು ಆಮೇಲೆ ಹೊರಡುತ್ತವೆ.

ಮೇಲೆ ದೊಡ್ಡ ಅಕ್ಷರದಲ್ಲಿ ಕೊಟ್ಟಿರುವ ಕೃದಂತನಾಮಗಳನ್ನು 'ಚಿಕ್ಕವನು, ಚಿಕ್ಕವಳು, ಚಿಕ್ಕವರು, ಮೊದಲಾದ ಗುಣವಾಚಕಗಳೊಂದಿಗೆ ಹೋಲಿಸಿ.

| | | |
|---|---|---|
| ಹೋಗುವವನು = ಹೋಗುವ+ಅವನು | | ಚಿಕ್ಕವನು = ಚಿಕ್ಕ+ಅವನು |
| ಹೋಗುವವಳು = ಹೋಗುವ+ಅವಳು | | ಚಿಕ್ಕವಳು = ಚಿಕ್ಕ+ಅವಳು |
| ಹೋಗುವವರು = ಹೋಗುವ+ಅವರು | | ಚಿಕ್ಕವರು = ಚಿಕ್ಕ+ಅವರು |
| ಹೋಗುವುದು = ಹೋಗುವ+ಉದು | | ಚಿಕ್ಕದು = ಚಿಕ್ಕ+ಅದು |
| ಹೋಗುವುವು = ಹೋಗುವ+ಉವು | | ಚಿಕ್ಕವು = ಚಿಕ್ಕ+ಅವು |

'ಚಿಕ್ಕ' ಎಂಬುದಕ್ಕೆ ಅವನು, ಅವಳು, ಅವರು, ಅದು, ಅವು ಎಂಬ ಪದಗಳು ಸೇರಿ, ಚಿಕ್ಕವನು ಮೊದಲಾದ ಕಾರಕರೂಪಗಳು ಬಂದಿರುವಂತೆಯೇ 'ಹೋಗುವ' ಎಂಬುದಕ್ಕೆ ಅವನು, ಅವಳು, ಅವರು, ಉದು ಉವು ಎಂಬ ಪದಗಳು ಸೇರಿ ಹೋಗುವವನು ಮೊದಲಾದ ರೂಪಗಳು ಉಂಟಾಗಿವೆ. ಈ ಎರಡು ಕಡೆಗಳಲ್ಲಿಯೂ ಲಿಂಗ ವಚನಗಳನ್ನು ತೋರಿಸುವುದಕ್ಕೆ ಅವನು, ಅವಳು ಮೊದಲಾದುವೇ ಸೇರಿವೆ. (ನಪುಂಸಕ ಲಿಂಗದಲ್ಲಿ, ಗುಣವಾಚಕಕ್ಕೆ ಸೇರುವ ಅದು, ಅವು ಎಂಬ ಪದಗಳಿಗೆ ಬದಲಾಗಿ ಕೃದಂತನಾಮದಲ್ಲಿ ಉದು, ಉವು, ಎಂಬ ಪದಗಳು ಸೇರಿವೆ.)

೨. ಈಗ ಕೆಳಗಿನ ವಾಕ್ಯಗಳನ್ನು ನೋಡಿ:

ಜೂಜಿನಲ್ಲಿ ರಾಜ್ಯವನ್ನು ಕಳೆದುಕೊಂಡು ವನವಾಸಕ್ಕೆ ಹೋಗುವ ಪಾಂಡವರನ್ನೂ, ಅವರ ಹಿಂದೆ ಬಿಚ್ಚಿದ ಮುಡಿಯೊಡನೆ ಹೋಗುವ ದ್ರೌಪದಿಯನ್ನೂ ಹಸ್ತಿನಾವತಿಯ ಜನರು ನೋಡಿ ತುಂಬ ದುಃಖಿಸಿದರು.
ಆಕಾಶದಲ್ಲಿ ಹೋಗುವ ಮೋಡಗಳು ಹತ್ತಿಯ ಸುರಳಿಗಳಂತೆ ಕಾಣಿಸುತ್ತವೆ.

ಇಲ್ಲಿ 'ಹೋಗುವ' ಎಂಬುದು 'ಪಾಂಡವರನ್ನೂ,' 'ದ್ರೌಪದಿಯನ್ನೂ' 'ಮೋಡಗಳು' ಎಂಬ ಪದಗಳಿಗೆ ವಿಶೇಷಣವಾಗಿ ಬಂದಿದೆ. ವಿಶೇಷ್ಯಗಳ ಲಿಂಗ ವಚನ ವಿಭಕ್ತಿಗಳು ಬೇರೆಬೇರೆಯಾಗಿದ್ದರೂ 'ಹೋಗುವ' ಎಂಬುದು ಮಾತ್ರ ಒಂದೇ ರೂಪದಲ್ಲಿದೆ.

೩. 'ಚಿಕ್ಕ' ಎಂಬುದು ವಿಶೇಷಣವಾಗಿ ನಿಂತಾಗ ಅದಕ್ಕೆ ರೂಪಭೇದಗಳಿಲ್ಲವಷ್ಟೆ; ಹಾಗೆಯೇ 'ಹೋಗುವ' ಎಂಬುದೂ ವಿಶೇಷಣವಾಗಿ ನಿಂತಾಗ ಅದಕ್ಕೆ ರೂಪಭೇದಗಳಿರುವುದಿಲ್ಲ. 'ಚಿಕ್ಕ' ಎಂಬುದಕ್ಕೆ 'ಅವನು,' 'ಅವಳು' ಮೊದಲಾದುವುಗಳು ಸೇರಿ ಹೇಗೆ ಕಾರಕರೂಪಗಳಾಗುತ್ತವೆಯೋ ಹಾಗೆಯೇ 'ಹೋಗುವ' ಎಂಬುದಕ್ಕೂ ಸೇರಿ ಕಾರಕರೂಪಗಳಾಗುತ್ತವೆ.

೪. ಹೀಗೆ ಕೃದಂತನಾಮಗಳಲ್ಲೂ ಗುಣವಾಚಕಗಳಲ್ಲಿರುವಂತೆಯೇ ವಿಶೇಷಣರೂಪ ಕಾರಕರೂಪಗಳೆರಡೂ ಉಂಟು.

೫. 'ಹೋಗುವ' ಎಂಬ ರೂಪವನ್ನು ಬಿಡಿಸಿನೋಡೋಣ:

ಹೋಗುವ=ಹೋಗು+ಉವ (ಲೋಪಸಂಧಿ). ಇಲ್ಲಿ ಧಾತುವಿಗೆ ಉವ ಎಂಬ ಪ್ರತ್ಯಯವು ಸೇರಿ ವರ್ತಮಾನ ಭವಿಷ್ಯತ್ಕಾಲಗಳ ಅರ್ಥವನ್ನು ಕೊಡುತ್ತದೆ.

ಇನ್ನೂ ಕೆಲವು ಉದಾಹರಣೆಗಳನ್ನು ನೋಡಿ:

ಹತ್ತರಲ್ಲಿ ನಾಲ್ಕನ್ನು ಕಳೆದರೆ ಉಳಿಯುವ ಸಂಖ್ಯೆ ಎಷ್ಟು? (ಉಳಿ+ಉವ)
ಬೆಳೆಯುವ ಪೈರು ಮೊಳಕೆಯಲ್ಲೇ ಕಾಣುತ್ತದೆ. (ಬೆಳೆ+ಉವ)
ಕೊಡುವ ಕರ್ತ ಬೇರೆ ಇದ್ದಾನೆ. (ಕೊಡು+ಉವ)

ಧಾತುವಿಗೆ – ಉವ ಎಂಬ ಪ್ರತ್ಯಯ ಸೇರಿದರೆ ವರ್ತಮಾನ ಭವಿಷ್ಯತ್ಕಾಲಗಳಲ್ಲಿ ಕೃದಂತನಾಮಗಳ ವಿಶೇಷಣರೂಪಗಳಾಗುತ್ತವೆ; ಈ ವಿಶೇಷಣರೂಪಕ್ಕೆ ಅವನು, ಅವಳು, ಅವರು, ಉದು, ಉವು ಎಂಬ ಪದಗಳು ಸೇರಿದರೆ ಆಯಾ ಲಿಂಗವಚನಗಳನ್ನು ತೋರಿಸುವ ಕಾರಕರೂಪಗಳಾಗುತ್ತವೆ.

೬. ಭೂತಕಾಲವನ್ನೂ ನಿಷೇಧಾರ್ಥವನ್ನೂ ತೋರಿಸುವ ಕೃದಂತನಾಮಗಳೂ ಉಂಟು.

ಉದಾಹರಣೆ.

ಭೂತಕಾಲದಲ್ಲಿ;

ಸೆರೆಮನೆಯಿಂದ ತಪ್ಪಿಸಿಕೊಂಡು ಹೋದವನನ್ನು ಪೋಲೀಸಿನವರು ಹಿಡಿದರಂತೆ. (ಹೋದವನು=ಹೋದ+ಅವನು)
ಹೋದ ವರ್ಷ ನಮ್ಮ ದೇಶದಲ್ಲಿ ಸೂರ್ಯಗ್ರಹಣವೇ ಆಗಲಿಲ್ಲ.

ನಿಷೇಧಾರ್ಥದಲ್ಲಿ :

ಎಂದೆಂದೂ ನಾಟಕಕ್ಕೆ ಹೋಗದವನು ಆ ದಿನ ಸ್ನೇಹಿತರ ಬಲಾತ್ಕಾರಕ್ಕೆ ಸಿಕ್ಕಿ 'ಆಷಾಢಭೂತಿ'ಯನ್ನು ನೋಡಲು ಹೋದೆನು. (ಹೋಗದವನು=ಹೋಗದ+ಅವನು)

ಇದು ಎಷ್ಟು ತೊಳೆದರೂ ಹೋಗದ ಕಱೆ.

೭. ಹೋದ=ಹೋಗು+ದ. ಈ –ದ ಎಂಬ ಪ್ರತ್ಯಯವನ್ನೂ 'ಹೋದನು' ಎಂಬ ಕ್ರಿಯಾಪದದಲ್ಲಿರುವ –ದ ಎಂಬ ಭೂತಕಾಲ ಪ್ರತ್ಯಯದೊಂದಿಗೆ ಹೋಲಿಸಿ : ಎರಡೂ ಒಂದೇ ಆಗಿವೆ, ಅಷ್ಟೇ ಅಲ್ಲ. –ದ ಎಂಬ ಭೂತಕಾಲ ಪ್ರತ್ಯಯವು 'ಹೋಗು' ಧಾತುವಿಗೆ ಸೇರುವಾಗ ಆಗುವ ವ್ಯತ್ಯಾಸವೇ ಇಲ್ಲೂ ಆಗಿದೆ. ಇದರಂತೆಯೇ ಮಾಡು : ಮಾಡಿದ, ಮಾಡಿದವನು ; ನೋ : ನೊಂದ, ನೊಂದವನು ; ನಗು : ನಕ್ಕ, ನಕ್ಕವನು—ಈ ಮೊದಲಾದ ಕೃದಂತನಾಮಗಳನ್ನು ನೋಡಿ.

ಧಾತುವಿಗೆ–ದ ಎಂಬ ಪ್ರತ್ಯಯ ಸೇರಿದರೆ ಭೂತಕಾಲದಲ್ಲಿ ಕೃದಂತನಾಮದ ವಿಶೇಷಣರೂಪವಾಗುತ್ತದೆ. ಈ ವಿಶೇಷಣರೂಪಕ್ಕೆ 'ಅವನು' ಮೊದಲಾದುವು ಸೇರಿದರೆ ಕಾರಕರೂಪಗಳಾಗುತ್ತವೆ.

೮. ಹೋಗದ=ಹೋಗು+ಅದ. ಧಾತುವಿಗೆ –ಅದ ಎಂಬ ಪ್ರತ್ಯಯ ಸೇರಿದರೆ ನಿಷೇಧಾರ್ಥದಲ್ಲಿ ಕೃದಂತನಾಮದ ವಿಶೇಷಣರೂಪವಾಗುತ್ತದೆ. ಈ ವಿಶೇಷಣರೂಪಕ್ಕೆ 'ಅವನು' ಮೊದಲಾದುವು ಸೇರಿದರೆ ಕಾರಕರೂಪಗಳಾಗುತ್ತವೆ.

೯. 'ಹೋಗು' ಧಾತುವಿನಿಂದ ಉಂಟಾಗುವ ಕೃದಂತನಾಮಗಳನ್ನು ಕೆಳಗೆ ಪಟ್ಟಿಯ ರೂಪದಲ್ಲಿ ಕೊಟ್ಟಿದೆ.

ವರ್ತಮಾನ (ಭವಿಷ್ಯತ್) ಕೃದಂತನಾಮ—

ವಿಶೇಷಣರೂಪ : ಹೋಗುವ

ಕಾರಕರೂಪಗಳು :

| | ಏಕವಚನ | ಬಹುವಚನ |
|---|---|---|
| ಪುಲ್ಲಿಂಗ : | ಹೋಗುವವನು | ಹೋಗುವವರು |
| ಸ್ತ್ರೀಲಿಂಗ : | ಹೋಗುವವಳು | |
| ನಪುಂಸಕ ಲಿಂಗ : | ಹೋಗುವುದು | ಹೋಗುವುವು |

ಭೂತ ಕೃದಂತನಾಮ—

ವಿಶೇಷಣರೂಪ : ಹೋದ

ಕಾರಕರೂಪಗಳು :

| | ಏಕವಚನ | ಬಹುವಚನ |
|---|---|---|
| ಪುಲ್ಲಿಂಗ : | ಹೋದವನು | ಹೋಗುವವರು |
| ಸ್ತ್ರೀಲಿಂಗ : | ಹೋದವಳು | |
| ನಪುಂಸಕಲಿಂಗ : | ಹೋದುದು | ಹೋದುವು |

ನಿಷೇಧ ಕೃದಂತನಾಮ—

ವಿಶೇಷಣರೂಪ : ಹೋಗದ

ಕಾರಕರೂಪಗಳು :

| | ಏಕವಚನ | ಬಹುವಚನ |
|---|---|---|
| ಪುಲ್ಲಿಂಗ : | ಹೋಗದವನು | ಹೋಗದವರು |
| ಸ್ತ್ರೀಲಿಂಗ : | ಹೋಗದವಳು | |
| ನಪುಂಸಕಲಿಂಗ : | ಹೋಗದುದು | ಹೋಗದುವು |

ಇದರಂತೆಯೇ ಮಿಕ್ಕ ಧಾತುಗಳಿಂದ ಉಂಟಾಗುವ ಕೃದಂತನಾಮ ಗಳನ್ನೂ ಊಹಿಸಿಕೊಳ್ಳಬಹುದು.

೧೦. ನಪುಂಸಕಲಿಂಗದ ರೂಪಗಳು :

ನಪುಂಸಕ ಏಕವಚನದಲ್ಲಿ ಭೂತಕಾಲದ ಕೃದಂತನಾಮಪ್ರಕೃತಿ ಗಳಿಗೂ ನಿಷೇಧಾರ್ಥದ ಕೃದಂತನಾಮಪ್ರಕೃತಿಗೂ 'ಉದು' ಎಂಬುದಕ್ಕೆ ಬದಲಾಗಿ 'ಅದು' ಎಂಬುದು ಸೇರುವುದೇ ರೂಢಿಯಾಗಿದೆ. ಇದು ಸೇರುವಾಗ ಕೆಲವು ವ್ಯತ್ಯಾಸಗಳೂ ನಡೆಯುತ್ತವೆ. ಕೆಳಗೆ ಕೆಲವು ಉದಾ ಹರಣೆಗಳನ್ನು ಮಾತ್ರ ಕೊಟ್ಟಿದೆ.

ಉದಾಹರಣೆ.

ಭೂತಕಾಲದ ಕೃದಂತನಾಮ :

ನನಗೆ ತಿಳಿದದ್ದನ್ನು ನಿನಗೆ ವಂಚನೆಯಿಲ್ಲದೆ ಹೇಳಿಕೊಡುತ್ತೇನೆ. (ತಿಳಿ+ದ+ಅದು)

ಅವನು ಬೈದದ್ದು ನನ್ನ ಮನಸ್ಸಿಗೇ ಹತ್ತಲಿಲ್ಲ. (ಬೈ+ದ+ಅದು)

ಕಂಡದ್ದನ್ನು ಕಂಡಹಾಗೆ ಹೇಳಿದರೆ ಕೆಂಡದಂಥ ಕೋಪ. (ಕಾಣು+ದ+ಅದು)

ಕೊಟ್ಟದ್ದು ತನಗೆ, ಬಚ್ಚಿಟ್ಟದ್ದು ಪರರಿಗೆ. (ಕೊಡು+ದ+ಅದು) (ಬಚ್ಚಿಡು+ದ+ಅದು)

ನಾನು ಹೇಳಿದ್ದು ನಿನಗೆ ಕೇಳಿಸಿತೆ? (ಹೇಳು+ದ+ಅದು)

ತಾಯಿ ಕಲಿಸಿದ್ದನ್ನು ಮಗಳು ಕಲಿಯುತ್ತಾಳೆ (ಕಲಿಸು+ದ+ಅದು)

ನಿಷೇಧಾರ್ಥದ ಕೃದಂತನಾಮ :

ಈ ರಹಸ್ಯ ಯಾರಿಗೂ ತಿಳಿಯದ್ದು. (ತಿಳಿ+ಅದ+ಅದು)
ರವಿ ಕಾಣದ್ದನ್ನು ಕವಿ ಕಂಡ. (ಕಾಣು+ಅದ+ಅದು)
ಅವನು ನನಗೆ ಹೇಳದ್ದು ಯಾವುದೂ ಇಲ್ಲ. (ಹೇಳು+ಅದ+ಅದು)

ಇವೆಲ್ಲಾ, 'ಅದು' ಎನ್ನುವುದು ಕೆಲವು ಕಡೆ 'ಅದ್ದು' ಎಂದೂ, ಮತ್ತೆ ಕೆಲವು ಕಡೆ 'ದ್ದು' ಎಂದೂ ಆಗಿದೆ.

| ಹೀಗೆಯೇ— | ಭೂತ | ನಿಷೇಧ |
|---|---|---|
| ಕಳೆ | ಕಳೆದದ್ದು | ಕಳೆಯದ್ದು |
| ತಿನ್ನು | ತಿಂದದ್ದು | ತಿನ್ನದ್ದು |
| ಸಾ | ಸತ್ತದ್ದು | ಸಾಯದ್ದು |
| ನಿಲ್ಲು | ನಿಂತದ್ದು | ನಿಲ್ಲದು |
| ಆಗು | ಆದದ್ದು | ಆಗದು |
| ಹೋಗು | ಹೋದದ್ದು | ಹೋಗದ್ದು |
| ಬರು | ಬಂದದ್ದು | ಬಾರದ್ದು |
| ಇರು | ಇದ್ದದ್ದು | ಇರದ್ದು |
| ತರು | ತಂದದ್ದು | ತಾರದ್ದು |
| ಮಾಡ | ಮಾಡಿದ್ದು | ಮಾಡದ್ದು |
| ನೋಡು | ನೋಡಿದ್ದು | ನೋಡದ್ದು |
| ಹೆದರಿಸು | ಹೆದರಿಸಿದ್ದು | ಹೆದರಿಸದ್ದು |
| ರಕ್ಷಿಸು | ರಕ್ಷಿಸಿದ್ದು | ರಕ್ಷಿಸದ್ದು ಇತ್ಯಾದಿ. |

## ೧೧. ಕೃದಂತನಾಮಗಳ ವಿಭಕ್ತಿ ರೂಪಗಳು :

ಗುಣವಾಚಕಗಳಿಗೆ ಯಾವ ಯಾವ ವಿಭಕ್ತಿ-ಪ್ರತ್ಯಯಗಳೂ ಆಗಮಗಳೂ ಸೇರುವವೊ ಅವೇ ಕೃದಂತನಾಮಗಳಿಗೂ ಸೇರುತ್ತವೆ. ಉದಾಹರಣೆಗಾಗಿ, 'ಹೋಗು' ಎಂಬ ಧಾತುವಿನ ಭೂತಕೃದಂತನಾಮದ ವಿಭಕ್ತಿರೂಪಗಳನ್ನು ಕೆಳಗೆ ಕೊಟ್ಟಿದೆ:

| ಪುಂಸ್ತ್ರೀ. | | ನಪುಂ. | |
|---|---|---|---|
| ಹೋದವನು<br>ಹೋದವಳು | ಹೋದವರು | ಹೋದದ್ದು | ಹೋದುವು<br>(ಹೋದುವುಗಳು) |
| ಹೋದವನನ್ನು<br>ಹೋದವಳನ್ನು | ಹೋದವರನ್ನು | ಹೋದದ್ದನ್ನು | ಹೋದುವನ್ನು<br>(ಹೋದುವುಗಳನ್ನು) |
| ಹೋದವನಿಂದ<br>ಹೋದವಳಿಂದ | ಹೋದವರಿಂದ | ಹೋದದ್ದರಿಂದ | (ಹೋದುವುಗಳಿಂದ) |
| ಹೋದವನಿಗೆ<br>ಹೋದವಳಿಗೆ | ಹೋದವರಿಗೆ | ಹೋದದ್ದಕ್ಕೆ | ಹೋದುವಕ್ಕೆ<br>(ಹೋದುವುಗಳಿಗೆ) |
| ಹೋದವನ<br>ಹೋದವಳ | ಹೋದವರ | ಹೋದದ್ದರ | ಹೋದವುಗಳ |
| ಹೋದವನಲ್ಲಿ<br>ಹೋದವಳಲ್ಲಿ | ಹೋದವರಲ್ಲಿ | ಹೋದದ್ದರಲ್ಲಿ | ಹೋದವುಗಳಲ್ಲಿ |

ಮಿಕ್ಕವಕ್ಕೂ ಹೀಗೆಯೆ ರೂಪಗಳನ್ನು ಊಹಿಸಿಕೊಳ್ಳಬಹುದು.

## ಹದಿನೆಂಟನೆಯ ಅಧ್ಯಾಯ.

### ಭಾವನಾಮ

೧. ಭಾವನಾಮಗಳಲ್ಲಿ ಧಾತುಗಳಿಂದ ಹುಟ್ಟತಕ್ಕವುಗಳಿಗೆ ಕೃದಂತ ಭಾವನಾಮಗಳೆಂದೂ, ನಾಮಪ್ರಕೃತಿಗಳಿಂದ ಹುಟ್ಟತಕ್ಕವುಗಳಿಗೆ ತದ್ಧಿತಾಂತ ಭಾವನಾಮಗಳೆಂದೂ ಹೆಸರೆಂಬುದನ್ನು ಹಿಂದೆಯೇ ನೋಡಿದೆವು. ಕೃದಂತಭಾವನಾಮಗಳು ಹೇಗೆ ಹುಟ್ಟುತ್ತವೆಂಬುದನ್ನು ಮೊದಲು ನೋಡೋಣ.

### (ಅ) ಕೃದಂತ ಭಾವನಾಮಗಳು

೨. ಕೃದಂತ ಭಾವನಾಮಗಳು ಧಾತುಗಳಿಂದ ಹಲವು ಬಗೆಗಳಲ್ಲಿ ಸಿದ್ಧವಾಗುತ್ತವೆ.

೩. ಕೆಲವು ಧಾತುಗಳ ನಿಜರೂಪವೇ ಅವುಗಳ ಭಾವನಾಮ ರೂಪವೂ ಆಗುತ್ತದೆ.

ಉದಾಹರಣೆ.

ಸೃಷ್ಟಿ ತಲೆಕೆಳಗಾದರೂ ಹರಿಶ್ಚಂದ್ರನು ಮಾತಿಗೆ ತಪ್ಪುವನೇ?
(ಇಲ್ಲಿ ‘ತಪ್ಪು’ ಎಂಬುದು ಕ್ರಿಯಾಪದವಾಗಿ ಬಂದಿದೆ.)
ಇದೊಂದುಸಲಕ್ಕೆ ನನ್ನ ತಪ್ಪನ್ನು ಕ್ಷಮಿಸಿ.
(ಇಲ್ಲಿ ‘ತಪ್ಪು’ ಭಾವನಾಮ)
ಅರ್ಥವಿಲ್ಲದ ಓದನ್ನು ಓದಿ ಏನು ಪ್ರಯೋಜನ?
(ಈ ಒಂದೇ ವಾಕ್ಯದಲ್ಲಿ ‘ಓದು’ ಎಂಬುದು ಮೊದಲು ಭಾವನಾಮವಾಗಿಯೂ ಬಳಿಕ ಕ್ರಿಯಾಪದವಾಗಿಯೂ ಬಂದಿವೆ.)
ಹೀಗೆಯೇ—ಹುಟ್ಟು, ನುಡಿ, ನಡೆ, ಬೆಳೆ, ಕಟ್ಟು, ಗುದ್ದು, ಬಾಳು, ಬದುಕು, ಆಳು, ನಗು, ಉರಿ, ಈಜು, ಮೊದಲಾದುವು.

೪. ಕೆಡು, ಬಿಡು, ಪಡು, ಮೊದಲಾದ ಕೆಲವು ಧಾತುಗಳ ಆದಿ ಸ್ವರವು ದೀರ್ಘವಾಗಿ ಕೇಡು, ಬೀಡು, ಪಾಡು, ಮೊದಲಾದ ಭಾವನಾಮವಾಗುತ್ತದೆ.

ಉದಾಹರಣೆ.

ಇತರರಿಗೆ ಕೇಡನ್ನು ಬಯಸುವವರು ತಾವೇ ಕೆಡುವರು.
ಅವನ ಪಾಡು ನಾಯಿಯ ಪಾಡಾಗಿದೆ, ಇತ್ಯಾದಿ.

೫. ಬೇರೆ ಬೇರೆ ಧಾತುಗಳಿಗೆ— ಇಕೆ, ಇ—ಗೆ ಮೊದಲಾದ ಬೇರೆ ಬೇರೆ ಪ್ರತ್ಯಯಗಳು ಹತ್ತಿ, ಭಾವನಾಮಗಳಾಗುತ್ತವೆ. ಈ ಪ್ರತ್ಯಯ ಗಳಲ್ಲಿ ಮುಖ್ಯವಾದ ಕೆಲವನ್ನು ಕೆಳಗೆ ಕೊಟ್ಟಿದೆ:

(೧) —ಇಕೆ:

ಉದಾಹರಣೆ.

ಇವೆರಡು ವಸ್ತುಗಳಿಗೂ ಹೋಲಿಕೆಗಿಂತ ವ್ಯತ್ಯಾಸವೇ ಹೆಚ್ಚು. (ಹೋಲು+ಇಕೆ)

ಈ ಗೊಡ್ಡು ಬೆದರಿಕೆಗೆಲ್ಲ ನಾನು ಬೆದರುವವನಲ್ಲ. (ಬೆದರು+ಇಕೆ)

ಹೀಗೆಯೇ—ನಂಬು-ನಂಬಿಕೆ, ಬಾಳು-ಬಾಳಿಕೆ, ಹೊಗಳು-ಹೊಗಳಿಕೆ, ಆಳು -ಆಳಿಕೆ, ಅಂಜು-ಅಂಜಿಕೆ, ನಾಚು-ನಾಚಿಕೆ, ಹೆದರು-ಹೆದರಿಕೆ, ಇತ್ಯಾದಿ.

(೨) —ಇಗೆ.

ಉದಾಹರಣೆ.

ಒಂಬತ್ತು ಘಂಟೆ ಹೊಡೆಯಿತು; ಅಡಿಗೆಗೆ ಹೊತ್ತಾಯಿತು. (ಅಡು+ಇಗೆ)

ನನ್ನ ಒಪ್ಪಿಗೆಯಿಲ್ಲದೆ ಈ ಕೆಲಸಕ್ಕೆ ಹೇಗೆ ಕೈಹಾಕಿದೆ? (ಒಪ್ಪು+ಇಗೆ)

ಹೀಗೆಯೇ—ಉಡು-ಉಡಿಗೆ, ತೊಡು-ತೊಡಿಗೆ, ಮುತ್ತು-ಮುತ್ತಿಗೆ, ತೆರು-ತೆರಿಗೆ, ಏಳು-ಏಳಿಗೆ, ಹೆರು—ಹೆರಿಗೆ, ಇತ್ಯಾದಿ.

(೩) —ಗೆ.

ಉದಾಹರಣೆ.

ಆ ಕಾಡುಕಿಚ್ಚಿನ ಬೇಗೆಯಲ್ಲಿ ಗಿಡಮರಗಳೆಲ್ಲ ಭಸ್ಮವಾದುವು. (ಬೇ+ಗೆ)

ಹೆಣ್ಣುಮಕ್ಕಳು ಹೊಲಿಗೆಯ ಕೆಲಸವನ್ನು ಕಲಿಯಬೇಕು. (ಹೊಲಿ+ಗೆ)

(೪) —ಟ.

ಉದಾಹರಣೆ.

ಸಾಲಗಾರರ ಕಾಟವನ್ನು ತಡೆಯಲಾರದೆ ಅವನು ದೇಶಾಂತರಕ್ಕೆ ಹೋದನು. (ಕಾಡು+ಟ)

ಈ ನೋಟವನ್ನು ನೋಡುವುದಕ್ಕೆ ಎರಡು ಕಣ್ಣು ಸಾಲದು. (ನೋಡು+ಟ)

'ಟ' ಎಂಬ ಪ್ರತ್ಯಯ ಸೇರುವಾಗ ಧಾತುವಿನ ಕೊನೆಯ 'ಡು' ಎಂಬ ಅಕ್ಷರವು ಲೋಪವಾಗುತ್ತದೆ.

ಹೀಗೆಯೇ—ಆಡು-ಆಟ, ಊಡು-ಊಟ, ಮಾಡು-ಮಾಟ, ಕೂಡು-ಕೂಟ, ಹೂಡು-ಹೂಟ. ಇತ್ಯಾದಿ.

(೫) —ಇತ:

ಉದಾಹರಣೆ.

ಚಿಕ್ಕ ತಪ್ಪಿತಕ್ಕೆಲ್ಲ ನನ್ನನ್ನು ದೂರುತ್ತಾರೆ. (ತಪ್ಪು+ಇತ)
ಹೀಗೆಯೇ—ಒಪ್ಪು-ಒಪ್ಪಿತ.

(೬) —ತ :

ಉದಾಹರಣೆ.

ಆ ಹೋರಾಟದಲ್ಲಿ ಅವನು ಈಟಿಯ ತಿವಿತದಿಂದ ಪ್ರಾಣಬಿಟ್ಟನು.
(ತಿವಿ+ತ)
ಮಕ್ಕಳ ಕುಣಿತವನ್ನೂ ಕರುಗಳ ನೆಗೆತವನ್ನೂ ನೋಡಬೇಕು.
(ಕುಣಿ+ತ. ನೆಗೆ+ತ)
ಹೀಗೆಯೇ—ಇರಿ_ಇರಿತ, ಇಳಿ_ಇಳಿತ, ಒಗೆ-ಒಗೆತ, ಕುಡಿ-ಕುಡಿತ, ಎಳೆ-ಎಳೆತ, ಮೆರೆ-ಮೆರೆತ, ಸೆಳೆ-ಸೆಳೆತ, ನೋ-ನೋತ, ಇತ್ಯಾದಿ.

(೭) _ವಳಿಕೆ, _ವಳಿಗೆ, _ವಣಿಗೆ :

ಉದಾಹರಣೆ.

ಈ ಹುಡುಗನಿಗೆ ಇನ್ನೂ ತಿಳಿವಳಿಕೆ ಸಾಲದು.
(ತಿಳಿ+ವಳಿಕೆ)
ಅವರು ಕನ್ನಡ ಭಾಷೆಯ ಬೆಳೆವಳಿಗೆಯನ್ನು ಕುರಿತು ಆರು ಉಪನ್ಯಾಸಗಳನ್ನು ಕೊಟ್ಟರು. (ಬೆಳೆ+ವಳಿಗೆ)
ನಿನ್ನ ಬರೆವಣಿಗೆಯಲ್ಲಿ ಕಕಾರಕ್ಕೂ ತಕಾರಕ್ಕೂ ವ್ಯತ್ಯಾಸವೇ ಗೊತ್ತಾಗುವುದಿಲ್ಲ. (ಬರೆ+ವಣಿಗೆ)
ಹೀಗೆಯೇ—ನಡೆ-ನಡೆವಳಿಕೆ, ಮೆರೆ-ಮೆರೆವಣಿಗೆ,

(೮) _ಅವು :

ಉದಾಹರಣೆ.

ತಮ್ಮ ಬರವನ್ನೇ ನಾನು ಹಾರೈಸುತ್ತಿದ್ದೆ. (ಬರು+ಅವು)
ಹೀಗೆಯೇ—ಕಳು-ಕಳವು, ನಿಲ್ಲು-ನಿಲವು, ಗೆಲ್ಲು-ಗೆಲವು, ಒಲಿ-ಒಲವು, ಇತ್ಯಾದಿ.

ಈ ಪ್ರತ್ಯಯ ಸೇರುವಾಗ ಧಾತುವಿನ ಕೊನೆಯ ಅಕ್ಷರದಲ್ಲಿ ವ್ಯತ್ಯಾಸಗಳಾಗಿರುವುದೂ ಉಂಟು. 'ನಿಲ್ಲು_ನಿಲುವು' ಮೊದಲಾದುವನ್ನು ನೋಡಿ.

(೯) —ವು :

ಉದಾಹರಣೆ.

ಅವನು ಹೊಟ್ಟೆಯ ನೋವಿನಿಂದ ನರಳುತ್ತಿದ್ದಾನೆ. (ನೋ+ವು)
ಈ ಹೊಂಗೆಯ ಮರದ ನೆರಳಿನಲ್ಲಿ ನಮ್ಮ ದಣಿವನ್ನು ಆರಿಸಿಕೊಳ್ಳೋಣ. (ದಣಿ+ವು)
ಹೀಗೆಯೇ— ಸಾ-ಸಾವು, ಮೇ-ಮೇವು, ಅರಿ-ಅರಿವು, ತಿಳಿ-ತಿಳಿವು, ಸುಳಿ-ಸುಳಿವು, ಹಸಿ-ಹಸಿವು, ಇತ್ಯಾದಿ.

(೧೦) —ಅ :

ಉದಾಹರಣೆ.

ಅವನ ಸಾಲ ಸೋಲಕ್ಕೆಲ್ಲ ನಾನೇಕೆ ಹೊಣೆಯಾಗಲಿ ?
(ಸಾಲು+ಅ, ಸೋಲು+ಅ)
ಹೀಗೆಯೇ—ಎಚ್ಚರು-ಎಚ್ಚರ, ಬೇಸರು-ಬೇಸರ.

(೧೧) —ಎ ;

ಉದಾಹರಣೆ.

ಅವನ ಮುಖದಲ್ಲಿ ಮುಗುಳುನಗೆ ಮಿನುಗುತ್ತಿತ್ತು. (ನಗು+ಎ)
ಹೀಗೆಯೇ— ಹೊರು-ಹೊರೆ, ಕೊಲ್ಲು-ಕೊಲೆ.

೬. ಎಕಾರಾಂತ ಧಾತುಗಳಿಗೆ ಕೆಲವು ಪ್ರತ್ಯಯಗಳು ಸೇರುವಾಗ ಧಾತುವಿನ ಕೊನೆಯ ಎಕಾರವು ಅಕಾರವಾಗುತ್ತದೆ.

ಉದಾಹರಣೆ.

—ಕೆ :

ಬೆಳೆಯುವ ಪೈರು ಮೊಳಕೆಯಲ್ಲೇ ಕಾಣುತ್ತದೆ. (ಮೊಳೆ+ಕೆ)
ಹೀಗೆಯೇ— ಬೆರೆ-ಬೆರಕೆ.

—ಗೆ :

ಈ ಪಾತ್ರೆಗೆ ಬೆಸಗೆಯನ್ನು ಚೆನ್ನಾಗಿ ಹಾಕಿಲ್ಲ. (ಬೆಸೆ+ಗೆ)
ಹೀಗೆಯೇ—ಎಸೆ-ಎಸಗೆ, ನಡೆ-ನಡಗೆ, (ನಡೆ+ಇಗೆ=ನಡಿಗೆ ಎಂದೂ ಉಂಟು.)

—ತೆ :

ಈ ಮೆಟ್ಟು ನನ್ನ ಕಾಲಿನ ಅಳತೆಗೆ ಚಿಕ್ಕದು. (ಅಳೆ+ತೆ)
ಹೀಗೆಯೇ— ನಡೆ-ನಡತೆ

— ಪು

ಇಷ್ಟು ಬೇಗ ನನ್ನ ನೆನಪು ನಿಮಗೆ ಇಲ್ಲವಾಯಿತೆ? (ನೆನೆ+ಪು)
ಹೀಗೆಯೇ — ಹೊಳೆ-ಹೊಳಪು, ಒರೆ-ಒಲಪು.

—ವು :

ಈ ಹೊಳೆಯಲ್ಲಿ ಸೆಳವು ಹೆಚ್ಚು. (ಸೆಳೆ+ವು)
ಹೀಗೆಯೇ— ಮರೆ-ಮರವು.

೭. ಮೇಲೆ ಬಂದಿರುವ ನಡೆ, ನಡತೆ, ನಡಗೆ, ನಡಿಗೆ, ನಡೆವಳಿಕೆ— ಎಂಬ ಭಾವನಾಮಗಳನ್ನು ನೋಡಿ ಇವೆಲ್ಲ 'ನಡೆ' ಎಂಬ ಒಂದೇ ಧಾತುವಿನಿಂದ ಬಂದಿವೆ. ಹೀಗೆ ಒಂದೇ ಧಾತುವಿಗೆ ಬೇರೆಬೇರೆ ಪ್ರತ್ಯಯಗಳು ಹತ್ತಿ ಬೇರೆಬೇರೆ ಭಾವನಾಮಗಳುಂಟಾಗುತ್ತವೆ.

ಉದಾಹರಣೆ.

ಒಪ್ಪು-ಒಪ್ಪು, ಒಪ್ಪಿಗೆ ಒಪ್ಪಿತ ; ನೋ-ನೋವು, ನೋತ, ಇತ್ಯಾದಿ.

೮. ಮೇಲೆ ಹೇಳಿದ ಪ್ರತ್ಯಯಗಳನ್ನು ಹತ್ತಿಸಿ ಕೆಲವು ಧಾತುಗಳಿಂದ ಮಾತ್ರ ಭಾವನಾಮಗಳನ್ನು ಸಾಧಿಸಬಹುದು. ಆದರೆ ಎಲ್ಲಾ ಧಾತುಗಳಿಂದಲೂ ಸಾಧಿಸಬಹುದಾದ ಕೆಲವು ಭಾವನಾಮ ರೂಪಗಳುಂಟು.

ಉದಾಹರಣೆ.

ಆಡುವುದು ಸುಲಭ, ಮಾಡುವುದು ಕಷ್ಟ.
ಆ ಕೊಳದಲ್ಲಿ ಮೀನುಗಳು ಈಜುವುದನ್ನು ನೋಡುತ್ತಾ ನಿಂತ ನನಗೆ ಹೊತ್ತು ಹೋದದ್ದು ಗೊತ್ತಾಗಲೇ ಇಲ್ಲ.
ನಿನಗೆ ಬಹುಮಾನ ದೊರೆತದ್ದಕ್ಕೆ ನಮಗೆಲ್ಲ ಸಂತೋಷವಾಯಿತು.
ಆ ಮದುವೆಗೆ ನಾನು ಹೋಗದ್ದರಿಂದ ತುಂಬ ಆಕ್ಷೇಪಣೆಗೆ ಗುರಿಯಾದೆನು.

ಮೇಲೆ ದೊಡ್ಡ ಅಕ್ಷರದಲ್ಲಿ ಕೊಟ್ಟಿರುವ ಪದಗಳನ್ನು ನೋಡಿ. ಇವುಗಳಲ್ಲಿ ಆಡುವುದು, ಮಾಡುವುದು, ಈಜುವುದು—ಈ ಮೂರೂ ವರ್ತಮಾನ(ಭವಿಷ್ಯತ್ಕಾಲಗಳ)ಭಾವನಾಮಗಳು; ಹೋದದ್ದು, ದೊರೆತದ್ದು — ಇವು ಭೂತಕಾಲದ ಭಾವನಾಮಗಳು ; ಹೋಗದ್ದು ಎಂಬುದು ನಿಷೇದಾರ್ಥದ ಭಾವನಾಮ. ಹೀಗೆಯೇ—ಕುಣಿ : ಕುಣಿಯುವುದು, ಕುಣಿದದ್ದು, ಕುಣಿಯದ್ದು ; ಕಲಿಸು : ಕಲಿಸುವುದು, ಕಲಿಸಿದ್ದು, ಕಲಿಸದ್ದು ; ದುಃಖಪಡು : ದುಃಖಪಡುವುದು, ದುಃಖಪಟ್ಟದ್ದು, ದುಃಖಪಡದ್ದು. ಈ ರೀತಿ ಎಲ್ಲ ಬಗೆಯ ಧಾತುಗಳಿಂದಲೂ ವರ್ತಮಾನಕಾಲ, ಭೂತಕಾಲ, ನಿಷೇಧಾರ್ಥಗಳಲ್ಲಿ ಬೇರೆ ಬೇರೆ ಭಾವನಾಮಗಳನ್ನು ಕಲ್ಪಿಸಬಹುದು.

೯. ಕೆಲವರು -ಉವ ಪ್ರತ್ಯಯವನ್ನುಳ್ಳ ಧಾತುರೂಪಕ್ಕೆ -ಇಕೆ ಎಂಬುದನ್ನು ಸೇರಿಸಿ ಹೋಗುವಿಕೆ (ಹೋಗುವ+ಇಕೆ), ಬರುವಿಕೆ (ಬರುವ+ಇಕೆ), ನೋಡುವಿಕೆ (ನೋಡುವ+ಇಕೆ), ಸೇರುವಿಕೆ (ಸೇರು+ಇಕೆ)—ಈ ಬಗೆಯ ಭಾವನಾಮ ರೂಪಗಳನ್ನು ಕಲ್ಪಿಸುತ್ತಾರೆ.

ಉದಾಹರಣೆ.

ಅವನ ಬರುವಿಕೆಯಿಂದ ನನ್ನ ಕೆಲಸಗಳೆಲ್ಲಾ ಕೈಗೂಡಿದುವು.

## (ಆ) ತದ್ಧಿತಾಂತ ಭಾವನಾಮಗಳು

೧೦. (೧) ತನ: ವಸ್ತುವಾಚಕಗಳಿಗೂ ಗುಣವಾಚಕಗಳಿಗೂ ಸಾಮಾನ್ಯವಾಗಿ -ತನ ಎಂಬ ಪ್ರತ್ಯಯ ಸೇರಿ ಭಾವನಾಮಗಳಾಗುತ್ತವೆ.

ಉದಾಹರಣೆ.

ವಸ್ತುವಾಚಕ :

ಆ ಹುಡುಗಿಯ ಜಾಣತನವನ್ನು ಎಲ್ಲರೂ ಮೆಚ್ಚಿದರು.
(ಜಾಣ+ತನ)
ಎದೆಗಾರತನವಿಲ್ಲದಿದ್ದರೆ ಬೇಟೆಗೆ ಹೋಗಬಾರದು.
(ಎದೆಗಾರ+ತನ)

ಹೀಗೆಯೇ— ಶೂರತನ, ಅರಸುತನ, ಹೆಡ್ಡತನ, ಕಳ್ಳತನ, ಹುಚ್ಚುತನ, ಸುಳ್ಳುತನ, ದೊರೆತನ, ಕುಂಟತನ, ಕುರುಡತನ, ಹೆಣ್ಣುತನ, ಗಂಡುತನ, ಇತ್ಯಾದಿ.

ಬಡತನ (ಬಡವ+ತನ). ಗೆಳೆತನ (ಗೆಳೆಯ+ತನ)—ಮೊದಲಾದ ಕಡೆಗಳಲ್ಲಿ ಪ್ರಕೃತಿಯ ಕೊನೆಯ ಅಕ್ಷರವು ಲೋಪವಾಗಿದೆ.

ಗುಣವಾಚಕಕ್ಕೆ :

ನಿನ್ನ ಹಿರಿಯತನವನ್ನು ಸ್ವಲ್ಪ ಹೊತ್ತು ಕಟ್ಟಿರಿಸಿ, ಎಲ್ಲರಿಗೂ ಊಟಕ್ಕೆ ಬಡಿಸು. (ಹಿರಿಯ+ತನ)
ಆತನ ಒಳ್ಳೆಯತನವನ್ನು ಊರಿನವರೆಲ್ಲರೂ ಕೊಂಡಾಡುತ್ತಾರೆ.
(ಒಳ್ಳೆಯ+ತನ)

ಹೀಗೆಯೇ—ಚಿಕ್ಕತನ, ದೊಡ್ಡತನ, ಹೊಸತನ, ಕಿರಿಯತನ, ಇತ್ಯಾದಿ.

-ತನ ಪ್ರತ್ಯಯವು ಗುಣವಾಚಕಗಳ ವಿಶೇಷಣ ರೂಪಕ್ಕೆ ಹತ್ತುತ್ತದೆ ಎಂಬುದು ಮೇಲಿನ ರೂಪುಗಳಿಂದ ಗೊತ್ತಾಗುತ್ತದೆ.

(೨) ಇಕೆ: ಜಾತಿ, ಕಸಬು, ಗುಣ ಮೊದಲಾದುವನ್ನು ತಿಳಿಸುವ ಕೆಲವು ವಸ್ತುವಾಚಕಗಳಿಗೆ -ಇಕೆ ಎಂಬ ಪ್ರತ್ಯಯ ಸೇರಿ ಭಾವನಾಮಗಳಾಗುತ್ತವೆ.

ಉದಾಹರಣೆ.

ನಿನ್ನ ತಳವಾರಿಕೆಯಲ್ಲಿ ಒಂದು ಕಳ್ಳತನವೂ ಆಗದಂತೆ ನೋಡಿಕೋ.
(ತಳವಾರ+ಇಕೆ)
ಹೀಗೆಯೇ—ಬ್ರಾಹ್ಮಣಿಕೆ, ಗೌಡಿಕೆ, ಬುದ್ಧಿವಂತಿಕೆ, ದುಂಡುಗಾರಿಕೆ,
ಇತ್ಯಾದಿ.

(೩)—ಉ: ಕುರುಡ, ಕುಂಟ ಮೊದಲಾದ ಕೆಲವು ವಸ್ತು ವಾಚಕಗಳಿಗೆ —ಉ ಎಂಬ ಪ್ರತ್ಯಯ ಸೇರುತ್ತದೆ.

ಉದಾಹರಣೆ.

ಆ ಗೋಸಾಯಿ ಯಾವುದೋ ಮೂಲಿಕೆಯ ರಸವನ್ನು ಹಿಂಡಿ ಅವನ
ಕುರುಡನ್ನು ವಾಸಿಮಾಡಿದನು. (ಕುರುಡ+ಉ)
ನಿನ್ನ ಕಾಲಿನ ಕುಂಟು ಎಷ್ಟು ದಿನಗಳಿಂದ ಇದೆ? (ಕುಂಟ+ಉ)
ಹೀಗೆಯೇ—ಹೆಡ್ಡ-ಹೆಡ್ಡು, ಕಿವುಡ-ಕಿವುಡು, ಡೊಂಕ-ಡೊಂಕು, ಇತ್ಯಾದಿ.

೧೧. ಗುಣವಾಚಕಗಳಿಗೆ —ಪು ಎಂಬ ಪ್ರತ್ಯಯ ಸೇರಿ ಆದ 'ಬಿಳುಪು, ಕೆಂಪು, ಕಪ್ಪು, ಇಂಪು, ತಂಪು, ನುಣುಪು, ತೆಳುವು' —ಮೊದಲಾದ ಹಲವು ತದ್ಧಿತಾಂತ ಭಾವನಾಮಗಳು ಬಳಕೆಯಲ್ಲಿವೆ. ಇವುಗಳ ನಿಷ್ಪತ್ತಿಯನ್ನು ದೊಡ್ಡ ವ್ಯಾಕರಣಗಳಿಂದ ತಿಳಿದುಕೊಳ್ಳಬೇಕು.

---

## ಹತ್ತೊಂಬತ್ತನೆಯ ಅಧ್ಯಾಯ

### ತದ್ಧಿತಾಂತನಾಮ

ನಾಮಪ್ರಕೃತಿಗಳಿಗೆ ಬೇರೆ ಬೇರೆ ಅರ್ಥಗಳಲ್ಲಿ ಬೇರೆ ಬೇರೆ ಪ್ರತ್ಯಯಗಳು ಸೇರಿ ತದ್ಧಿತಾಂತನಾಮಗಳಾಗುತ್ತವೆ. ಈ ಪ್ರತ್ಯಯಗಳಲ್ಲಿ ಮುಖ್ಯವಾದ ಕೆಲವನ್ನು ಕೆಳಗೆ ಕೊಟ್ಟಿದೆ.

೧. –ಇಗ ಮೊದಲಾದ ಪ್ರತ್ಯಯಗಳು :

(೧) ಇಗ :

ಕನ್ನಡವನ್ನು ಬಲ್ಲವನು (ಅಥವಾ ಆಡುವವನು) = ಕನ್ನಡಿಗ.
(= ಕನ್ನಡ + ಇಗ)
ಲೆಕ್ಕವನ್ನು ಬಲ್ಲವನು = ಲೆಕ್ಕಿಗ. (= ಲೆಕ್ಕ + ಇಗ)
ಕೇಡನ್ನು ಮಾಡುವವನು–ಕೇಡಿಗ. (= ಕೇಡು + ಇಗ)
ಗಂಧ ಮೊದಲಾದುವನ್ನು ಮಾರುವವನು = ಗಂಧಿಗ
(= ಗಂಧ + ಇಗ) ಇತ್ಯಾದಿ.

ಉದಾಹರಣೆ.

ಕನ್ನಡಿಗರ ಸಂಖ್ಯೆ ಈಗ ಸುಮಾರು ಒಂದೂಕಾಲು ಕೋಟಿ.
ಗಂಧಿಗರ ಅಂಗಡಿಗೆ ಹೋಗಿ ಕಸ್ತೂರಿಯನ್ನು ಕೊಂಡು
ಕೊಂಡು ಬಾ.

(೨) –ಆಡಿಗ :

ಹೂವನ್ನು ಮಾರುವವನು = ಹೂವಾಡಿಗ. (= ಹೂ + ಆಡಿಗ)
ಹಾವನ್ನು ಆಡಿಸುವವನು = ಹಾವಾಡಿಗ. (= ಹಾವು + ಆಡಿಗ)

ಉದಾಹರಣೆ.

ಹೂವಾಡಿಗನ ಹತ್ತಿರ ಜಾಜಿಯ ಹೂವು ಇರಲಿಲ್ಲ.

(೩) –ಕಾರ :

ಕೋಲನ್ನು ಹಿಡಿಯುವ ವೃತ್ತಿಯವನು = ಕೋಲುಕಾರ
(= ಕೋಲು + ಕಾರ)
ಓಲೆಯನ್ನು ತರುವ ವೃತ್ತಿಯವನು = ಓಲೆಕಾರ
(= ಓಲೆ + ಕಾರ)

ಉದಾಹರಣೆ.

ಒಂದು ಊರಿನಲ್ಲಿ ರಾಜ, ಮಂತ್ರಿ, ಕೋಲುಕಾರ, ಕಳ್ಳ—ಇವರೆಲ್ಲರೂ ಇದ್ದರು.

(೫)—ಕೋರ :

ಚಾಡಿಯನ್ನು ಹೇಳುವವನು = ಚಾಡಿಕೋರ
ಲಂಚವನ್ನು ತೆಗೆದುಕೊಳ್ಳುವವನು = ಲಂಚಕೋರ

ಉದಾಹರಣೆ.

ಚಾಡಿಕೋರರ ಮಾತನ್ನು ಕೇಳಬಾರದು.

(೬) —ಗಾರ :

ಬಳೆಯನ್ನು ಮಾರುವವನು = ಬಳೆಗಾರ
ಬೇಟೆಯನ್ನು ಆಡುವವನು = ಬೇಟೆಗಾರ
ಮೋಸವನ್ನು ಮಾಡುವವನು = ಮೋಸಗಾರ
ಪಾಲನ್ನು ಉಳ್ಳವನು = ಪಾಲುಗಾರ

ಹೀಗೆಯೇ—ಬಲಗಾರ, ಛಲಗಾರ, ಸಾಲಗಾರ, ಎದೆಗಾರ, ಕೊಲೆಗಾರ, ಇತ್ಯಾದಿ.

ಉದಾಹರಣೆ.

ಪಾಲುಗಾರರೆಲ್ಲ ಸಭೆಸೇರಿ ಅಂಗಡಿಯನ್ನು ಮುಚ್ಚಬೇಕೆಂದು ನಿರ್ಧರಿಸಿದರು.

(೭) —ವಂತ :

ಬುದ್ಧಿಯನ್ನು ಉಳ್ಳವನು = ಬುದ್ಧಿವಂತ
ಹಣವನ್ನು ಉಳ್ಳವನು = ಹಣವಂತ

ಹೀಗೆಯೇ—ಸಿರಿವಂತ, ಗುಣವಂತ, ರೂಪವಂತ, ಇತ್ಯಾದಿ.

ಉದಾಹರಣೆ.

ಬುದ್ಧಿವಂತರು ಎಂಥ ಕಷ್ಟಕ್ಕೆ ಸಿಕ್ಕಿದರೂ ಪಾರಾಗುತ್ತಾರೆ.

(೮) —ವಾಳ :

ಮಡಿಯನ್ನು ಮಾಡುವವನು = ಮಡಿವಾಳ

ಉದಾಹರಣೆ.

ಮಡಿವಾಳ ಮಾಚಯ್ಯನು ಯಾರೆಂದು ನೀನು ಕೇಳಿಲ್ಲವೆ ?

೨. ಸ್ತ್ರೀವಾಚಕ ಪ್ರತ್ಯಯಗಳು :

—ಇತಿ, —ಇತ್ತಿ, —ಗಿತ್ತಿ, —ಎ, —ಇ ಮೊದಲಾದ ಸ್ತ್ರೀವಾಚಕ ಪ್ರತ್ಯಯಗಳು ಸೇರಿ ಆಗತಕ್ಕ 'ಬ್ರಾಹ್ಮಣಿತಿ, ಒಕ್ಕಲಿಗಿತ್ತಿ, ಅಗಸಗಿತ್ತಿ, ಚದುರೆ, ಕುರುಡಿ' ಮೊದಲಾದ ಶಬ್ದಗಳೆಲ್ಲವೂ ತದ್ಧಿತಾಂತ ನಾಮಗಳೇ. ಇವುಗಳ ವಿಚಾರವನ್ನು ಹಿಂದೆಯೇ ತಿಳಿಸಿದೆ.

೩. — ಅನೆಯ .

(೧) –ಅನೆಯ ಎಂಬ ಪ್ರತ್ಯಯವು ಉಕಾರಾಂತವಾದ ಸಂಖ್ಯಾ ವಾಚಕಗಳ ಮೇಲೂ ಅಷ್ಟು, ಇಷ್ಟು, ಎಷ್ಟು, ಎಂಬುವುಗಳ ಮೇಲೂ ಸೇರಿ ಅನುಕ್ರಮವನ್ನು ತಿಳಿಸುತ್ತದೆ.

ಉದಾಹರಣೆ.

ಜೂಜಿನಲ್ಲಿ ಇದು ಎರಡನೆಯ ಕುದುರೆ. (ಎರಡು + ಅನೆಯ)
ಪರೀಕ್ಷೆಯಲ್ಲಿ ಐದನೆಯ ಸ್ಥಾನವು ದೊರೆಯದೆ ಆರನೆಯ ಸ್ಥಾನವು ದೊರೆತದ್ದರಿಂದ ನನಗೆ ವಿದ್ಯಾರ್ಥಿವೇತನವು ತಪ್ಪಿಹೋಯಿತು. (ಐದು + ಅನೆಯ, ಆರು + ಅನೆಯ)
ನಿಮ್ಮ ತಂದೆಗೆ ನೀನು ಎಷ್ಟನೆಯ ಮಗ? (ಎಷ್ಟು + ಅನೆಯ)
ಹೀಗೆಯೇ—ಒಂದನೆಯ, ಮೂರನೆಯ, ಹತ್ತನೆಯ, ಐವತ್ತನೆಯ, ನೂರನೆಯ, ಅಷ್ಟನೆಯ, ಇಷ್ಟನೆಯ, ಇತ್ಯಾದಿ.

(೨) ‘ಮೊದಲು’ ಎಂಬುದಕ್ಕೂ –ಅನೆಯ ಪ್ರತ್ಯವು ಸೇರುತ್ತದೆ.

ಉದಾಹರಣೆ.

ಈ ಪಟ್ಟಿಯಲ್ಲಿ ಮೊದಲನೆಯ ಹೆಸರೇ ನಿನ್ನದು. (ಮೊದಲು + ಅನೆಯ)

(೩) –ಅನೆಯ ಪ್ರತ್ಯಯ ಸೇರಿ ಆಗುವ ‘ಒಂದನೆಯ, ಎರಡನೆಯ, ಅಷ್ಟನೆಯ, ಎಷ್ಟನೆಯ’ ಮೊದಲಾದುವುಗಳೆಲ್ಲ ವಿಶೇಷಣ ರೂಪಗಳು. ಗುಣವಾಚಕಗಳಿಗೆ ಸೇರುವಂತೆ ಇವಕ್ಕೂ ಅವನು, ಅವಳು, ಅವರು, ಅದು, ಅವು ಎಂಬ ಶಬ್ದಗಳು ಸೇರಿದರೆ ಲಿಂಗವಚನಗಳನ್ನುಳ್ಳ ‘ಒಂದನೆಯವನು, ಒಂದನೆಯವಳು’ ಮೊದಲಾದ ರೂಪಗಳಾಗುತ್ತವೆ.

ಉದಾಹರಣೆ.

ಈ ಸಲ ಓಡಿದ್ದರಲ್ಲಿ ನಾನು ಒಂದನೆಯವನು ; ಲಕ್ಷ್ಮಿ ಎರಡನೆಯವಳು.
ಪರೀಕ್ಷೆಯಲ್ಲಿ ಇವರಿಬ್ಬರಿಗೂ ನಂಬರು ಸಮನಾಗಿ ಬಂದಿತು ; ಆದಕಾರಣ ಇಬ್ಬರೂ ನಾಲ್ಕನೆಯವರಾಗಿದ್ದಾರೆ.
ನಿನ್ನ ಕೊಠಡಿ ಇಷ್ಟನೆಯದೆಂದು ನನಗೆ ಹೇಳಿದರೆ, ನಾಳೆಯ ಬೆಳಗ್ಗೆ ನಾನೇ ನಿನ್ನನ್ನು ನೋಡಲು ಬರುತ್ತೇನೆ.

೪. ಅವನು, ಅವಳು, ಅವರು, ಅದು, ಅವು ಎಂಬ ಶಬ್ದಗಳು ಷಷ್ಠೀ ವಿಭಕ್ತಿಯ ಪದಗಳ ಮೇಲೆ ಸೇರಿ ಹೊಸ ನಾಮಪ್ರಕೃತಿಗಳಾಗುತ್ತವೆ.

ಉದಾಹರಣೆ.

ಈ ಹುಡುಗಿ ಇನ್ನುಮೇಲೆ ನಿಮ್ಮವಳು ; ನಮ್ಮವಳಲ್ಲ.
ಊರಿನವರಿಗೆ ಮುಂದೇನು ಮಾಡಬೇಕೆಂದು ತೋರದೆ ಹೋಯಿತು.
ಈ ಅಂಗಿ ಕೃಷ್ಣನದು ; ಈ ಪಂಚೆಗಳು ಶ್ಯಾಮನವು.
ಮೇಲಿನವರನ್ನು ಕೆಳಕ್ಕೂ ಕೆಳಗಿನವರನ್ನು ಹೊರಕ್ಕೂ ತಳ್ಳಿದರು.

## ಇಪ್ಪತ್ತನೆಯ ಅಧ್ಯಾಯ

### ಸಮಾಸ

೧. ಎರಡು ಅಥವಾ ಅನೇಕ ಪದಗಳು ಒಟ್ಟುಗೂಡಿ ಒಂದು ಶಬ್ದವಾಗುವುದು ಸಮಾಸವೆಂದು ಹಿಂದೆ ನೋಡಿದೆವು. ವಾಕ್ಯದಲ್ಲಿ ಬೇರೆ ಬೇರೆಯಾಗಿ ನಿಲ್ಲತಕ್ಕ ಪದಗಳು ಹೀಗೆ ಒಂದುಗೂಡಿ ಸಮಾಸವಾಗಬೇಕಾದರೆ ಅವುಗಳಿಗೆ ಅರ್ಥದಲ್ಲಿ ಹತ್ತಿರದ ಸಂಬಂಧವಿರಬೇಕು. ಹಿಂದೆ ನಾವು ನೋಡಿದ 'ಕಾಲುಬಳೆ,' 'ಕಲ್ಲಿದ್ದಲು,' 'ಕೆರೆ ಕಟ್ಟೆ ಬಾವಿಗಳು' ಎಂಬ ಸಮಾಸಗಳನ್ನು ಮತ್ತೆ ಪರಿಶೀಲಿಸೋಣ.

ಕಾಲುಬಳೆ=ಕಾಲಿನ ಬಳೆ. ಕಾಲಿಗೂ ಬಳೆಗೂ ಇಲ್ಲಿ ಸ್ಪರ್ಶ ಸಂಬಂಧವಿದೆ. 'ಕಾಲಿನ' ಎಂಬುದರಲ್ಲಿರುವ ಷಷ್ಠೀ ವಿಭಕ್ತಿ ಪ್ರತ್ಯಯವು ಈ ಸಂಬಂಧವನ್ನು ತೋರಿಸುತ್ತದೆ. 'ಕಾಲು ಬಳೆ' ಎಂದು ಇವೆರಡು ಪದಗಳನ್ನೂ ಒಂದುಗೂಡಿಸಿದಾಗ ವಿಭಕ್ತಿ ಪ್ರತ್ಯಯವು ಬಿಟ್ಟುಹೋಗಿದ್ದರೂ, ಎರಡಕ್ಕೂ ಇರುವ ಸಂಬಂಧವು ಸ್ಪಷ್ಟವಾಗಿರುವುದರಿಂದ ನಮ್ಮ ಮನಸ್ಸಿಗೆ ಕೂಡಲೆ ಹೊಳೆಯುತ್ತದೆ.

ಕಲ್ಲಿದ್ದಲು=ಕಲ್ಲಿನಂತೆ ಇರುವ ಇದ್ದಲು. ಕಲ್ಲಿದ್ದಲು ಕಲ್ಲಿನಂತೆ ಗಟ್ಟಿಯಾಗಿರುವ ಒಂದು ಜಾತಿಯ ಇದ್ದಲು. ಹೀಗೆ ಸಮಾಸದಲ್ಲಿ ಸೇರಿರುವ ಕಲ್ಲು, ಇದ್ದಲು ಎಂಬ ಎರಡಕ್ಕೂ ಹೋಲಿಕೆಯ ಸಂಬಂಧವಿದೆ. ಕಲ್ಲಿದ್ದಲು ಎಂದಕೂಡಲೇ ಆ ಸಂಬಂಧವು ನಮ್ಮ ಮನಸ್ಸಿಗೆ ಹೊಳೆಯುತ್ತದೆ.

ಕೆರೆ ಕಟ್ಟೆ ಬಾವಿಗಳು=ಕೆರೆಗಳೂ ಕಟ್ಟೆಗಳೂ ಬಾವಿಗಳೂ. ಕೆರೆ, ಕಟ್ಟೆ, ಬಾವಿ ಇವೆಲ್ಲ ಬೇರೆ ಬೇರೆ ವಸ್ತುಗಳಾಗಿದ್ದರೂ ಇವನ್ನೆಲ್ಲಾ ಇಲ್ಲಿ ಒಂದು ಗುಂಪಾಗಿ ಭಾವಿಸಿ ಅಷ್ಟಕ್ಕೂ ಅನ್ವಯಿಸುವ ಮಾತನ್ನು ಆಡುತ್ತಾ ಇದ್ದೇವೆ. ಆದಕಾರಣ, ಅವುಗಳ ಹೆಸರನ್ನೆಲ್ಲಾ ಕೂಡಿಸಿ ಒಂದು ಸಮಾಸ ಪದವಾಗಿ ಮಾಡಿದೆ.

೨. ಹೀಗೆ, ಒಂದುಗೂಡಿ ಸಮಾಸವಾಗಿ ಸೇರತಕ್ಕ ಪದಗಳಿಗೆ ಅರ್ಥದಲ್ಲಿ ಹತ್ತಿರದ ಸಂಬಂಧವಿರುತ್ತದೆ. ಆದ್ದರಿಂದ ಆ ಸಂಬಂಧವನ್ನು ಸಾಮಾನ್ಯವಾಗಿ ತೋರಿಸುವ ಪ್ರತ್ಯಯ ಮೊದಲಾದುವುಗಳು ಸಮಾಸದಲ್ಲಿ ಬಿಟ್ಟುಹೋಗಿದ್ದರೂ ಸಮಾಸದ ಅರ್ಥವನ್ನು ತಿಳಿದುಕೊಳ್ಳುವುದಕ್ಕೆ ನಮಗೆ ತೊಂದರೆಯಾಗುವುದಿಲ್ಲ.

೩. ಇದಲ್ಲದೆ, ಸಮಾಸದಲ್ಲಿ ಸೇರುವ ಪದಗಳ ನಡುವೆ ಯಾವ ಪ್ರತ್ಯಯಗಳಾಗಲಿ ವಿವರಣೆಯ ಮಾತುಗಳಾಗಲಿ ಇಲ್ಲದೆ ಅವು ಪ್ರಕೃತಿ ರೂಪದಲ್ಲಿ ಸೇರುವುದರಿಂದ ಸಮಾಸಪದವು ಬಿಕ್ಕಟ್ಟಾಗಿರುತ್ತದೆ. 'ಕಾಲಿನ

ಬಳೆ,' ಕಲ್ಲಿನಂತಿರುವ ಇದ್ದಲು' ಎನ್ನುವುದಕ್ಕಿಂತ 'ಕಾಲುಬಳೆ,' 'ಕಲ್ಲಿದ್ದಲು' ಎನ್ನುವುದರಲ್ಲಿ ಬಿಗಿ ಹೆಚ್ಚು.

೪. ಕೆಲವು ಸಂದರ್ಭಗಳಲ್ಲಿ ಹೊರತು, ಎರಡೆರಡು ಪದಗಳು ಸೇರಿ ಸಮಾಸವಾಗುವುದೇ ರೂಢಿ. ಹೀಗೆ ಸೇರುವ ಪದಗಳಲ್ಲಿ ಮೊದಲನೆಯದನ್ನು 'ಪೂರ್ವಪದ'ವೆಂದೂ, ಅದರ ಮುಂದಿನದನ್ನು 'ಉತ್ತರಪದ'ವೆಂದೂ ಕರೆಯುತ್ತಾರೆ. ಸಮಾಸದ ಅರ್ಥವನ್ನು ಬಿಡಿಸಿ ಹೇಳುವ ಮಾತುಗಳ ಗುಂಪಿಗೆ 'ವಿಗ್ರಹವಾಕ್ಯ' ವೆಂದು ಹೆಸರು.

ಉದಾಹರಣೆ.

| ವಿಗ್ರಹವಾಕ್ಯ | | ಪೂರ್ವಪದ | | ಉತ್ತರಪದ | | ಸಮಾಸ |
|---|---|---|---|---|---|---|
| ಕಾಲಿನ ಬಳೆ | = | ಕಾಲು | + | ಬಳೆ | = | ಕಾಲುಬಳೆ |
| ಕಲ್ಲಿನಂತಿರುವ ಇದ್ದಲು | = | ಕಲ್ಲು | + | ಇದ್ದಲು | = | ಕಲ್ಲಿದ್ದಲು |

## ೧. ತತ್ಪುರುಷಸಮಾಸ

೫. ಸಮಾಸಗಳನ್ನು ಅರ್ಥಕ್ಕೆ ಅನುಸಾರವಾಗಿ ಕೆಲವು ಗುಂಪುಗಳಾಗಿ ವಿಂಗಡಿಸುತ್ತಾರೆ. ಕೆಳಗಿನ ಉದಾಹರಣೆಗಳನ್ನು ನೋಡಿ:

ಬೇಟೆಗಾರನು ಬಿಟ್ಟ ಬಾಣವು ಕಾಡುಹಂದಿಗೆ ತಾಗಲೇ ಇಲ್ಲ

ಹಲ್ಲುನೋವನ್ನು ಸಹಿಸುವುದು ಕಷ್ಟ.

ಕಾಡುಹಂದಿ=ಕಾಡಿನ ಹಂದಿ: ಹಲ್ಲುನೋವು=ಹಲ್ಲಿನಲ್ಲಿ ನೋವು. ಈ ಎರಡು ಸಮಾಸಗಳಲ್ಲೂ, ಉತ್ತರಪದಗಳಾದ ಹಂದಿ, ನೋವು ಇವನ್ನು ಮುಖ್ಯವಾಗಿ ಕುರಿತು ಮಾತಾಡುತ್ತಿದ್ದೇವೆ. ಎಲ್ಲಿಯ ಹಂದಿ ಎಂಬುದನ್ನು ತಿಳಿಸುವುದಕ್ಕೋಸ್ಕರ 'ಕಾಡು' ಎಂಬುದು ಹಿಂದೆ ಸೇರಿದೆ; ಎಲ್ಲಿ ನೋವು ಎಂಬ ಪ್ರಶ್ನೆಗೆ ಉತ್ತರವಾಗಿ 'ಹಲ್ಲು' ಎಂಬುದು ಬಂದು ಸೇರಿದೆ.

ಹೀಗೆ ಉತ್ತರಪದದ ಅರ್ಥವನ್ನು ಮುಖ್ಯವಾಗಿ ಉಳ್ಳ ಸಮಾಸಕ್ಕೆ **ತತ್ಪುರುಷ** ಸಮಾಸವೆಂದು ಹೆಸರು.

೬. ತತ್ಪುರುಷಕ್ಕೆ ಇನ್ನು ಕೆಲವು ಉದಾಹರಣೆಗಳು:

| | | |
|---|---|---|
| ಮರದ ಕಾಲು | = | ಮರಗಾಲು |
| ಸಂಜೆಯ ಕೆಂಪು | = | ಸಂಜೆಗೆಂಪು |
| ಮಳೆಯ ಕಾಲ | = | ಮಳೆಗಾಲ |
| ಬೆಟ್ಟದ ತಾವರೆ | = | ಬೆಟ್ಟದಾವರೆ |
| ಕೈಯ ತಪ್ಪು | = | ಕೈತಪ್ಪು |
| ಕಲ್ಲಿನ ಮಂಟಪ | = | ಕಲ್ಲುಮಂಟಪ |
| ಕಣ್ಣಿನಲ್ಲಿ ಉರಿ | = | ಕಣ್ಣುರಿ |
| ಬಿಸಿಲಿನಲ್ಲಿ ಕೋಲು | = | ಬಿಸಿಲುಕೋಲು |

ಹಗಲನಲ್ಲಿ ಕನಸು = ಹಗಲುಗನಸು
ತಲೆಯಲ್ಲಿ ನೋವು = ತಲೆನೋವು
ಕಣ್ಣಿನಲ್ಲಿ ಸನ್ನೆ = ಕಣ್ಣುಸನ್ನೆ.

ಇತ್ಯಾದಿ.

ಮೇಲೆ ಕೊಟ್ಟಿರುವ ವಿಗ್ರಹವಾಕ್ಯಗಳನ್ನು ನೋಡಿ. ಪೂರ್ವಪದವು ಷಷ್ಠೀ ವಿಭಕ್ತಿಯಲ್ಲೋ ಸಪ್ತಮೀ ವಿಭಕ್ತಿಯಲ್ಲೋ ಇದೆ. ಕನ್ನಡದ ತತ್ಪುರುಷ ಸಮಾಸ ಪದಗಳಲ್ಲಿ ಹೀಗಿರುವುದೇ ಹೆಚ್ಚು.

೭. ಮೇಲಿನ ಸಂಜೆಗೆಂಪು, ಬೆಟ್ಟದಾವರೆ ಎಂಬ ಸಮಾಸಗಳನ್ನು ನೋಡಿ. ಸಂಜೆ+ಕೆಂಪು=ಸಂಜೆಗೆಂಪು; ಬೆಟ್ಟ+ತಾವರೆ=ಬೆಟ್ಟದಾವರೆ. ಇಲ್ಲಿ ಉತ್ತರಪದದ ಆದಿಯ ಕಕಾರ ತಕಾರಗಳಿಗೆ ಕ್ರಮವಾಗಿ ಗಕಾರ ದಕಾರಗಳು ಸಮಾಸದಲ್ಲಿ ಆದೇಶವಾಗಿ ಬಂದಿವೆ. ಹೀಗೆ ಸಮಾಸದಲ್ಲಿ ಆದೇಶಸಂಧಿಯಾಗುವುದೆಂದು ಐದನೆಯ ಅಧ್ಯಾಯದಲ್ಲಿ ಓದಿದ್ದನ್ನು ಜ್ಞಾಪಿಸಿಕೊಳ್ಳಿ.

೮. ಈ ಆದೇಶಸಂಧಿ ಎಲ್ಲ ಕಡೆಗಳಲ್ಲೂ ನಡೆಯುವುದಿಲ್ಲ. ಉದಾಹರಣೆಗೆ— ಬಿಸಿಲು+ಕೋಲು=ಬಿಸಿಲುಕೋಲು, ಕೈ+ತಪ್ಪು=ಕೈತಪ್ಪು —ಈ ಸಮಾಸಗಳನ್ನು ನೋಡಿ.

೯. ಕೆಲವು ಕಡೆಗಳಲ್ಲಿ ಪೂರ್ವಪದದ ವಿಭಕ್ತಿಪ್ರತ್ಯಯವು ಲೋಪವಾಗದೆ ಸಮಾಸವಾಗುವುದೂ ಉಂಟು.

ಉದಾಹರಣೆ.

ಮಾವಿನ ಮರ = ಮಾವಿನಮರ
ಬಾಳೆಯ ಹಣ್ಣು = ಬಾಳೆಯಹಣ್ಣು

### ೨. ಕರ್ಮಧಾರಯ ಸಮಾಸ

೧೦. ನಾವು ಓದುತ್ತಿರುವುದು ಹೊಸಗನ್ನಡದ ವ್ಯಾಕರಣ.
ಕರುವಿನ ಕೊರಳಿಗೆ ಕಿರುಗೆಜ್ಜೆಯ ಸರವನ್ನು ಕಟ್ಟಿದ್ದಾರೆ.
ಅವರು ಉರಿಬೇಸಿಗೆಯಲ್ಲಿ ಕಾಶಿಯಾತ್ರೆಗೆ ಹೊರಟರು

ಹೊಸ+ಕನ್ನಡ=ಹೊಸಗನ್ನಡ, ಕಿರಿಯ+ಗೆಜ್ಜೆ=ಕಿರುಗೆಜ್ಜೆ, ಉರಿಯುವ+ಬೇಸಗೆ=ಉರಿಬೇಸಗೆ, ಈ ಸಮಾಸಗಳಲ್ಲಿ ಪೂರ್ವಪದಗಳಾಗಿರುವುವೆಲ್ಲ ವಿಶೇಷಣಗಳು. ಹೊಸ, ಕಿರಿಯ ಎಂಬುವು ಗುಣವಾಚಕಗಳು; ಉರಿಯುವ ಎಂಬುದು ಕೃದಂತನಾಮ. ಇವುಗಳ ವಿಶೇಷ್ಯಗಳಾದ ಕನ್ನಡ, ಗೆಜ್ಜೆ, ಬೇಸಗೆ ಎಂಬುವು ಉತ್ತರಪದಗಳಾಗಿ ನಿಂತಿವೆ; ಇಲ್ಲಿ ಈ ವಿಶೇಷ್ಯಗಳ ಅರ್ಥವೇ ಮುಖ್ಯ.

ಹೀಗೆ ಉತ್ತರಪದದ ಅರ್ಥವು ಮುಖ್ಯವಾದದ್ದು, ವಿಶೇಷಣವಿಶೇಷ್ಯಗಳಿಗೆ ಸಮಾಸವಾದರೆ **ಕರ್ಮಧಾರಯ**ವೆಂದು ಹೆಸರು.

೧೧. ಮೇಲೆ ಸಮಾಸದಲ್ಲಿ 'ಕಿರಿಯ' ಎಂಬುದು 'ಕಿರು' ಎಂದಾಗಿರುವುದನ್ನು ಗಮನಿಸಿ. ಹೀಗೆ ಕರ್ಮಧಾರಯದಲ್ಲಿ ಪೂರ್ವಪದವಾಗುವ ಅನೇಕ ಗುಣವಾಚಕಗಳಿಗೆ ವಿಶೇಷರೂಪಗಳು ಬರುತ್ತವೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಸೂಚಿಸಿದೆ :

| ಗುಣವಾಚಕ | ಸಮಾಸದಲ್ಲಿ ರೂಪ | ಉದಾಹರಣೆ |
|---|---|---|
| ಕಿರಿಯ | ಕಿರು — | ಕಿರುಪಂಟೆ, ಕಿರುನಾಲಿಗೆ, ಕಿರುನೆಲ್ಲಿ |
| ಎಳೆಯ | ಎಳ — | ಎಳನೀರು, ಎಳಮಾವು, ಎಳಗರು |
| ಹಳೆಯ | ಹಳ — | ಹಳಗನ್ನಡ |

೧೨. 'ಉರಿಬೇಸಗೆ' ಎಂಬ ಸಮಾಸದಲ್ಲಿ 'ಉರಿಯುವ' ಎಂಬುದು 'ಉರಿ' ಎಂದು ಆಗಿರುವುದನ್ನು ಗಮನಿಸಿ. ಹೀಗೆ ಕರ್ಮಧಾರಯದಲ್ಲಿ ಕೃದಂತನಾಮವು ಪೂರ್ವಪದವಾದಾಗ ಧಾತುರೂಪದಲ್ಲಿ ನಿಲ್ಲುತ್ತದೆ. ಇನ್ನೂ ಕೆಲವು ಉದಾಹರಣೆಗಳನ್ನು ನೋಡಿ.

ಹುರಿದ ಕಡಲೆ = ಹುರಿಗಡಲೆ
ಅರಳುವ ಮೊಗ್ಗು = ಅರಳು ಮೊಗ್ಗು
ಸಿಡಿಯುವ ಮದ್ದು = ಸಿಡಿಮದ್ದು
ಕಡೆಯುವ ಕೋಲು = ಕಡೆಗೋಲು

೧೩. ಈ ಕೆಳಗಿನ ಕರ್ಮಧಾರಯಗಳನ್ನು ನೋಡಿ :

ಮುಸುರೆಯ ಪಾತ್ರೆಯನ್ನು ಬೂದಿಯಿಂದಾಗಲಿ ಹುಡಿಮಣ್ಣಿನಿಂದಾಗಲಿ ತಿಕ್ಕಿದರೆ ಅದರ ಮುಸಿ ಹೋಗುತ್ತದೆ.
ಸಕ್ಕರೆಗುಂಬಳಕ್ಕಿಂತಲೂ ಬೂದುಗುಂಬಳಕ್ಕೆ ಬೆಲೆ ಹೆಚ್ಚು.

| ವಿಗ್ರಹವಾಕ್ಯ | | ಸಮಾಸ |
|---|---|---|
| ಹುಡಿಯಾದ ಮಣ್ಣು | = | ಹುಡಿಮಣ್ಣು. |
| ಸಕ್ಕರೆಯಂತಿರುವ ಕುಂಬಳ | = | ಸಕ್ಕರೆಗುಂಬಳ |

ಮೇಲಿನ ಸಮಾಸಗಳಲ್ಲಿ ಪೂರ್ವಪದಗಳಾಗಿ ಬಂದಿರುವ ಹುಡಿ, ಸಕ್ಕರೆ ಎಂಬುವು ನಾಮವಾಚಕಗಳು ಆದರೆ ವಿಗ್ರಹವಾಕ್ಯಗಳಲ್ಲಿ ಇವಕ್ಕೆ ಆದ, ಅಂತಿರುವ ಎಂಬ ಪದಗಳು ಸೇರಿರುವುದರಿಂದ ಇವು ವಿಶೇಷಣಗಳಾಗಿ ಇಲ್ಲಿ ಬಂದಿವೆಯೆಂಬುದು ಗೊತ್ತಾಗುತ್ತದೆ. ಹೀಗೆ ನಾಮವಾಚಕಗಳು ಕೂಡ ವಿಶೇಷಣವಾಗಿ ಬಂದು ಕರ್ಮಧಾರಯ ಸಮಾಸದಲ್ಲಿ ಪೂರ್ವಪದಗಳಾಗಿ ನಿಲ್ಲಬಹುದು.

೧೪. ತತ್ಪುರುಷ ಕರ್ಮಧಾರಯಗಳೆರಡರಲ್ಲೂ ಉತ್ತರಪದದ ಅರ್ಥವೇ ಮುಖ್ಯ. ಪೂರ್ವಪದಕ್ಕೂ ಉತ್ತರಪದಕ್ಕೂ ವಿಶೇಷಣ ವಿಶೇಷ್ಯ ಸಂಬಂಧವಿದ್ದರೆ ಕರ್ಮಧಾರಯವಾಗುತ್ತದೆ. ಇದಲ್ಲದೆ ಬೇರೆ ಬಗೆಯ ಸಂಬಂಧವಿದ್ದರೆ ತತ್ಪುರುಷವಾಗುತ್ತದೆ.

## ೩. ಅಂಶಿಸಮಾಸ

೧೫. ಕೆಳಗಿನ ಉದಾಹರಣೆಗಳನ್ನು ನೋಡಿ:

'ನಿನಗೆ ಸಹಾಯಮಾಡುತ್ತೇನೆ' ಎಂಬ ಮಾತು ಅವನ ತುದಿನಾಲಗೆಯಿಂದಲೂ ಹೊರಡಲಿಲ್ಲ.

ಅವನನ್ನು ಹೊರಬಾಗಿಲಲ್ಲೇ ನಿಲ್ಲಿಸಿದ್ದೇನೆ.

ನಾಲಗೆಯ ತುದಿ = ತುದಿ ನಾಲಗೆ; ಬಾಗಿಲ ಹೊರಗು = ಹೊರಬಾಗಿಲು. ವಿಗ್ರಹವಾಕ್ಯದ ಪದಗಳು ಸಮಾಸದಲ್ಲಿ ಹಿಂದುಮುಂದಾಗಿವೆ.

'ತುದಿನಾಲಗೆ' ಎಂಬ ಶಬ್ದವನ್ನು ನೋಡಿ. ಇಲ್ಲಿ 'ನಾಲಗೆ'ಗಿಂತಲೂ 'ತುದಿ' ಎಂಬ ಪದದ ಅರ್ಥವೇ ಮುಖ್ಯ. ("ಆ ಮಾತನ್ನು ಬಾಯಿತುಂಬ ಆಡದಿದ್ದರೆ ಹೋಗಲಿ; ನಾಲಗೆಯ ತುದಿಯಿಂದ ಉಚ್ಚರಿಸುವಷ್ಟು ಕೂಡ ಅವನಿಗೆ ಮರುಕವಿಲ್ಲದೆ ಹೋಯಿತು.") ಇದರಂತೆಯೇ 'ಹೊರಬಾಗಿಲು' ಎಂಬುದರಲ್ಲಿ 'ಹೊರಗು' ಎಂಬ ಪದವೇ ಮುಖ್ಯ. ಹೀಗೆ ಮುಖ್ಯವಾಗಿರುವ ತುದಿ, ಹೊರಗು ಎಂಬ ಪದಗಳು ಸಮಾಸದಲ್ಲಿ (ವಿಗ್ರಹವಾಕ್ಯದಲ್ಲಲ್ಲ) ಪೂರ್ವಪದಗಳಾಗಿ ನಿಂತಿವೆ.

ಹೀಗೆ ಸಮಾಸದಲ್ಲಿ ಪೂರ್ವಪದದ ಅರ್ಥವು ಮುಖ್ಯವಾಗಿದ್ದರೆ, **ಅಂಶಿ ಸಮಾಸವಾಗುತ್ತದೆ.**

೧೬. 'ಹೊರಬಾಗಿಲು' ಎಂಬುದರಲ್ಲಿ 'ಹೊರಗು' ಎಂಬುದರ ಕೊನೆಯ 'ಗು' ಎಂಬ ಅಕ್ಷರವು ಲೋಪವಾಗಿರುವುದನ್ನು ನೋಡಿ.

ಹೊರಗು, ಒಳಗು, ಕೆಳಗು, ಮುಂದು, ಹಿಂದು ಮೊದಲಾದುವು ಸಮಾಸದಲ್ಲಿ ಪೂರ್ವಪದಗಳಾದಾಗ ಅವುಗಳ ಕೊನೆಯ ಅಕ್ಷರವು ಲೋಪವಾಗುತ್ತದೆ. ಕೆಳಗಿನ ಅಂಶಿಸಮಾಸಗಳನ್ನು ನೋಡಿ:

| | | |
|---|---|---|
| ಮೈಯ ಹೊರಗು | = | ಹೊರಮೈ |
| ಮೈಯ ಒಳಗು | = | ಒಳಮೈ |
| ಕೆರೆಯ ಒಳಗು | = | ಒಳಗೆರೆ |
| ತುಟಿಯ ಕೆಳಗು | = | ಕೆಳದುಟಿ |
| ಕಾಲ ಮುಂದು | = | ಮುಂಗಾಲು |
| ಕಾಲ ಹಿಂದು | = | ಹಿಂಗಾಲು. |

ಇತ್ಯಾದಿ.

## ೪. ದ್ವಂದ್ವ ಸಮಾಸ

೧೭. ಕೆಳಗಿನ ಉದಾಹರಣೆಗಳನ್ನು ನೋಡಿ :

ಕುಡಿಯುವ ನೀರಿಗೆ ಕಸಕಡ್ಡಿ ಬೀಳದಂತೆ ಮುಚ್ಚಿಡಬೇಕು.

ಗುಡುಗುಮಿಂಚು ಸಿಡಿಲುಗಳ ಆರ್ಭಟಕ್ಕೆ ಪ್ರಯಾಣಿಕರು ಬೆದರಿದರು.

ಕಸವೂ ಕಡ್ಡಿಯೂ=ಕಸಕಡ್ಡಿ ; ಗುಡುಗೂ ಮಿಂಚೂ ಸಿಡಿಲೂ—ಗುಡುಗುಮಿಂಚುಸಿಡಿಲುಗಳು. 'ಕಸಕಡ್ಡಿ' ಎಂಬ ಸಮಾಸವನ್ನು ನೋಡಿ. ಇಲ್ಲಿ ಕಸವೂ ಮುಖ್ಯ, ಕಡ್ಡಿಯೂ ಮುಖ್ಯ. ಇವೆರಡೂ ಜೊತೆಯಾಗಿವೆಯೆಂದು ತೋರಿಸುವುದಕ್ಕೋಸ್ಕರ ಸಮಾಸವಾಗಿದೆ. 'ಗುಡುಗುಮಿಂಚು ಸಿಡಿಲುಗಳು' ಎಂಬುದರಲ್ಲಿ ಗುಡುಗು, ಮಿಂಚು, ಸಿಡಿಲು ಎಂಬ ಮೂರು ಪದಗಳು ಜೊತೆಗೂಡಿ ಸಮಾಸವಾಗಿವೆ. ಈ ಮೂರರಲ್ಲಿ ಇದು ಮುಖ್ಯ, ಇದು ಅಮುಖ್ಯ ಎಂದು ಭೇದಮಾಡುವಹಾಗಿಲ್ಲ. ಮೂರರ ಅರ್ಥವೂ ಮುಖ್ಯವೇ.

ಹೀಗೆ ಎರಡು ಅಥವಾ ಅನೇಕ ಪದಗಳು ಅರ್ಥದಲ್ಲಿ ಮುಖ್ಯ, ಅಮುಖ್ಯ ಎಂಬ ಭೇದವಿಲ್ಲದಂತೆ ಜೊತೆಗೂಡಿ ಸಮಾಸವಾದರೆ **ದ್ವಂದ್ವ ಸಮಾಸವೆಂದು** ಹೆಸರು.

೧೮. ದ್ವಂದ್ವ ಸಮಾಸದಲ್ಲಿ ಎರಡಕ್ಕಿಂತ ಹೆಚ್ಚು ಪದಗಳು ಒಂದೇ ಬಾರಿಗೆ ಸೇರಿ ಸಮಾಸವಾಗಬಹುದು.

೧೯. 'ಕಸಕಡ್ಡಿ' ಎಂಬುದು ಒಂದಕ್ಕಿಂತ ಹೆಚ್ಚು ವಸ್ತುಗಳು ಜೊತೆಗೂಡಿರುವುದನ್ನು ಹೇಳಿದರೂ ಏಕವಚನದಲ್ಲೇ ಇದೆ. ಸಮಾಸದಲ್ಲಿ ಸೇರಿರುವ ವಸ್ತುಗಳಷ್ಟೂ ಸೇರಿ ಒಂದು ಸಮುದಾಯವೆಂದು ತೋರುವ ಕಡೆ ದ್ವಂದ್ವ ಸಮಾಸವು ಏಕವಚನದಲ್ಲೇ ಇರುತ್ತದೆ. ಕೆಳಗಿನ ಉದಾಹರಣೆಗಳನ್ನು ನೋಡಿ :

ಕೈಕಾಲು ಗಟ್ಟಿಯಾಗಿರುವ ತನಕ ದುಡಿಸಿಕೊಂಡು ಆಮೇಲೆ ಅವನನ್ನು ಅಟ್ಟಿಬಿಟ್ಟರು. (ಕೈ+ಕಾಲು)

ದೇವರಿಗೆ ಹಣ್ಣುಕಾಯನ್ನು ಒಪ್ಪಿಸು. (ಹಣ್ಣು+ಕಾಯಿ)

ಹೀಗೆಯೇ ಪೈರುಪಚ್ಚೆ, ಹಾಡುಹಸೆ, ಕಾಳುಕಡ್ಡಿ, ಇತ್ಯಾದಿ.

## ೫. ಬಹುವ್ರೀಹಿ ಸಮಾಸ

೨೦. ಕೆಳಗಿನ ಉದಾಹರಣೆಗಳನ್ನು ನೋಡಿ ;

ಶಿವನಿಗೆ ಹಣೆಯಲ್ಲಿ ಕಣ್ಣಿರುವುದರಿಂದ ಹಣೆಗಣ್ಣನೆಂಬ ಹೆಸರು ಬಂದಿತು.

ಕಮಲೆ ಆ ಗೆಡ್ಡೆಮೂಗನನ್ನು ಮದುವೆಯಾಗುವುದಿಲ್ಲವೆನ್ನುತ್ತಾಳೆ.

'ಹಣೆಗಣ್ಣ' ಎಂಬ ಸಮಾಸಕ್ಕೆ, **ಹಣೆಯಲ್ಲಿ ಕಣ್ಣು** ಯಾರಿಗುಂಟೋ ಅವನು ಎಂದು ವಿಗ್ರಹವಾಕ್ಯವಾಗುತ್ತದೆ. ಇಲ್ಲಿ ಹಣೆ, ಕಣ್ಣು

ಎಂಬ ಪದಗಳು ಸೇರಿ ಸಮಾಸವಾಗಿದೆ. ಈಗ 'ಹಣೆಗಣ್ಣ' ಎಂಬುದರ ಅರ್ಥವನ್ನು ನೋಡಿ. 'ಹಣೆ' ಯನ್ನಾಗಲಿ 'ಕಣ್ಣ' ನ್ನಾಗಲಿ ಹೇಳು ವುದು ಇದರ ಉದ್ದೇಶವಲ್ಲ. ಹಣೆಯಲ್ಲಿ ಕಣ್ಣು ಯಾರಿಗುಂಟೋ ಆ ಮೂರನೆಯ ವಸ್ತುವನ್ನು (ಎಂದರೆ ಶಿವನನ್ನು) ಹೇಳುವುದೇ ಇದರ ಉದ್ದೇಶ. ಹೀಗೆಯೇ, ಗೆಡ್ಡೆಯಾದ ಮೂಗು ಯಾರಿಗುಂಟೋ ಅವನು= ಗೆಡ್ಡೆಮೂಗ. ಇಲ್ಲಿ ಗೆಡ್ಡೆ, ಮೂಗು ಎಂಬ ಪದಗಳು ಸಮಾಸದಲ್ಲಿ ಸೇರಿ ಗೆಡ್ಡೆಯಾದ ಮೂಗನ್ನುಳ್ಳ ಮೂರನೆಯ ವಸ್ತುವನ್ನು ತೋರಿಸುತ್ತವೆ.

ಹೀಗೆ ಸಮಾಸದಲ್ಲಿ ಸೇರಿರುವ ಎರಡು ಪದಗಳ ಅರ್ಥವೂ ಮುಖ್ಯ ವಾಗದೆ, ಬೇರೊಂದು ವಸ್ತುವನ್ನು ಹೇಳುವುದೇ ಸಮಾಸದ ಅರ್ಥವಾದರೆ **ಬಹುವ್ರೀಹಿ** ಸಮಾಸವಾಗುತ್ತದೆ.

೨೧. ಹಣೆ+ಕಣ್ಣು, ಗೆಡ್ಡೆ+ಮೂಗು—ಇವು ಸೇರಿ ಬಹುವ್ರೀಹಿ ಸಮಾಸವಾದಾಗ, ಕೊನೆಯಲ್ಲಿ —ಅ ಎಂಬ ಪ್ರತ್ಯಯ ಸೇರುವುದನ್ನು ಗಮನಿಸಿ. ಹಣೆ+ಕಣ್ಣು+ಅ=ಹಣೆಗಣ್ಣ, ಗೆಡ್ಡೆ+ಮೂಗು+ಅ= ಗೆಡ್ಡೆಮೂಗ

(ಹೀಗೆ ಕೊನೆಯಲ್ಲಿ—ಅ ಎಂಬ ಪ್ರತ್ಯಯವು ಸೇರದಿದ್ದರೆ, ಹಣೆ ಯಲ್ಲಿ ಕಣ್ಣು=ಹಣೆಗಣ್ಣು, ಗೆಡ್ಡೆಯಾದ ಮೂಗು=ಗೆಡ್ಡೆಮೂಗು ಎಂದಾಗಿ ಈ ಸಮಾಸವು ತತ್ಪುರುಷವೋ ಕರ್ಮದಾರಯವೋ ಆಗುತ್ತಿತ್ತು.

೨೨. ಈ ಕೆಳಗಿನ ಸಮಾಸಪದವನ್ನು ನೋಡಿ:

ಅವರಿಬ್ಬರಿಗೂ ಹಣಾಹಣಿ ಜಗಳವಾಯಿತು.

ಹಣಾಹಣಿ=ಹಣೆಯಿಂದ ಹಣೆಯಿಂದ ಒಬ್ಬರನ್ನೊಬ್ಬರು ಚಚ್ಚು ವುದು ಯಾವ ಜಗಳದಲ್ಲೋ ಅದು. ಸಮಾಸದಲ್ಲಿ 'ಹಣೆ' ಎಂಬ ಪದವೇ ಎರಡುಬಾರಿ ಬಂದು, ಹಣೆಯನ್ನು ಉಪಯೋಗಿಸಿ ಮಾಡಿದ ಜಗಳ ವನ್ನು ತೋರಿಸುತ್ತದೆ. ಹೀಗೆಯೇ, ಒಬ್ಬರನ್ನೊಬ್ಬರು ಕೋಲುಗಳಿಂದ ಹೊಡೆದು ಆಡುವ ಜಗಳ=ಕೋಲಾಕೋಲಿ. ಹಣಾಹಣಿ, ಕೋಲಾ ಕೋಲಿ ಎಂಬ ಪದಗಳೆರಡಕ್ಕೂ ಹಣೆಯಾಗಲಿ ಕೋಲಾಗಲಿ ಮುಖ್ಯವಲ್ಲದೆ ಜಗಳವೆಂಬ ಅರ್ಥವು ಮುಖ್ಯವಾಗಿರುವುದರಿಂದ, ಇಲ್ಲಿ ಸಮಾಸವು ಬಹು ವ್ರೀಹಿ. ಈ ಎರಡು ಕಡೆಗಳಲ್ಲೂ ಪೂರ್ವಪದದ ಕೊನೆಯಲ್ಲಿ 'ಆ' ಕಾರ ವೂ ಉತ್ತರಪದದ ಕೊನೆಯಲ್ಲಿ 'ಇ' ಕಾರವೂ ಸೇರಿರುವುದನ್ನು ಗಮನಿಸಿ.

೨೩. ದ್ವಂದ್ವ ಸಮಾಸವೊಂದನ್ನು ಬಿಟ್ಟರೆ ಮಿಕ್ಕ ಕಡೆಗಳಲ್ಲಿ ಒಂದು ಬಾರಿಗೆ ಎರಡೆರಡು ಪದಗಳು ಮಾತ್ರ ಸೇರಿ ಸಮಾಸವಾಗುತ್ತದೆಂದು ಹಿಂದೆ ನೋಡಿದೆವಷ್ಟೆ. ಈಗ ಕೆಳಗಿನ ಪ್ರಯೋಗಗಳನ್ನು ಪರಿಶೀಲಿಸಿ:

ನೆರೆಮನೆಸುದ್ದಿಯನ್ನು ಕಟ್ಟಿಕೊಂಡು ನಿನಗೇನು?
ನಮ್ಮ ತಾಯಿ ಅರೆದಲೆನೋವಿನಿಂದ ನರಳುತ್ತಿದ್ದಾರೆ.

ನೆರೆಮನೆಸುದ್ದಿ, ಅರೆದಲೆನೋವು—ಇಲ್ಲಿ ಒಂದೊಂದು ಸಮಾಸದಲ್ಲೂ ಮೂರು ಪದಗಳು ಸೇರಿವೆ. ಆದರೆ, ಮೂರು ಪದಗಳೂ ಒಂದೇ ಬಾರಿಗೆ ಸೇರಿಲ್ಲ;

ನೆರೆಯ ಮನೆ=ನೆರೆಮನೆ (ತತ್ಪುರುಷ)
(ಈಗ 'ನೆರೆಮನೆ' ಎನ್ನುವುದು ಒಂದು ಪದವಾಯಿತು.)
ನೆರೆಮನೆಯ ಸುದ್ದಿ=ನೆರೆಮನೆಸುದ್ದಿ (ಮತ್ತೆ ತತ್ಪುರುಷ).
ಅರೆಯಾದ ತಲೆ=ಅರೆದಲೆ (ಕರ್ಮಧಾರಯ)
ಅರೆದಲೆಯಲ್ಲಿ ನೋವು=ಅರೆದಲೆನೋವು (ತತ್ಪುರುಷ).

ಹೀಗೆ ಎರಡೆರಡು ಪದಗಳನ್ನೇ ಬೇರೆ ಬೇರೆಯಾಗಿ ಬಿಡಿಸಿಕೊಂಡು ಸಮಾಸದ ಅರ್ಥವನ್ನು ತಿಳಿದುಕೊಳ್ಳಬೇಕು.

೨೪. ಕೆಮ್ಮಣ್ಣು, ಕೇಸಕ್ಕಿ, ನಿಟ್ಟುಸಿರು, ಇಕ್ಕಟ್ಟು, ಬಿರುಗಾಳಿ, ಹೆಬ್ಬಾವು, ಮುಚ್ಚಂಜೆ, ಕಟ್ಟಿರುವೆ, ತಣ್ಣೀರು, ಮುಕ್ಕಣ್ಣ ಮೊದಲಾದ ಹಲವು ಸಮಾಸಪದಗಳು ಕನ್ನಡದಲ್ಲಿ ಹಿಂದಿನಿಂದ ಬಳಕೆಯಲ್ಲಿವೆ. ಇವುಗಳ ರೂಪನಿಷ್ಪತ್ತಿಯನ್ನು ದೊಡ್ಡ ವ್ಯಾಕರಣಗಳಿಂದ ತಿಳಿದುಕೊಳ್ಳಬೇಕು.

---

## ಇಪ್ಪತ್ತೊಂದನೆಯ ಅಧ್ಯಾಯ

### ಸಾಧಿತ ಧಾತು

೧. ನಾಮಪ್ರಕೃತಿಗಳಿಂದಲೂ ಧಾತುಗಳಿಂದಲೂ ಬೇರೆಬೇರೆ ರೀತಿಗಳಲ್ಲಿ ಹೊಸ ನಾಮಪ್ರಕೃತಿಗಳನ್ನು ಸಾಧಿಸುವಂತೆಯೇ ಹೊಸ ಧಾತುಗಳನ್ನೂ ಸಾಧಿಸಬಹುದು. ಇದು ಹೇಗೆಂಬುದನ್ನು ಈ ಅಧ್ಯಾಯದಲ್ಲಿ ನೋಡೋಣ.

**(೧) ನಾಮಪ್ರಕೃತಿ+ಇಸು :**

೨. ಕೆಲವು ನಾಮಪ್ರಕೃತಿಗಳಿಗೆ–ಇಸು ಎಂಬ ಪ್ರತ್ಯಯವು ಬೇರೆ ಬೇರೆ ಅರ್ಥದಲ್ಲಿ ಸೇರಿ ಹೊಸ ಧಾತುಗಳಾಗುತ್ತವೆ.

ಉದಾಹರಣೆ

ಕೈ ಮೀರಿದ್ದಕ್ಕೆ ಕಳವಳಿಸಿ ಪ್ರಯೋಜನವೇನು ?
(ಕಳವಳ+ಇಸು=ಕಳವಳವನ್ನು ಹೊಂದು)
ಹುಲಿ ಅಬ್ಬರಿಸುತ್ತಾ ಗುಹೆಯಿಂದ ಹೊರಟಿತು.
(ಅಬ್ಬರ+ಇಸು=ಅಬ್ಬರವನ್ನು ಮಾಡು)
ಸಂಸ್ಕೃತದ ಶಾಕುಂತಲ ನಾಟಕವನ್ನು ಬಸವಪ್ಪಶಾಸ್ತ್ರಿಗಳು ಕನ್ನಡಿಸಿದ್ದಾರೆ.
(ಕನ್ನಡ+ಇಸು=ಕನ್ನಡಕ್ಕೆ ಪರಿವರ್ತಿಸು)
ಈ ಗೋಡೆಯ ಮೇಲೆ ಒಂದು ನವಿಲನ್ನು ಚಿತ್ರಿಸು.
(ಚಿತ್ರ+ಇಸು=ಚಿತ್ರವನ್ನು ಬರೆ)
ನಾಳೆಯೇ ಹಿಂದಿರುಗಲು ಆದಷ್ಟುಮಟ್ಟಿಗೆ ಯತ್ನಿಸುತ್ತೇನೆ.
(ಯತ್ನ+ಇಸು=ಯತ್ನವನ್ನು ಮಾಡು)
ಆತನನ್ನು ಚೆನ್ನಾಗಿ ಸ್ತುತಿಸಿದರೆ ನಿನ್ನ ಕಾರ್ಯವು ಸಿದ್ಧಿಸುತ್ತದೆ.
(ಸ್ತುತಿ+ಇಸು=ಸ್ತುತಿಯನ್ನು ಮಾಡು;
ಸಿದ್ಧಿ+ಇಸು=ಸಿದ್ಧಿಯಾಗು.)
ಹೀಗೆಯೇ—ಎದುರಿಸು, ಭಾವಿಸು, ಭೇದಿಸು, ದುಃಖಿಸು, ಸುಖಿಸು, ನಿರ್ಣಯಿಸು, ಇತ್ಯಾದಿ.

೩. ಕೆಲವು ಅನುಕರಣ ಶಬ್ದಗಳಿಗೆ–ಇಸು ಪ್ರತ್ಯಯ ಸೇರಿ ಹೊಸ ಧಾತುಗಳಾಗುತ್ತವೆ.

ಉದಾಹರಣೆ.

ಕಾಡುಕಿಚ್ಚು ಧಗಧಗಿಸಿತು ; ಬಿದಿರುಮೆಳೆಗಳು ಛಟಛಟಿಸಿದವು.
(ಧಗಧಗ+ಇಸು, ಛಟಛಟ+ಇಸು)
ಮಲ್ಲಿಗೆಗಿಂತ ಸಂಪಿಗೆ ಹೆಚ್ಚಾಗಿ ಘಮಘಮಿಸುತ್ತದೆ.
(ಘಮಘಮ+ಇಸು)
ಹೀಗೆಯೇ—ಥಳಥಳಿಸು, ಗಜಬಜಿಸು, ಘುಡುಘುಡಿಸು, ಇತ್ಯಾದಿ.

೪. ರಕ್ಷಣ, ಚಲನ ಮೊದಲಾದ ಕೆಲವು ಸಂಸ್ಕೃತ ಶಬ್ದಗಳಿಗೆ-ಇಸು ಪ್ರತ್ಯಯವನ್ನು ಸೇರಿಸುವಾಗ ಅವುಗಳ 'ಅಣ,' 'ಅನ' ಎಂಬ ಭಾಗವು ಲೋಪವಾಗುತ್ತದೆ.

ಉದಾಹರಣೆ.

ರಕ್ಷಿಸು ಕರ್ಣಾಟಕದೇವಿ! (ರಕ್ಷಣ + ಇಸು = ರಕ್ಷ್ + ಇಸು)
ಅವನ ಅಪ್ಪಣೆಯಿಲ್ಲದೆ ಒಂದು ಹುಲ್ಲುಕಡ್ಡಿ ಕೂಡ ಚಲಿಸುವುದಿಲ್ಲ.
(ಚಲನ + ಇಸು = ಚಲ್ + ಇಸು)
ಹೀಗೆಯೇ—ಸ್ಮರಣ-ಸ್ಮರಿಸು, ಭಜನ-ಭಜಿಸು, ಪೂಜನ-ಪೂಜಿಸು, ಪಾಲನ-ಪಾಲಿಸು, ಸೇವನ-ಸೇವಿಸು, ವರ್ಣನ-ವರ್ಣಿಸು. ಇತ್ಯಾದಿ.

೫. ಗಮನ, ಶಯನ ಮೊದಲಾದ ಒಂದೆರಡು ಕಡೆಗಳಲ್ಲಿ 'ಅನ' ಎಂಬ ಅಂತ್ಯಭಾಗಕ್ಕೆ ಲೋಪವಿಲ್ಲ.

ಉದಾಹರಣೆ.

ಹುಚ್ಚರ ಮಾತನ್ನು ಯಾರುತಾನೆ ಗಮನಿಸುತ್ತಾರೆ!
(ಗಮನ + ಇಸು.)
ಹೀಗೆಯೇ—ಶಯನ + ಇಸು = ಶಯನಿಸು.

## (೨) ಧಾತು + ಇಸು :

೬. ಎಲ್ಲ ಧಾತುಗಳಿಗೂ ಪ್ರೇರಣಾರ್ಥದಲ್ಲಿ-ಇಸು ಪ್ರತ್ಯಯ ಸೇರಿ ಹೊಸ ಧಾತುಗಳಾಗುತ್ತವೆ. 'ಪ್ರೇರಣ' ಎಂದರೆ ಇನ್ನೊಬ್ಬನಿಂದ ಕೆಲಸ ಮಾಡಿಸುವುದು ಎಂದು ಅರ್ಥ. ಕೆಳಗಿನ ವಾಕ್ಯಗಳನ್ನು ನೋಡಿ :

ಸಾಮಾನ್ಯ ವಾಕ್ಯ : ಗಿಳಿ ಹಲವು ಮಾತುಗಳನ್ನು ಕಲಿಯಿತು.
ಪ್ರೇರಣಾರ್ಥ : ಮನೋರಮೆ ಗಿಳಿಗೆ ಹಲವು ಮಾತುಗಳನ್ನು ಕಲಿಸಿದಳು. (ಕಲಿ + ಇಸು = ಕಲಿಯುವಂತೆ ಮಾಡು)
ಸಾಮಾನ್ಯ ವಾಕ್ಯ : ನಾಯಿ ಬೀದಿಗೆ ಓಡಿತು.
ಪ್ರೇರಣಾರ್ಥ : ಆಳು ನಾಯನ್ನು ಬೀದಿಗೆ ಓಡಿಸಿದನು.
(ಓಡು + ಇಸು = ಓಡುವಂತೆ ಮಾಡು,
ಹೀಗೆಯೇ—ತಿಳಿ—ತಿಳಿಸು, ಮಾಡು—ಮಾಡಿಸು, ಮಲಗು—ಮಲಗಿಸು)
ನೋ—ನೋಯಿಸು, ಬೇ-ಬೇಯಿಸು, ಕೊಲ್ಲು—ಕೊಲ್ಲಿಸು, ಹೊದೆ-ಹೊದಿಸು, ಇತ್ಯಾದಿ.

೭. ಕೆಲವು ಎಕರಾಂತ ಧಾತುಗಳಿಗೆ ಪ್ರೇರಣಾರ್ಥದಲ್ಲಿ–ಇಸು ಪ್ರತ್ಯಯಕ್ಕೆ ಬದಲಾಗಿ-ಸು ಎಂಬುದು ಸೇರುವುದುಂಟು ; ಆಗ ಧಾತುವಿನ ಕೊನೆಯ ಎಕಾರವು ಅಕಾರವಾಗುವುದೂ ಉಂಟು.

ಉದಾಹರಣೆ.

ತಾವು ಬರಸಿದ ಕಾಗದ ನನಗೆ ಈ ದಿನ ತಲಪಿತು.
(ಬರೆ + ಸು = ಬರಸು)

ಬರೆಯಿಸು, ಬರೆಸು—ಎಂದೂ ಪ್ರಯೋಗವುಂಟು.

ಹೀಗೆಯೇ—ನಡೆ—ನಡೆಯಿಸು, ನಡೆಸು, ನಡಸು.
ಮರೆ ; ಮರೆಯಿಸು, ಮರೆಸು, ಮರಸು,
ಕರೆ ; ಕರೆಯಿಸು, ಕರೆಸು, ಕರಸು, ಇತ್ಯಾದಿ.

(೩) **ನಾಮಪ್ರಕೃತಿ + ಧಾತು ;**

೮. –ಇಸು ಪ್ರತ್ಯಯ ಸೇರಿ ಆಗುವ ಪ್ರತ್ಯಯಾಂತ ಧಾತುಗಳನ್ನು ಮೇಲೆ ನೋಡಿದೆವು. ಈಗ ಈ ಪ್ರಯೋಗಗಳನ್ನು ಗಮನಿಸಿ :

ಅವರು ೧ಂನೆಯ ತಾರೀಖಿನ ದಿನ ಊರುಬಿಟ್ಟು ಹೊರಟರು.
ನಿನ್ನೆಯರಾತ್ರಿ ನಾವು ತುಂಬ ಹೊತ್ತು ಮಾತಾಡುತ್ತಾ ಕುಳಿತಿದ್ದೆವು.
ಅರ್ಜುನನು ತಾನು ಕೊಟ್ಟ ಮಾತಿಗೆ ಕಟ್ಟುಬಿದ್ದನು.
ಆ ಮುದುಕಿ ತನ್ನ ಹೊಟ್ಟೆಗೆನ ಸಲುವಾಗಿ ತುಂಬ ಕಷ್ಟಪಡುತ್ತಾಳೆ.

ಈ ಹಿಂದೆ ದೊಡ್ಡ ಅಕ್ಷರದಲ್ಲಿರುವ ಧಾತುಗಳನ್ನು ಬಿಡಿಸಿ ನೋಡಿ :

ಊರನ್ನು ಬಿಡು = ಊರು + ಬಿಡು = ಊರುಬಿಡು.
ಮಾತನ್ನು ಆಡು = ಮಾತು + ಆಡು = ಮಾತಾಡು.
ಕಟ್ಟಿನಲ್ಲಿ ಬೀಳು = ಕಟ್ಟು + ಬೀಳು = ಕಟ್ಟುಬೀಳು.
ಕಷ್ಟವನ್ನು ಪಡು = ಕಷ್ಟ + ಪಡು = ಕಷ್ಟಪಡು.

ಇವು ನಾಲ್ಕೂ ಸಮಾಸಗಳು. ನಾಮಪ್ರಕೃತಿ ಪೂರ್ವಪದವಾಗಿಯೂ ಧಾತು ಉತ್ತರಪದವಾಗಿಯೂ ನಿಂತು ಸಮಾಸವಾಗಿದೆ.

ಹೀಗೆ ಉತ್ತರಪದದಲ್ಲಿ ಧಾತುವನ್ನುಳ್ಳ ಸಮಾಸವನ್ನು **ಕ್ರಿಯಾ ಸಮಾಸ**ವೆಂದು ಕರೆಯುತ್ತಾರೆ.

೯. ಈಗ ಕೆಳಗಿನ ಪ್ರಯೋಗಗಳನ್ನು ನೋಡಿ ;

ಊರುಬಿಟ್ಟವರು ಒಂದು ತಿಂಗಳಾದರೂ ಹಿಂದಕ್ಕೆ ಬರಲೇ ಇಲ್ಲ.
(ಊರನ್ನು ಬಿಟ್ಟವರು = ಊರು ಬಿಟ್ಟವರು.)
ನಿನ್ನೆಯ ದಿನ ಅಷ್ಟು ಚೆನ್ನಾಗಿ ಮಾತಾಡಿದ ಹುಡುಗನು ಯಾರು ?
(ಮಾತನ್ನು ಆಡಿದ = ಮಾತಾಡಿದ.)

ಇಲ್ಲಿ ಉತ್ತರ ಪದಗಳಾಗಿ ನಿಂತಿರುವ ಬಿಟ್ಟವರು, ಆಡಿದ ಎಂಬುವು ಬಿಡು, ಆಡು ಎಂಬ ಧಾತುಗಳಿಂದ ಬಂದ ಕೃದಂತನಾಮಗಳು. ಹೀಗೆ ಸಮಾಸದಲ್ಲಿ ಕೃದಂತನಾಮವು ಉತ್ತರಪದವಾಗಿದ್ದರೂ, **ಕ್ರಿಯಾಸಮಾಸ** ವೆಂದೇ ಹೆಸರು.

೧೦. ಕ್ರಿಯಾಸಮಾಸಕ್ಕೆ ಇನ್ನು ಕೆಲವು ಉದಾಹರಣೆಗಳು :

ಹಣ್ಣನ್ನು ಮಾರು = ಹಣ್ಣು ಮಾರು
ಏಟನ್ನು ತಿನ್ನು = ಏಟು ತಿನ್ನು
ಕಥೆಯನ್ನು ಹೇಳು = ಕಥೆ ಹೇಳು
ಆಸೆಯನ್ನು ಪಡು = ಆಸೆ ಪಡು
ಅಡ್ಡವಾಗಿ ಬೀಳು = ಅಡ್ಡಬೀಳು
ಎದುರನ್ನು ಕೊಳ್ಳು = ಎದುರುಗೊಳ್ಳು
ತಡೆಯನ್ನು ಕಟ್ಟು = ತಡೆಗಟ್ಟು
(ಇಲ್ಲಿ 'ಗ' ಕಾರವು ಆದೇಶವಾಗಿದೆ.)
ಹಿಂದಕ್ಕೆ ತಿರುಗು = ಹಿಂದಿರುಗು
(ಇಲ್ಲಿ ಹಿಂದು ಎಂಬುದರ ಕೊನೆಯ ಅಕ್ಷರವು ಲೋಪವಾಗಿದೆ ; ತಿರುಗು ಎಂಬುದರ ಆದಿಯ ತಕಾರಕ್ಕೆ ದಕಾರವು ಆದೇಶವಾಗಿದೆ.)

---

# ಇಪ್ಪತ್ತೆರಡನೆಯ ಅಧ್ಯಾಯ

## ಅವ್ಯಯ

### ೧. ಅವ್ಯಯಗಳ ವಿಭಾಗ

೧. ನಾವು ಪ್ರಕೃತಿಗಳನ್ನೂ ಧಾತುಗಳನ್ನೂ ವಾಕ್ಯದಲ್ಲಿ ಉಪಯೋಗಿಸುವಾಗ ಅವುಗಳಿಗೆ ಯಾವ ಯಾವ ರೂಪ ವ್ಯತ್ಯಾಸಗಳು ಉಂಟಾಗುತ್ತವೆ ಎಂಬುದನ್ನು ಇದುವರೆಗೆ ತಕ್ಕಮಟ್ಟಿಗೆ ನೋಡಿದೆವು. ಇನ್ನು ಉಳಿದವು ಅವ್ಯಯಗಳು. ವಾಕ್ಯದಲ್ಲಿ ಬರುವಾಗ ಇವು ಯಾವ ರೂಪವ್ಯತ್ಯಾಸವನ್ನೂ ಹೊಂದುವುದಿಲ್ಲವೆಂಬುದನ್ನು ಇವಕ್ಕೆ ಇಟ್ಟಿರುವ 'ಅವ್ಯಯ' ಎಂಬ ಹೆಸರೇ ತಿಳಿಸುತ್ತದೆ. ಆದ್ದರಿಂದ ಇವುಗಳ ವಿಭಾಗವನ್ನೂ ಪ್ರಯೋಗವನ್ನೂ ತಿಳಿದುಕೊಂಡರೆ ಸಾಕು.

೨. ಈ ಅವ್ಯಯಗಳಲ್ಲಿ ಕ್ರಿಯಾರ್ಥಕಾವ್ಯಯಗಳು, ಸಾಪೇಕ್ಷ ಕ್ರಿಯಾರೂಪಗಳು—ಇವುಗಳೆರಡರ ವಿಚಾರವನ್ನೂ ನಾವು ಹಿಂದೆಯೇ ನೋಡಿದ್ದೇವೆ. ಈಗ ಮಿಕ್ಕ ಅವ್ಯಯಗಳನ್ನು ಮಾತ್ರ ಕುರಿತು ಇಲ್ಲಿ ಹೇಳಬೇಕಾಗಿದೆ.

೩. (ಅ) **ಸಾಮಾನ್ಯಾವ್ಯಯಗಳು**—

ಕೆಳಗಿನ ವಾಕ್ಯಗಳನ್ನು ನೋಡಿ ;

(೧) ಆ ಸುದ್ದಿಯನ್ನು ಕೇಳಿ, ನಾನು ಮೈಸೂರಿಗೆ **ಕೂಡಲೆ** ಹಿಂದಿರುಗಿದೆನು.

(೨) ಕೋಡುಗಲ್ಲಿನಮೇಲೆ ನಿಂತು **ಎತ್ತ** ನೋಡಿದರೂ ಅವನಿಗೆ ಕುದುರೆ ಕಾಣಿಸಲಿಲ್ಲ.

(೩) ಕಬ್ಬಿಣವನ್ನು **ಕೆಂಪಗೆ** ಕಾಸಿ **ಥಟ್ಟನೆ** ನೀರಿನಲ್ಲಿ ಅದ್ದಿದರೆ ಏನಾಗುತ್ತದೆ ?

(೪) ನೀನು **ಹೇಗೆ** ಹೇಳಿದರೂ ನಿನ್ನ ಮಾತನ್ನು ಅವನು ಕೇಳುವುದಿಲ್ಲ.

ಮೇಲೆ ದೊಡ್ಡ ಅಕ್ಷರದಲ್ಲಿ ತೋರಿಸಿರುವ ಅವ್ಯಯಗಳಲ್ಲಿ 'ಕೂಡಲೆ' ಎನ್ನುವುದು ಕ್ರಿಯೆ ನಡೆದ ಕಾಲವನ್ನೂ, 'ಎತ್ತ' ಎನ್ನುವುದು ಸ್ಥಾನವನ್ನೂ ತೋರಿಸುತ್ತವೆ. 'ಕೆಂಪಗೆ,' 'ಹೇಗೆ,' 'ಥಟ್ಟನೆ' ಎನ್ನುವುವು ಕ್ರಿಯೆ ನಡೆಯುವ ರೀತಿಯನ್ನು ಹೇಳುತ್ತವೆ ; ಇವುಗಳಲ್ಲಿ 'ಥಟ್ಟನೆ' ಎನ್ನುವುದು ಆ ರೀತಿಯನ್ನು ಅನುಕರಣಮಾಡಿ ತೋರಿಸುತ್ತದೆ.

ಹೀಗೆ ಕ್ರಿಯೆಯ ಕಾಲ, ಸ್ಥಾನ, ರೀತಿ ಮೊದಲಾದುವನ್ನು ತಿಳಿಸುವ ಅವ್ಯಯಗಳಿಗೆ ಸಾಮಾನ್ಯಾವ್ಯಯಗಳೆಂದು ಹೆಸರು. ಇವು ಕ್ರಿಯಾಪದಕ್ಕೆ ವಿಶೇಷಣಗಳಾಗುವುದರಿಂದ ಕ್ರಿಯಾವಿಶೇಷಣಾವ್ಯಯಗಳೆಂದೂ ಇವನ್ನು ಕರೆಯುವುದುಂಟು.

ಇನ್ನೂ ಕೆಲವು ಸಾಮಾನ್ಯಾವ್ಯಯಗಳು :

ಕಾಲವನ್ನು ಸೂಚಿಸತಕ್ಕವು—ಬಳಿಕ, ತರುವಾಯ, ಇನ್ನು, ಒಡನೆ, ಅನಂತರ.

ಸ್ಥಾನವನ್ನು ಸೂಚಿಸತಕ್ಕವು—ಅತ್ತ, ಇತ್ತ, ಎತ್ತ, ಸುತ್ತ.

ರೀತಿಯನ್ನು ಸೂಚಿಸತಕ್ಕವು—ಹಾಗೆ, ಹೀಗೆ, ಅಂತು ಇಂತು, ಎಂತು, ಬೆಳ್ಳಗೆ, ಕಪ್ಪಗೆ, ಹಚ್ಚಗೆ, ಮೆಲ್ಲಗೆ, ಮೆಲ್ಲನೆ, ಬೇಗನೆ, ಸುಮ್ಮನೆ, ತೆಳ್ಳಗೆ, ಬೆಚ್ಚಗೆ.

ಅನುಕರಣವನ್ನು ಸೂಚಿಸತಕ್ಕವು—ಧಗ್ಗನೆ, ಧೊಪ್ಪನೆ, ಛಟಛಟನೆ, ಫಳಫಳನೆ, ಧಡಧಡನೆ, ಘುಮಘುಮನೆ.

೪. (ಆ) ಅನುಸರ್ಗಾವ್ಯಯಗಳು—

ಕೆಳಗಿನ ವಾಕ್ಯಗಳನ್ನು ನೋಡಿ:

(೧) ಈ ಪುಸ್ತಕದ ಸಲುವಾಗಿ ನಾನು ಮತ್ತೆ ಮನೆಗೆ ಹೋಗಬೇಕಾಯಿತು.

(೨) ಹೊಳೆಯ ತನಕ ಓಟ, ದೊರೆಯ ತನಕ ದೂರು.

(೩) ತಿಂಡಿಯನ್ನು ಕೊಟ್ಟ ಹೊರತು ಮಗು ಅಳುವನ್ನು ನಿಲ್ಲಿಸುವುದಿಲ್ಲ.

(೪) ಅವನು ಹುಲಿಯಂತೆ ಗರ್ಜಿಸಿ ಶತ್ರುಗಳ ಮೇಲೆ ಬಿದ್ದನು.
(ಹುಲಿಯ+ಅಂತೆ)

ಮೇಲೆ, 'ಸಲುವಾಗಿ, ತನಕ, —ಅಂತೆ' ಎಂಬ ಅವ್ಯಯಗಳು ವಿಭಕ್ತಿಪ್ರತ್ಯಯವನ್ನುಳ್ಳ ನಾಮಪದಗಳ ಮುಂದೆಯೂ, 'ಹೊರತು' ಎಂಬುದು ವಿಶೇಷಣ ಕೃದಂತದ ಮುಂದೆಯೂ ಸೇರಿ ಪ್ರಯೋಜನ, ಅವಧಿ, ಹೋಲಿಕೆ ಮೊದಲಾದ ಹಲವು ಬಗೆಯ ಅರ್ಥಗಳನ್ನು ಕೊಡುತ್ತವೆ. ಹೀಗೆ ವಿಭಕ್ತಿರೂಪಗಳಿಗೂ ವಿಶೇಷಣಕೃದಂತಗಳಿಗೂ ಮುಂದೆಸೇರಿಕೊಂಡು ಬರುವ ಅವ್ಯಯಗಳಿಗೆ ಅನುಸರ್ಗಾವ್ಯಯಗಳೆಂದು ಹೆಸರು.

ಇನ್ನೂ ಕೆಲವು ಅನುಸರ್ಗಾವ್ಯಯಗಳು :

ಸಂಗಡ, ಒಡನೆ, ಒಂದಿಗೆ, ವರೆಗೆ, ಓಸ್ಕರ, ಇಂತ.

೫. (ಇ) ಸಂಬಂಧಸೂಚಕಾವ್ಯಯಗಳು—

ಕೆಳಗಿನ ವಾಕ್ಯಗಳನ್ನು ನೋಡಿ :

(೧) ಬಲರಾಮನೂ ಕೃಷ್ಣನೂ ಕಂಸನ ಪಟ್ಟಣಕ್ಕೆ ಹೊರಟರು.
(ಬಲರಾಮನು+ಊ, ಕೃಷ್ಣನು+ಊ)

(೨) ಒಂದು ವಸ್ತುವಿನ ಸ್ಥಿತಿ ಅಥವಾ ಒಂದು ಕ್ರಿಯೆ ನಡೆಯುವುದರಿಂದ ಉಂಟಾಗುವ ಸ್ಥಿತಿ—ಇದನ್ನು ತಿಳಿಸುವ ಪದಕ್ಕೆ ಭಾವನಾಮವೆಂದು ಹೆಸರು.

(೩) ನಾನು ಅಂಗಡಿಗೇನೋ ಹೋಗಿದ್ದೆ ; ಆದರೆ ಸಕ್ಕರೆಯನ್ನು ತರುವುದು ಮರೆತುಹೋಯಿತು.

ಮೇಲೆ ಒಂದನೆಯವಾಕ್ಯದಲ್ಲಿ 'ಊ_ಊ' ಎಂಬ ಅವ್ಯಯಗಳು ಬಲರಾಮನು, ಕೃಷ್ಣನು ಎಂಬ ಎರಡು ಪದಗಳನ್ನು ಕೂಡಿಸುತ್ತವೆ ; ಎರ

ಡನೆಯ ವಾಕ್ಯದಲ್ಲಿ 'ಅಥವಾ' ಎಂಬುದು ಎರಡು ಪದಸಮುಚ್ಚಯಗಳನ್ನೂ ಮೂರನೆಯ ವಾಕ್ಯದಲ್ಲಿ 'ಆದರೆ' ಎಂಬುದು ಎರಡು ವಾಕ್ಯಗಳನ್ನೂ ಕೂಡಿಸುತ್ತವೆ.

ಹೀಗೆ ಪದಗಳಿಗಾಗಲಿ ಪದಸಮುಚ್ಚಯಗಳಿಗಾಗಲಿ ವಾಕ್ಯಗಳಿಗಾಗಲಿ ಸಂಬಂಧವನ್ನು ಕಲ್ಪಿಸುವ ಅವ್ಯಯಗಳಿಗೆ **ಸಂಬಂಧಸೂಚಕಾವ್ಯಯ**ಗಳೆಂದು ಹೆಸರು.

ಇನ್ನೂ ಕೆಲವು ಸಂಬಂಧಸೂಚಕಾವ್ಯಯಗಳು :

ಮತ್ತು, ಇಲ್ಲವೇ, ಆಗಲಿ–ಆಗಲಿ, ಆದರೂ, ಆದ್ದರಿಂದ, ಆದಕಾರಣ, ಅಲ್ಲದೆ.

೬. **(ಈ) ಭಾವಸೂಚಕಾವ್ಯಯಗಳು**—

ಕೆಳಗಿನ ವಾಕ್ಯಗಳನ್ನು ನೋಡಿ :

(೧) **ಆಹಾ,** ಈ ನೀರು ಸಕ್ಕರೆಯ ಪಾನಕದಂತಿದೆ !

(೨) **ಹೋ,** ಮಗ್ಗುಲ ಮನೆಗೆ ಬೆಂಕಿ ಹತ್ತಿಕೊಂಡಿದೆ !

(೩) ಅಗಸನು ಬಟ್ಟೆಗಳನ್ನು ತಂದನೆ ? (ತಂದನು+ಎ)

(೪) ಅದು ಹಾವೋ ಹಗ್ಗವೋ ? (ಹಾವು+ಓ, ಹಗ್ಗ+ಓ)

ಮೇಲೆ ದೊಡ್ಡ ಅಕ್ಷರದಲ್ಲಿ ಕೊಟ್ಟಿರುವ ಅವ್ಯಯಗಳಲ್ಲಿ 'ಆಹಾ' ಎನ್ನುವುದು ಆಶ್ಚರ್ಯವನ್ನೂ, 'ಹೋ' ಎನ್ನುವುದು ಗಡಿಬಿಡಿಯನ್ನೂ ತೋರಿಸುತ್ತವೆ. ಮೂರನೆಯ ವಾಕ್ಯದಲ್ಲಿ 'ತಂದನು' ಎಂಬ ಕ್ರಿಯಾಪದದಮೇಲೆ ಹತ್ತಿರುವ 'ಎ' ಎಂಬುದು ಪ್ರಶ್ನಾರ್ಥದಲ್ಲಿಯೂ ನಾಲ್ಕಯ ವಾಕ್ಯದ 'ಓ, ಓ' ಎಂಬುವು ಸಂಶಯಾರ್ಥದಲ್ಲಿಯೂ ಬಂದಿವೆ.

ಹೀಗೆ ಆಶ್ಚರ್ಯ, ಸಂಭ್ರಮ, ಪ್ರಶ್ನೆ, ಸಂಶಯ ಮೊದಲಾದ ಮನಸ್ಸಿನ ಭಾವಗಳನ್ನು ತೋರಿಸುವ ಅವ್ಯಯಗಳಿಗೆ **ಭಾವಸೂಚಕಾವ್ಯಯ**ಗಳೆಂದು ಹೆಸರು.

ಇನ್ನೂ ಕೆಲವು ಭಾವಸೂಚಕಾವ್ಯಯಗಳು :

ಆಃ, ಅಹಹ, ಓಹೋ, ಹೋಹೋ, ಅಯ್ಯೋ, ಎಲಾ, ಛಿ, ಥೂ, ಏ. (ಎ), ಓ (ಒ), ಆ (ಅ).

೭. ಹೀಗೆ ಅವ್ಯಯಗಳನ್ನು ಸಾಮಾನ್ಯಾವ್ಯಯ, ಅನುಸರ್ಗಾವ್ಯಯ, ಸಂಬಂಧಸೂಚಕಾವ್ಯಯ, ಭಾವಸೂಚಕಾವ್ಯಯ, ಎಂದು ನಾಲ್ಕು ಬಗೆಗಳಾಗಿ ವಿಂಗಡಿಸಬಹುದು. ಆದರೆ ಈ ವಿಭಾಗದಲ್ಲಿ ಒಂದು ಅವ್ಯಯವು ಒಂದೇ ಗುಂಪಿಗೆ ಮಾತ್ರ ಸೇರುವುದೆಂದು ಭಾವಿಸಬಾರದು.

ಕೆಳಗಿನ ವಾಕ್ಯಗಳನ್ನು ನೋಡಿ :

ಕೂಡಲೆ :

ಆ ಸುದ್ದಿಯನ್ನು ಕೇಳಿ, ನಾನು ಮೈಸೂರಿಗೆ ಕೂಡಲೆ ಹಿಂದಿರುಗಿದೆನು. (ಸಾಮಾನ್ಯಾವ್ಯಯ)

ಆ ಸುದ್ದಿಯನ್ನು ಕೇಳಿದ ಕೂಡಲೆ, ನಾನು ಮೈಸೂರಿಗೆ ಹಿಂದಿರುಗಿದೆನು. (ಅನುಸರ್ಗಾವ್ಯಯ)

ಹಾಗೆ :

ನನಗೆ ಹಾಗೆ ಮಾತುಕೊಟ್ಟು, ಈಗ ಮೋಸಮಾಡುವುದಕ್ಕೆ ನಿನಗೆ ಮನಸ್ಸು ಬಂದಿತಲ್ಲ ! (ಸಾಮಾನ್ಯಾವ್ಯಯ)

ಆತನ ಹಾಗೆ ವೀಣೆ ನುಡಿಸುವವರು ಈ ಊರಿನಲ್ಲಿ ಮತ್ತೊಬ್ಬರಿಲ್ಲ. (ಅನುಸರ್ಗಾವ್ಯಯ)

ಅಲ್ಲದೆ :

ದಮಯಂತಿ ನಳನಿಗಲ್ಲದೆ ಬೇರೊಬ್ಬನಿಗೆ ಮಾಲೆ ಹಾಕುವವಳಲ್ಲ. (ಅನುಸರ್ಗಾವ್ಯಯ)

ನಿಮಗೆ ಈ ಕಾಡಿನಲ್ಲಿ ದಾರಿ ತಿಳಿಯುವುದಿಲ್ಲ; ಅಲ್ಲದೆ ಹೊತ್ತು ಬೇರೆ ಮುಳುಗಿತು. (ಸಂಬಂಧಸೂಚಕಾವ್ಯಯ)

ಹೀಗೆ ಒಂದೇ ಅವ್ಯಯವು ಸಂದರ್ಭಾನುಸಾರವಾಗಿ ಬೇರೆ ಬೇರೆ ಗುಂಪುಗಳಿಗೆ ಸೇರಬಹುದು.

## ೨. ಅವ್ಯಯಗಳಪ್ರಯೋಗ

೮. ಮೇಲೆ ಹೇಳಿದ ಅವ್ಯಯಗಳಲ್ಲಿ ಕೆಂಪಗೆ, ಬೆಳ್ಳಗೆ, ಛಟಛಟನೆ, ಧಗಧಗನೇ ಮೊದಲಾದ ಸಾಮಾನ್ಯಾವ್ಯಯಗಳೂ ಓಹೋ, ಆಹಾ, ಹೋ, ಅಯ್ಯೋ, ಥೂ, ಛೀ, ಮೊದಲಾದ ಭಾವಸೂಚಕಾವ್ಯಯಗಳೂ ವಾಕ್ಯದಲ್ಲಿ ಬೇರೊಂದು ಪದಕ್ಕೆ ಸೇರಿಸಿಕೊಳ್ಳದೆ ಬಿಡಿಯಾಗಿ ನಿಲ್ಲುತ್ತವೆ.

೯. ವರೆಗೆ, ತನಕ, ಒಂದಿಗೆ, ಓಸ್ಕರ, ಅಂತೆ ಮೊದಲಾದ ಅನುಸರ್ಗಾವ್ಯಯಗಳನ್ನೂ ಊ, ಏ, ಓ, ಆ ಮೊದಲಾದ ಸಂಬಂಧಸೂಚಕ ಭಾವಸೂಚಕಾವ್ಯಯಗಳನ್ನೂ ಬಿಡಿಯಾಗಿ ಉಪಯೋಗಿಸುವುದಕ್ಕಾಗುವುದಿಲ್ಲ. ಮನೆಯವರೆಗೆ, ಹೊಳೆಯತನಕ, ನನ್ನೊಂದಿಗೆ, ಯಾರಿಗೋಸ್ಕರ, ರಾಮನಂತೆ, ಅವನೂ, ಅವನೇ, ಅವನೋ, ಬಂದೆಯಾ—ಹೀಗೆ ಯಾವುದಾದರೂ ಒಂದು ಪದಕ್ಕೆ ಅವು ಸೇರಿಕೊಂಡೇ ಬರಬೇಕು.

೧೦. ಹಾಗೆ ಕೂಡಲೆ, ಅಲ್ಲದೆ ಮೊದಲಾದುವು ಅನುಸರ್ಗಾವ್ಯಯಗಳಾದಾಗ_ಅವನ ಹಾಗೆ, ಬಂದ ಕೂಡಲೆ, ನನಗಲ್ಲದೆ_ಹೀಗೆ ಬೇರೊಂದು ಪದದೊಡನೆ ಸೇರಿಕೊಂಡು ಬರುತ್ತವೆ; ಮಿಕ್ಕ ಸಂದರ್ಭಗಳಲ್ಲಿ ಸ್ವತಂತ್ರವಾಗಿ ನಿಲ್ಲುತ್ತವೆ.

೧೧. ಈ ಅವ್ಯಯಗಳಲ್ಲಿ ವಿಶೇಷ ಪ್ರಯೋಗವುಳ್ಳ ಕೆಲವನ್ನು ವಾಕ್ಯದಲ್ಲಿ ಹೇಗೆ ಉಪಯೋಗಿಸಬೇಕೆಂಬುದನ್ನು ಕೆಳಗೆ ತೋರಿಸಿದೆ.

೧೨. ಅನುಸರ್ಗಾವ್ಯಯಗಳು—

(೧) ಇಂತ: ತಾರತಮ್ಯವನ್ನು ಸೂಚಿಸುವಾಗ ಚತುರ್ಥೀ ವಿಭಕ್ತಿಯ ರೂಪಕ್ಕೆ–ಇಂತ ಎಂಬುದು ಸೇರಿ ಅರ್ಥವನ್ನು ಇನ್ನೂ ಸ್ಫುಟಪಡಿಸುತ್ತದೆ.

ಉದಾಹರಣೆ.

ಮೆಣಸು ಹುಳಿತರೆ ಜೋಳಕ್ಕೆ ಕಡಮೆಯೇ?
,, ಜೋಳಕ್ಕಿಂತ ,, ? (ಜೋಳಕ್ಕೆ+ಇಂತ)

ಕೆಲವು ಕಡೆಗಳಲ್ಲಿ—ಇಂತ ಎಂಬುದು ಅವಶ್ಯವಾಗಿ ಸೇರಬೇಕಾಗುತ್ತದೆ.

ಉದಾಹರಣೆ.

ದುಷ್ಟರ ಸಂಗಡ ಬಾಳುವುದಕ್ಕಿಂತ ಕಾಡಿನಲ್ಲಿ ಅಲೆಯುವುದು ಲೇಸು.
(ಇಲ್ಲಿ-ಇಂತ ಸೇರದಿದ್ದರೆ ಅರ್ಥ ಸರಿಹೋಗುವುದಿಲ್ಲ.)

(೨) -ಓಸ್ಕರ, –ಆಗಿ, –,ಸಲುವಾಗಿ: ಪ್ರಯೋಜನವನ್ನು ಸೂಚಿಸುವಾಗ ಚತುರ್ಥೀ ವಿಭಕ್ತಿಯ ರೂಪಕ್ಕೆ ಈ ಅವ್ಯಯಗಳಲ್ಲಿ ಯಾವುದಾದರೂ ಒಂದು ಸೇರಿ ಅರ್ಥವನ್ನು ಸ್ಪಷ್ಟಪಡಿಸುತ್ತದೆ.

ಉದಾಹರಣೆ.

ಬರಗಾಲದಲ್ಲಿ ರೊಕ್ಕವನ್ನು ಹಿಡಿದುಕೊಂಡು ಬತ್ತಕ್ಕೆ ಅಲೆದರು.
" " ಬತ್ತಕ್ಕೋಸ್ಕರ (ಬತ್ತಕ್ಕಾಗಿ, ಬತ್ತಕ್ಕೆ ಸಲುವಾಗಿ) ಅಲೆದರು.

ಸಲುವಾಗಿ ಎಂಬುದು ಷಷ್ಠೀ ವಿಭಕ್ತಿಯ ರೂಪಕ್ಕೂ ಸೇರುತ್ತದೆ.

ಉದಾಹರಣೆ

ಮಗನ ವಿದ್ಯಾಭ್ಯಾಸದ ಸಲುವಾಗಿ ಅವರು ಹೊಟ್ಟೆ ಬಟ್ಟೆ ಕಟ್ಟಿ ಸಂಸಾರ ಮಾಡಿದರು.

(೩) -ವರೆಗೆ –ತನಕ: ಈ ಅವ್ಯಯಗಳು ಷಷ್ಠೀ ವಿಭಕ್ತಿಯ ರೂಪದಮೇಲಾಗಲಿ, ಕೃದಂತನಾಮದ ವಿಶೇಷಣರೂಪದ ಮೇಲಾಗಲಿ ಸೇರಿ, ಎಲ್ಲೆ, ಅವಧಿ ಮೊದಲಾದುವನ್ನು ತೋರಿಸುತ್ತವೆ.

ಉದಾಹರಣೆ.

ಷಷ್ಠ್ಯಂತಕ್ಕೆ ;

ಆ ಕಲ್ಲುಕಟ್ಟೆಯವರೆಗೆ (ತನಕ) ನೀವಿಬ್ಬರೂ ಓಡಿ; ನೋಡೋಣ.

ಕೃದಂತಕ್ಕೆ :

ನೀನು ಬರುವವರೆಗೆ (ತನಕ) ನಾನು ಅಯೋಧ್ಯೆಯನ್ನು ಪ್ರವೇಶಿಸುವುದಿಲ್ಲ.

(೪) -ಅಂತೆ, -ಹಾಗೆ : ಇವು ಷಷ್ಠೀ ವಿಭಕ್ತಿಯ ರೂಪಕ್ಕಾಗಲಿ ಕೃದಂತ ನಾಮದ ವಿಶೇಷಣರೂಪಕ್ಕಾಗಲಿ ಸೇರಿ, ಹೋಲಿಕೆ, ರೀತಿ ಮೊದಲಾದುವನ್ನು ತೋರಿಸುತ್ತವೆ.

ಉದಾಹರಣೆ.

ಷಷ್ಠ್ಯಂತಕ್ಕೆ ;

ಬೆಟ್ಟದಂತೆ ಬಂದ ಆಪತ್ತು ಮಂಜಿನಂತೆ ಕರಗಿಹೋಯಿತು.

ಅವನು ಕರಡಿಯ ಹಾಗೆ ಕೈಯನ್ನು ಚಾಚಿದನು.

ಕೃದಂತಕ್ಕೆ ;

ಈ ದಿನ ಮಳೆ ಬರುವಂತೆ ಕಾಣಿಸುತ್ತದೆ.

ಚೆಲುವಯ್ಯನ ಮಾತು ಹಿಂದೆ ನಡೆಯುತ್ತಿದ್ದ ಹಾಗೆ ಈಗ ನಡೆಯುವುದಿಲ್ಲ.

(೫) -ಒಡನೆ, -ಒಂದಿಗೆ, -ಸಂಗಡ : ಈ ಅವ್ಯಯಗಳು ಷಷ್ಠೀ ವಿಭಕ್ತಿಯ ರೂಪಕ್ಕೆ ಸೇರಿ ಸಹಯೋಗವನ್ನು ತೋರಿಸುತ್ತವೆ.

ಉದಾಹರಣೆ

ಸೇನೆಯೊಡನೆ ಅದಕ್ಕಿಂತಲೂ ದೊಡ್ಡ ಪರಿವಾರವು ಹೊರಟಿತು.

ಆ ಜಟ್ಟಿಯೊಂದಿಗೆ ಹೊರಾಡಿದವರಲ್ಲಿ ಒಬ್ಬನಾದರೂ ಅಲ್ಲಿಯತನಕ ಗೆದ್ದಿರಲಿಲ್ಲ.

ಈ ಮಾತನ್ನು ನನ್ನ ಸಂಗಡ ಮೊದಲೇ ಹೇಳಬಾರದಾಗಿತ್ತೆ !

(೬) -ಹೊರತು, -ಅಲ್ಲದೆ, -ಕೂಡ, -ತಾನೆ : ಈ ಅವ್ಯಯಗಳು ಷಷ್ಠಿಯನ್ನು ಬಿಟ್ಟು ಮಿಕ್ಕ ವಿಭಕ್ತಿರೂಪಗಳಮೇಲೆ ಸಾಮಾನ್ಯವಾಗಿ ಸೇರುತ್ತವೆ.

ಉದಾಹರಣೆ

ಅವನ ಹೊರತು ಇನ್ನೊಬ್ಬರು ಈ ಕೊಠಡಿಗೆ ಕಾಲಿಟ್ಟಿಲ್ಲ.

ನನಗೆ ಹೊರತು ಬೇರೆ ಯಾರಿಗೂ ಇದರಿಂದ ತೊಂದರೆಯಿಲ್ಲ.

ಅಶ್ವತ್ಥಾಮನಲ್ಲದೆ ಮತ್ತೊಬ್ಬನು ಕರ್ಣನನ್ನು ನನ್ನೆದುರಿಗೆ ದೂಷಿಸಿ ಬದುಕುತ್ತಿದ್ದನೆ!

ಈ ಚಕ್ರವ್ಯೂಹವನ್ನು ಭೇಧಿಸುವುದು ಅಭಿಮನ್ಯುವಿನಿಂದಲ್ಲದೆ ಅನ್ಯರಿಂದ ಆಗದು.

ವಿಜಯನಗರದಂಥ ಸಾಮ್ರಾಜ್ಯವನ್ನು ಕೂಡ ಮಣ್ಣುಗೂಡಿಸಿದ ಕಾಲಪುರುಷನಿಗೆ ನಮಸ್ಕಾರ.

ನನ್ನಲ್ಲಿ ಕೂಡ ನಿನಗೆ ನಂಬಿಕೆ ತಪ್ಪಿತೇ?

ಯಾರು ತಾನೆ ಈ ಮಾತನ್ನು ಕೇಳಿ ಸಂಕಟಪಡುವುದಿಲ್ಲ?

ಹಣವಿದ್ದವನಿಗೆ ತಾನೆ ಅದನ್ನು ಕಾಪಾಡುವ ಚಿಂತೆ!

೧೩. **ಸಂಬಂಧಸೂಚಕಾವ್ಯಯಗಳು—**

**(೧) ಉ-ಊ, ಮತ್ತು :**

ಕೆಳಗಿನ ಉದಾಹರಣೆಗಳನ್ನು ನೋಡಿ :

(೧) ಲಕ್ಷ್ಮಿಯೂ ಸರಸ್ವತಿಯೂ ಒಂದು ಕಡೆ ಸೇರುವುದು ಅಪೂರ್ವ.

(೨) ಅವನು ಊಟವನ್ನೂ ನಿದ್ರೆಯನ್ನೂ ಮರೆತು ಕೆಲಸಮಾಡುತ್ತಿದ್ದಾನೆ.

(೩) ಈ ಸಲದ ಪರೀಕ್ಷೆಯಲ್ಲಿ ಲಕ್ಷ್ಮಿ ಗಣಿತದಲ್ಲೂ ಭೂವಿವರಣೆಯಲ್ಲೂ ವ್ಯಾಕರಣದಲ್ಲೂ ಮೊದಲನೆಯವಳಾಗಿದ್ದಾಳೆ.

(೪) ಹಾಗೂ ಹೀಗೂ ಓಲಾಡದೆ ನೆಟ್ಟಗೆ ನಿಂತುಕೋ.

(೫) ಅವನು ಉದ್ಯಾನವನದಲ್ಲಿ ಅಲ್ಲಿಂದಿಲ್ಲಿಗೆ ಓಡಾಡುತ್ತಲೂ, ಒಂದೊಂದು ಸಲ ನಿರಾಶೆಯಿಂದ ನಿಟ್ಟುಸಿರು ಬಿಡುತ್ತಲೂ, ಮರುಗಳಿಗೆಯಲ್ಲೇ ಆಸೆಗೊಂಡು ದೃಷ್ಟಿಯನ್ನು ದಾರಿಯ ಕಡೆಗೆ ಹೊರಳಿಸುತ್ತಲೂ ಕಾಲವನ್ನು ಹೇಗೋ ಕಳೆದನು.

ಮೊದಲಿನ ಮೂರು ವಾಕ್ಯಗಳಲ್ಲಿ ಬೇರೆ ಬೇರೆ ವಿಭಕ್ತಿಗಳಲ್ಲಿರುವ ನಾಮಪದಗಳನ್ನೂ, ನಾಲ್ಕನೆಯದರಲ್ಲಿ ಅವ್ಯಯಗಳನ್ನೂ, ಐದನೆಯದರಲ್ಲಿ ಹಲವು ಪದಸಮುಚ್ಚಯಗಳನ್ನೂ ಉ–ಊ ಎಂಬ ಸಂಬಂಧಸೂಚಕಾವ್ಯಯಗಳು ಜೊತೆಗೂಡಿಸಿರುವುದನ್ನು ನೋಡಿ ಅವು ಕೂಡಿಸುವ ಪದಗಳ (ಅಥವಾ ಪದಸಮುಚ್ಚಯಗಳ) ಸಂಖ್ಯೆ ಎರಡಾಗಿರಬಹುದು. ಎರಡಕ್ಕಿಂತ ಹೆಚ್ಚಾಗಿರಬಹುದು. ಅಷ್ಟಕ್ಕೂ –ಊ ಎಂಬುದು ಪ್ರತ್ಯೇಕವಾಗಿ ಸೇರುತ್ತದೆ.

ಷಷ್ಠೀ ವಿಭಕ್ತಿಯ ರೂಪಗಳಿಗೂ ಕೃದಂತನಾಮಗಳ ವಿಶೇಷಣ ರೂಪಗಳಿಗೂ ಉ–ಊ ಎಂಬುವು ಸೇರುವುದಿಲ್ಲ. ಇವನ್ನು ಕೂಡಿಸಬೇಕಾದರೆ 'ಮತ್ತು ಎಂಬ ಅವ್ಯಯುವನ್ನು ನಡುವೆ ಉಪಯೋಗಿಸಬೇಕು.

ಉದಾಹರಣೆ

(೧) ನನ್ನ ಮತ್ತು ಕೃಷ್ಣನ ಪುಸ್ತಕಗಳು ಒಟ್ಟಿಗೇ ಕಳೆದು ಹೋದುವು.

(೨) ಬರುವ ಮತ್ತು ಹೋಗುವ ವೆಚ್ಚ ಎಷ್ಟಾಗುತ್ತದೆ ?

ಮೇಲಿನ ೧ನೆಯ ವಾಕ್ಯವನ್ನು 'ನನ್ನ ಪುಸ್ತಕವೂ ಕೃಷ್ಣನ ಪುಸ್ತಕವೂ . . . ' ಎಂದೂ, ೨ನೆಯ ವಾಕ್ಯವನ್ನು 'ಬರುವ ವೆಚ್ಚವೂ ಹೋಗುವ ವೆಚ್ಚವೂ . . . ' ಎಂದೂ ಬರೆಯಬಹುದು.

'ನನ್ನ ಮತ್ತು ನಿನ್ನ ಮಾತು' 'ಅವರ ಮತ್ತು ಇವರ ಸುದ್ದಿ'– ಇಂಥ ಕಡೆಗಳಲ್ಲಿ 'ನನ್ನ ನಿನ್ನ ಮಾತು,' 'ಅವರಿವರ ಸುದ್ದಿ,' ಎಂದು ಹೇಳುವುದೇ ರೂಢಿ. 'ಬರುವ ಮತ್ತು ಹೋಗುವ ವೆಚ್ಚ' ಎಂಬುದನ್ನು ಕೂಡ 'ಬರುವ ಹೋಗುವ ವೆಚ್ಚ' ಎಂದು ಹೇಳಬಹುದು.

'ಅವನಿಗೂ ಮತ್ತು ನನಗೂ, ಉಂಡೂ ಮತ್ತು ತಿಂದೂ, ಮನೆಯ ಒಳಗೂ ಮತ್ತು ಹೊರಗೂ'—ಹೀಗೆ 'ಊ–ಊ' ಬಂದ ಕಡೆ 'ಮತ್ತು' ಎಂಬುದನ್ನು ನಡುವೆ ಸೇರಿಸಬಾರದು. 'ಅವನಿಗೂ ನನಗೂ,' 'ಮನೆಯ ಒಳಗೆ ಮತ್ತು ಹೊರಗೆ'— ಈ ರೀತಿಯಾಗಿ ಬರೆಯಬೇಕು.

ಹಲವು ಪದಗಳನ್ನು ಸೇರಿಸಬೇಕಾದ ಕಡೆ, 'ಊ–ಊ' ಎಂಬುದನ್ನಾಗಲಿ 'ಮತ್ತು' ಎಂಬುದನ್ನಾಗಲಿ ಉಪಯೋಗಿಸದೆ, ಕೆಳಗೆ ಕಂಡಂತೆ ಬರೆಯುವುದುಂಟು :

ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳೆ, ಕಬ್ಬಿಣ, ಈಚೆಗೆ ಅಲ್ಯೂಮಿನಮ್—ಇವು ನಮಗೆ ಬಳಕೆಯಾಗಿರುವ ಲೋಹಗಳು.

–ಊ ಎಂಬುದು ಒಂದೇ ಪದಕ್ಕೆ ಸೇರಿ ಬಂದಾಗ, 'ಕೂಡ' ಎಂಬುದರ ಅರ್ಥವನ್ನು ಕೊಡುತ್ತದೆ.

ಉದಾಹರಣೆ

ಲೋಕದಲ್ಲಿ ಇಂಥ ಅನ್ಯಾಯವೂ ಉಂಟೆ ? (–ಅನ್ಯಾಯ ಕೂಡ), ಕರ್ಣನನ್ನು ಮೋಸವಿಲ್ಲದೆ ಗೆಲ್ಲುವುದು ಅರ್ಜುನನಿಗೂ ಸಾಧ್ಯವಾಗಲಿಲ್ಲ. ನೀನು ಎಲ್ಲಿಗೂ ಹೋಗಬೇಡ.

ನಾನು ಎಷ್ಟು ವೇಗವಾಗಿ ನಡೆದರೂ ರೈಲು ಸಿಕ್ಕಲಿಲ್ಲ.

(೨) ಓ–ಓ, ಆಗಲಿ ಆಗಲಿ, ಆದರೂ–ಆದರೂ, ಇಲ್ಲವೇ, ಅಥವಾ : ಇವೆಲ್ಲ 'ಒಂದಲ್ಲದಿದ್ದರೆ ಮತ್ತೊಂದು' ಎಂಬ ಅರ್ಥವನ್ನು

(ಎಂದರೆ ಪಕ್ಷಾಂತರವನ್ನು) ತೋರಿಸುವ ಅವ್ಯಯಗಳು. ಕೆಳಗಿನ ಉದಾಹರಣೆಗಳಿಂದ ಇವುಗಳ ಪ್ರಯೋಗ ಗೊತ್ತಾಗುತ್ತದೆ:

ನಮ್ಮ ತಂದೆ ಹೊಲಕ್ಕೋ ಗದ್ದೆಗೋ ತೋಟಕ್ಕೋ ಹೋಗಿದ್ದಾರೆ.
ಈ ಸಲದ ರಜೆಯಲ್ಲಿ ನಾವು ನೀಲಗಿರಿಗಾಗಲಿ ನಂದಿಯ ಬೆಟ್ಟಕ್ಕಾಗಲಿ ಹೋಗಬೇಕೆಂದಿದ್ದೇವೆ
ಸುಂಕವನ್ನು ಕೊಡಿ ಇಲ್ಲವೇ ಈ ಹೇರನ್ನು ಇಲ್ಲಿಯೇ ಬಿಟ್ಟುಹೋಗಿ.
ಅವನು ಮೋಸಗಾರನಾಗಿರಬೇಕು ಅಥವಾ ನೀನು ಹುಚ್ಚನಾಗಿರಬೇಕು.
ಹೊಳೆಗಾದರೂ ಬಾವಿಗಾದರೂ ಹೋಗಿ ಬೇಗ ಸ್ನಾನಮಾಡಿಕೊಂಡು ಬಾ.

(೩) **ಆದರೆ, ಆದರೂ, ಆದ್ದರಿಂದ (ಆದುದರಿಂದ), ಆದ ಕಾರಣ**: ಇವು ಮುಖ್ಯವಾಗಿ ವಾಕ್ಯಗಳಿಗೆ ಸಂಬಂಧವನ್ನು ಕಲ್ಪಿಸತಕ್ಕ ಅವ್ಯಯಗಳು.

'ಆದರೆ' ಎಂಬದು ಅರ್ಥದಲ್ಲಿ ವಿರೋಧವುಳ್ಳ ಎರಡು ವಾಕ್ಯಗಳನ್ನು ಕೂಡಿಸುತ್ತದೆ.

ಉದಾಹರಣೆ

ಕೃಷ್ಣಮೂರ್ತಿಯ ಬುದ್ಧಿ ಚುರುಕು; ಆದರೆ ಅವನು ಕಷ್ಟಪಟ್ಟು ಓದುವುದಿಲ್ಲ

'ಆದರೂ' ಎಂಬುದು ಕಾರಣವಿದ್ದರೂ ಕಾರ್ಯವು ನಡೆಯದನ್ನಾಗಲಿ, ಅಡ್ಡಿಯಿದ್ದರೂ ಕಾರ್ಯವು ನಡೆಯುವುದನ್ನಾಗಲಿ ಸೂಚಿಸಿ ಎರಡು ವಾಕ್ಯಗಳನ್ನು ಕೂಡಿಸುತ್ತದೆ.

ಉದಾಹರಣೆ

ಅವನು ಕಷ್ಟಪಟ್ಟು ಓದಿದನು; ಆದರೂ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಲಿಲ್ಲ.
ಸಂಜೆಯೆಲ್ಲಾ ಒಂದೇ ಸಮನಾಗಿ ಮಳೆ ಹೊಯ್ಯುತ್ತಿತ್ತು; ಆದರೂ ನಮ್ಮ ಪಾಠದ ಮೇಷ್ಟರು ಎಂದಿನಂತೆ ಏಳು ಘಂಟೆಗೆ ಸರಿಯಾಗಿ ಬಂದೇಬಿಟ್ಟರು.

'ಆದ್ದರಿಂದ' 'ಆದಕಾರಣ' ಎಂಬುವು ಕಾರ್ಯಕಾರಣ ಸಂಬಂಧವುಳ್ಳ ಎರಡು ವಾಕ್ಯಗಳನ್ನು ಕೂಡಿಸುತ್ತವೆ.

ಉದಾಹರಣೆ

ನೀರು ನಿಂತ ಕಡೆ ಸೊಳ್ಳೆಗಳು ಹೆಚ್ಚುತ್ತವೆ; ಆದ್ದರಿಂದ ಜೌಗು ನೆಲದಲ್ಲಿ ಮನೆ ಕಟ್ಟಬಾರದು.

ಅಲ್ಲಿ ಅವನನ್ನು ಯಾರೂ ಲಕ್ಷಿಸಲಿಲ್ಲ; ಆದಕಾರಣ ಅವನಿಗೆ ತುಂಬಾ ಕೋಪ ಬಂದಿತು.

೧೪. ಭಾವಸೂಕಾವ್ಯಯಗಳು—

ಭಾವಸೂಚಕಾವ್ಯಯಗಳಲ್ಲಿ ಪ್ರಶ್ನೆ, ಅವಧಾರಣೆ ಮೊದಲಾದುವನ್ನು ಸೂಚಿಸುವ –ಏ, –ಓ, –ಆ ಎಂಬ ಮೂರರ ಪ್ರಯೋಗವನ್ನು ಇಲ್ಲಿ ಮುಖ್ಯವಾಗಿ ಗಮನಿಸಬೇಕಾಗಿದೆ. –ಎ, –ಒ, –ಅ ಎಂಬಂತೆ ಇವು ಹ್ರಸ್ವವಾಗಿ ಬರುವುದೂ ಉಂಟು.

೧೫. ಪ್ರಶ್ನೆ :

ಕೆಳಗಿನ ವಾಕ್ಯಗಳನ್ನು ನೋಡಿ :

ಅಲ್ಲಿ ಬರುತ್ತಿರುವವನು ರಾಮನೇ (ರಾಮನೋ) ?
ರಾಮನು ಅಂಗಡಿಯಿಂದ ಬಂದನೇ (ಬಂದನೋ) ?
ನಿನಗೆ ಕಾಫಿ ಬೇಡವೇ (ಬೇಡವೋ) ?
ನೀನು ತೋಟಕ್ಕೆ ಹೋಗಿದ್ದೆಯಾ (ಹೋಗಿದ್ದೆಯೋ) ?
ನೀವು ನಾಳೆ ಮತ್ತೆ ಬರುತ್ತೀರ (ಬರುತ್ತೀರೋ) ?

–ಏ, –ಓ ಎಂಬ ಅವ್ಯಯಗಳು ನಾಮಪದ,-ಕ್ರಿಯಾಪದ, ಅವ್ಯಯಗಳ ಮೇಲೆ ಭೇದವಿಲ್ಲದೆ ಸೇರಿ ಪ್ರಶ್ನೆಯನ್ನು ತೋರಿಸುತ್ತವೆ. –ಆ ಎಂಬುದು ಮಧ್ಯಮಪುರುಷದ ಕ್ರಿಯಾಪದಗಳಿಗೆ ಮಾತ್ರ ಸೇರುತ್ತದೆ: ಇವುಗಳಿಗೆ –ಏ ಎಂಬುದು ಸೇರುವುದಿಲ್ಲ.

ಯಾರು, ಎಲ್ಲಿ, ಯಾವಾಗ ಮೊದಲಾದ ಪ್ರಶ್ನಾರ್ಥಕ ಪದಗಳು ವಾಕ್ಯದಲ್ಲಿದ್ದರೆ, ಪ್ರಶ್ನೆಯನ್ನು ತೋರಿಸುವುದಕ್ಕಾಗಿ –ಏ, –ಓ ಮೊದಲಾದುವು ಮತ್ತೆ ಬರುವುದಿಲ್ಲ.

ಉದಾಹರಣೆ.

ಈ ಸುದ್ದಿಯನ್ನು ಯಾರು ಹೇಳಿದರು ?
ನಾನು ಎಲ್ಲಿ ಹೋಗಲಿ ?
ನನ್ನ ಅಂಗಿಯನ್ನು ದರ್ಜಿ ಯಾವಾಗ ತರುತ್ತಾನೆ ?

೧೬. ಅನಿಶ್ಚಯ, ಸಂಶಯ :

ಯಾರು, ಎಲ್ಲಿ, ಯಾವಾಗ ಮೊದಲಾದ ಪ್ರಶ್ನಾರ್ಥಕ ಪದಗಳಿಗೆ –ಓ ಎಂಬುದು ಸೇರಿದರೆ ಆ ಪದಗಳು ಅನಿಶ್ಚಯವನ್ನು ತೋರಿಸುತ್ತವೆ.

ಉದಾಹರಣೆ.

ಆ ಸುದ್ದಿಯನ್ನು ಯಾರೋ ಯಾರಿಗೋ ಹೇಳಿದರು.
ಅವನು ಎಲ್ಲಿಗೋ ಹೋದನು.
ಯಾವಾಗಲೋ ಒಂದು ಸಲ ಅವನು ಇಲ್ಲಿಗೆ ಬರುತ್ತಾನೆ.

ಪ್ರಶ್ನಾರ್ಥಕ ಪದಗಳು ವಾಕ್ಯದಲ್ಲಿರುವಾಗ –ಓ ಎಂಬುದು ಕ್ರಿಯಾ ಪದಕ್ಕೆ ಸೇರಿ ಅನಿಶ್ಚಯವನ್ನು ತೋರಿಸುವುದೂ ಉಂಟು.

ಉದಾಹರಣೆ.

ಆ ಸುದ್ದಿಯನ್ನು ಯಾರು ಯಾರಿಗೆ ಹೇಳಿದರೋ.
ಅವನು ಎಲ್ಲಿಗೆ ಹೋದನೋ.
ಅವನು ಇಲ್ಲಿಗೆ ಯಾವಾಗ ಬರುತ್ತಾನೋ.

ಇದೋ ಅದೋ ಎಂಬ ಸಂಶಯವು ತೋರುವ ಕಡೆ ಸಂಶಯಕ್ಕೊಳಗಾದ ಪ್ರತಿಯೊಂದು ಪದದಮೇಲೂ ಓ ಎಂಬುದು ಸೇರುತ್ತದೆ.

ಉದಾಹರಣೆ.

ಅದು ಹೊಗೆಯೋ ಹಬೆಯೋ ?
ಅವನು ಬರುತ್ತಾನೋ ಬರುವುದಿಲ್ಲವೋ ತಿಳಿಯದು.

೧೭. **ಅವಧಾರಣೆ :**

ಒಂದು ಅರ್ಥವನ್ನು ಒತ್ತಿ ಹೇಳುವುದಕ್ಕೂ ನಿರ್ಧರಿಸಿ ಹೇಳುವುದಕ್ಕೂ 'ಅವಧಾರಣೆ' ಎಂದು ಹೆಸರು. –ಏ ಎಂಬುದು ಸೇರಿದ ಪದಕ್ಕೆ ಅವಧಾರಣೆಯುಂಟಾಗುತ್ತದೆ. ಕೆಳಗಿನ ಪ್ರಯೋಗಗಳನ್ನು ನೋಡಿ :

ನಾನು ಮೋಟಾರಿನಲ್ಲಿ ಬೆಂಗಳೂರಿಗೆ ಹೋಗುತ್ತೇನೆ.
ನಾನೇ ಮೋಟಾರಿನಲ್ಲಿ ಬೆಂಗಳೂರಿಗೆ ಹೋಗುತ್ತೇನೆ.
ನಾನು ಮೋಟಾರಿನಲ್ಲೇ ಬೆಂಗಳೂರಿಗೆ ಹೋಗುತ್ತೇನೆ.
ನಾನು ಮೋಟಾರಿನಲ್ಲಿ ಬೆಂಗಳೂರಿಗೇ ಹೋಗುತ್ತೇನೆ.
ನಾನು ಮೋಟಾರಿನಲ್ಲಿ ಬೆಂಗಳೂರಿಗೆ ಹೋಗಿಯೇ ಹೋಗುತ್ತೇನೆ.
ರೈಲು ಬಂದೇ ಬಿಟ್ಟಿತು.
ಅವನು ಪಾಠಶಾಲೆಗೆ ಹೋಗದೆಯೇ ನಿಂತನು.

ಇತ್ಯಾದಿ ;

# ಇಪ್ಪತ್ತ್ತಮೂರನೆಯ ಅಧ್ಯಾಯ

## ಅನ್ಯದೇಶ್ಯ ಶಬ್ದಗಳು

### ೧. ಅನ್ಯದೇಶ್ಯ—ದೇಶ್ಯ

೧. ಕೆಳಗಿನ ಉದಾಹರಣೆಗಳನ್ನು ನೋಡಿ:

ಈ ದಿನ ಟಪ್ಪಾಲು ಬರುವುದಕ್ಕೆ ಇಷ್ಟೇಕೆ ಹೊತ್ತಾಯಿತು ?
ಅಮಲ್ದಾರರು ಸರ್ಕೀಟಿನಿಂದ ಹಿಂದಕ್ಕೆ ಬಂದಮೇಲೆ ನಿಮ್ಮ ಅರ್ಜಿಯನ್ನು ನೋಡುತ್ತಾರೆ.
ಕೋರ್ಟು ಕಛೇರಿಗಳಿಗೆ ಹತ್ತಿ ಅವನು ಎಲ್ಲವನ್ನೂ ಕಳೆದುಕೊಂಡನು.
ಮಂಡ್ಯದಲ್ಲಿ ಸಕ್ಕರೆಯನ್ನು ತಯಾರು ಮಾಡುವ ದೊಡ್ಡ ಕಾರ್ಖಾನೆ ಇದೆ.
ಈ ಊರಿನಲ್ಲಿ ಹೋಟಲುಗಳ ಸಂಖ್ಯೆ ಹೆಚ್ಚುತ್ತಿದೆ.
ಟಿಕೀಟಿಲ್ಲದೆ ರೈಲಿನಲ್ಲಿ ಪ್ರಯಾಣಮಾಡುವವರಿಗೆ ಶಿಕ್ಷೆಯಾಗುತ್ತದೆ.
ಮಿಷಿನ್ ಅಕ್ಕಿಯ ಅನ್ನಕ್ಕಿಂತ ಕೊಟ್ಟಣದ ಅಕ್ಕಿಯ ಅನ್ನದಲ್ಲಿ ಸಾರಹೆಚ್ಚು.
ನನ್ನ ತಮ್ಮನಿಗೆ ನೂರೆರಡು ಡಿಗ್ರಿ ಜ್ವರವಿದೆಯೆಂದು ಡಾಕ್ಟರು ಹೇಳಿದರು.

ಇಲ್ಲಿ ದೊಡ್ಡ ಅಕ್ಷರದಲ್ಲಿರುವ ಶಬ್ದಗಳಲ್ಲಿ ಟಪ್ಪಾಲು, ಅಮಲ್ದಾರ, ಅರ್ಜಿ, ಕಛೇರಿ, ತಯಾರು, ಕಾರ್ಖಾನೆ ಎಂಬುವು ಹಿಂದೂಸ್ತಾನಿಯಿಂದಲೂ, ಸರ್ಕೀಟು, ಕೋರ್ಟು, ಹೋಟಲು, ಟಿಕೀಟು, ರೈಲು, ಮಿಷಿನ್, ಡಿಗ್ರಿ, ಡಾಕ್ಟರು ಎಂಬುವು ಇಂಗ್ಲಿಷಿನಿಂದಲೂ ಬಂದು ಕನ್ನಡ ಭಾಷೆಗೆ ಸೇರಿವೆ. ಹಿಂದೂಸ್ತಾನಿ, ಇಂಗ್ಲಿಷ್ ಭಾಷೆಗಳನ್ನು ಅರಿಯದವರು ಕೂಡ ಈ ಶಬ್ದಗಳನ್ನು ಈಗ ಕನ್ನಡದಲ್ಲಿ ಉಪಯೋಗಿಸುತ್ತಾರೆ.

ಮೇಲಿನ ಉದಾಹರಣೆಗಳಲ್ಲಿರುವ ದಿನ, ಸಂಖ್ಯೆ, ಸಕ್ಕರೆ, ಪ್ರಯಾಣ, ಶಿಕ್ಷೆ, ಅನ್ನ, ಜ್ವರ—ಈ ಶಬ್ದಗಳನ್ನು ನೋಡಿ. ಇವು ನಮಗೆ ಬಳಕೆಯಾಗಿರುವುದರಿಂದ ಮೊದಲಿನಿಂದಲೂ ಕನ್ನಡದಲ್ಲೇ ಇದ್ದಂತೆ ತೋರುತ್ತವೆ. ಆದರೆ ಇವು ಸಂಸ್ಕೃತ ಭಾಷೆಯಿಂದ ಬಂದು ಕನ್ನಡಕ್ಕೆ ಸೇರಿದ ಶಬ್ದಗಳು.

೨. ಒಂದು ಪ್ರದೇಶದಲ್ಲಿ ಸಾಮಾನ್ಯವಾಗಿ ಒಂದು ಭಾಷೆ ಹರಡಿಕೊಂಡಿರುತ್ತದೆ. (ಉದಾಹರಣೆಗೆ, ನಮ್ಮ ದೇಶದಲ್ಲಿ ಕನ್ನಡ ರೂಢಿಯಾಗಿದೆ.) ಈ ದೇಶ ಭಾಷೆಯನ್ನು ಆಡುವವರಿಗೆ ಬೇರೆ ಭಾಷೆಗಳನ್ನು ಆಡುವವರ ಸಂಗಡ ಹಲವು ವಿಧಗಳಲ್ಲಿ ಬಳಕೆಯುಂಟಾಗುತ್ತದೆ. ಹೊರಗಿನಿಂದ ಅವರು ಬಂದು ಇವರ ಸಂಗಡ ವ್ಯಾಪಾರಮಾಡಬಹುದು; ಇವರ ದೇಶವನ್ನು

ಗೆದ್ದು ಆಳಬಹುದು; ಇಲ್ಲೇ ಮನೆ ಮಾಡಿಕೊಂಡು ನೆಲಸಬಹುದು. ಇಂಥ ಸಂದರ್ಭಗಳಲ್ಲಿ ಅವರ ಭಾಷೆಗಳಿಂದ ಹಲಕೆಲವು ಮಾತುಗಳು ಬಂದು ದೇಶಭಾಷೆಗೆ ಸೇರಿಹೋಗುತ್ತವೆ. ಹೀಗೆ ಹೊರಗಿನ ಭಾಷೆಗಳಿಂದ ಬಂದು ಒಂದು ಭಾಷೆಗೆ ಸೇರುವ ಶಬ್ದಗಳಿಗೆ ಅನ್ಯದೇಶ್ಯಗಳೆಂದು ಹೆಸರು. ಮೇಲೆ ಪಟ್ಟಿಮಾಡಿರುವ ಶಬ್ದಗಳೆಲ್ಲ ಕನ್ನಡಕ್ಕೆ ಸೇರಿರುವ ಅನ್ಯದೇಶ್ಯಗಳು.

೩. ಕನ್ನಡಕ್ಕೆ ತುಂಬ ಹಿಂದಿನಿಂದಲೂ ಅನ್ಯಭಾಷೆಗಳ ಸಂಪರ್ಕ ಇದೆ. ದಕ್ಷಿಣ ಹಿಂದೂದೇಶಕ್ಕೆ ಆರ್ಯರು ಬಂದು ನೆಲಸಿದಾಗಿನಿಂದಲೂ ಸಂಸ್ಕೃತ ಶಬ್ದಗಳು ಕನ್ನಡಕ್ಕೆ ಸೇರುತ್ತಾ ಬಂದಿವೆ. ಈಚೆಗೆ ಮಹಮ್ಮದೀಯರ ಆಡಳಿತಕ್ಕೆ ದೇಶವು ಒಳಪಟ್ಟಾಗ ಹಿಂದೂಸ್ತಾನಿಯ ಶಬ್ದಗಳು ಬಂದುವು. ಈಗಲಂತು ಇಂಗ್ಲೀಷರ ಪ್ರಭುತ್ವದಲ್ಲಿ ಇಂಗ್ಲೀಷಿನ ಶಬ್ದಗಳು ಕನ್ನಡಕ್ಕೆ ಹೇರಳವಾಗಿ ಸೇರುತ್ತಿವೆ. ಹೀಗೆ, ಸಂಸ್ಕೃತ, ಹಿಂದೂಸ್ತಾನಿ, ಇಂಗ್ಲಿಷ್— ಈ ಮೂರು ಕಡೆಗಳಿಂದ ಬಂದ ಶಬ್ದಗಳಲ್ಲದೆ ಪೋರ್ಚುಗೀಸ್ ಮೊದಲಾದ ಭಾಷೆಗಳ ಕೆಲವು ಶಬ್ದಗಳು ಕನ್ನಡಕ್ಕೆ ಸೇರಿರುವುದೂ ಉಂಟು.

೪. ಅನ್ಯದೇಶ್ಯಗಳಿಗೆ ಇನ್ನು ಕೆಲವು ಉದಾಹರಣೆಗಳು.—

ಸಂಸ್ಕೃತದಿಂದ ಬಂದವು : ಭೂಮಿ, ನದಿ, ಆಜ್ಞೆ, ದಯೆ, ರಾತ್ರಿ, ಕಥೆ, ಸಂತೆ, ನಿದ್ದೆ, ಹಬ್ಬ, ದೀಪ, ಮುಖ, ಶಕ್ತಿ, ಧರ್ಮ, ಪುಣ್ಯ, ರಾಜ, ಯುದ್ಧ, ಬಡಗಿ, ಬಸ್ತಿ, ಬೀದಿ, ಇತ್ಯಾದಿ.

ಹಿಂದೂಸ್ತಾನಿಯಿಂದ ಬಂದವು : ಜಮೀನು, ಸರ್ಕಾರ, ರೈತ, ಸಲಾಮು, ಕಾನೂನು, ಕಾಗದ, ಬಂದೂಕ, ಬದಲು, ಚುನಾವಣೆ, ಮಂಜೂರು, ದರ್ಬಾರು, ಅಸಲು, ನಕಲು, ರಸ್ತೆ, ಕುರ್ಚಿ, ಇತ್ಯಾದಿ.

ಇಂಗ್ಲಿಷಿನಿಂದ ಬಂದವು : ಲಾಯರು, ಬ್ಯಾಂಕು, ಎಕರೆ, ಪ್ಲೇಗು, ಮೆಂಬರು, ನಂಬರು, ಮೈಲಿ, ಗಿಲೀಟು, ಕಾರ್ಡು, ಸ್ಟಾಂಪು, ಫೀಜು, ಕಾಲೇಜು, ಜೈಲು, ಇತ್ಯಾದಿ.

ಪೋರ್ಚುಗೀಸಿನಿಂದ ಬಂದವು : ಅಲಮಾರು, ಸಾಬೂನು, ಪಾದ್ರಿ, ಇಸ್ತ್ರಿ, ಮೇಜು, ಇತ್ಯಾದಿ.

೫. ಒಂದು ಭಾಷೆಗೆ ಅನ್ಯದೇಶ್ಯಗಳು ಸೇರುವಾಗ ಹಲವುವೇಳೆ ರೂಪ ವ್ಯತ್ಯಾಸ ಹೊಂದುವುದುಂಟು. ಉದಾಹರಣೆಗೆ, ಮೇಲೆ ಕೊಟ್ಟಿರುವ ಕೆಲವು ಸಂಸ್ಕೃತ ಮತ್ತು ಇಂಗ್ಲಿಷ್ ಶಬ್ದಗಳನ್ನು ನೋಡಿ :

| ಮೂಲಭಾಷೆ | ಮೂಲರೂಪ | ಕನ್ನಡರೂಪ |
|---|---|---|
| ಸಂಸ್ಕೃತ | ಶರ್ಕರಾ | ಸಕ್ಕರೆ |
| | ಸಂಸ್ಥಾ | ಸಂತೆ |
| | ಪರ್ವನ್ | ಹಬ್ಬ |
| | ಕಥಾ | ಕಥೆ |

| ಮೂಲಭಾಷೆ | ಮೂಲರೂಪ | ಕನ್ನಡರೂಪ |
|---|---|---|
| ಇಂಗ್ಲಿಷ್ : | ಏಕ್‌ರ್ (acre) | ಎಕರೆ |
| | ಗಿಲ್ಟ್ (gilt) | ಗಿಲೀಟು |
| | ಟಿಕೆಟ್ (Ticket) | ಟಿಕೀಟು |
| | ಮೈಲ್ (mile) | ಮೈಲಿ |
| | | ಇತ್ಯಾದಿ. |

೭. ಹೊರಗಿನ ಭಾಷೆಗಳಿಂದ ಬಾರದೆ, ಒಂದು ಭಾಷೆಯಲ್ಲಿ ಮೊದಲನಿಂದಲೂ ಇರತಕ್ಕ ಅಥವಾ ಅದರ ಪ್ರಕೃತಿಗಳಿಂದಲೇ ಸಾಧಿತವಾಗಿರತಕ್ಕ ಶಬ್ದಗಳಿಗೆ **ದೇಶ್ಯಶಬ್ದ**ಗಳೆಂದು ಹೆಸರು.

ಉದಾಹರಣೆ.

ನೆಲ, ಹೊಲ, ಅಕ್ಕಿ, ಕಲ್ಲು, ಹೊಳೆ, ಒಳ್ಳೆಯ, ಕಟ್ಟು, ಒಂದು, ಎರಡು, ಹೇಳು, ಕೇಳು, ಹೆಚ್ಚು, ತಗ್ಗು, ಸುಮ್ಮನೆ, ಮೆಲ್ಲಗೆ, ತಿಳಿವಳಿಕೆ, ಹೊಂದಿಕೆ, ನಡತೆ, ತಿಳಿಸು, ಕಲಿಸು, ಇತ್ಯಾದಿ.

## ೨. ತತ್ಸಮ_ತದ್ಭವ

೭. ಸಂಸ್ಕೃತದಿಂದ ಕನ್ನಡಕ್ಕೆ ಅತಿವಿಪುಲವಾಗಿ ಶಬ್ದಗಳು ಬಂದಿರುವುದರಿಂದ ಅವುಗಳನ್ನು ಕುರಿತು ಕೆಲವು ಹೆಚ್ಚು ಸಂಗತಿಗಳನ್ನು ತಿಳಿದುಕೊಳ್ಳುವುದು ಅವಶ್ಯಕ.

೮. ಈ ಶಬ್ದಗಳನ್ನು ತತ್ಸಮ, ತದ್ಭವ ಎಂದು ಎರಡು ಗುಂಪುಗಳಾಗಿ ವಿಂಗಡಿಸಬಹುದು.

೯. ತತ್ಸಮ :

(೧) ಕೆಲವು ಶಬ್ದಗಳು ಯಾವ ವ್ಯತ್ಯಾಸವನ್ನೂ ಹೊಂದದೆ ಕನ್ನಡದಲ್ಲಿ ಬಳಕೆಯಾಗಿವೆ.

ಉದಾಹರಣೆ.

ಅನ್ನ, ಗೃಹ, ಧರ್ಮ, ಪಾಪ, ಶುಧ, ಸತ್ಯ, ಮತಿ, ಗತಿ, ಇತ್ಯಾದಿ.

(೨) ಇನ್ನು ಕೆಲವಕ್ಕೆ ಅಂತ್ಯಭಾಗದಲ್ಲಿ ಮಾತ್ರ ವ್ಯತ್ಯಾಸವುಂಟಾಗಿರುತ್ತದೆ.

ಉದಾಹರಣೆ.

(ಅ) ದಯಾ_ದಯು, ನದೀ_ನದಿ, ವಧೂ_ವಧು, ಇತ್ಯಾದಿ.
ಇಲ್ಲಿ ಶಬ್ದದ ಕೊನೆಯ ದೀರ್ಘಸ್ವರವು ಹ್ರಸ್ವವಾಗಿದೆ.

(ಆ) ಮಾಲಾ_ಮಾಲೆ, ಗಂಗಾ_ಗಂಗೆ, ಶಾಲಾ_ಶಾಲೆ, ಪ್ರಶ್ನೆ_ಪ್ರಶ್ನೆ, ಅಭಿಲಾಷ_ಅಭಿಲಾಷೆ, ಮಾತೃ_ಮಾತೆ ; ಪಿತೃ_ಪಿತ, ಕರ್ತೃ_ಕರ್ತ, ಇತ್ಯಾದಿ.
ಇಲ್ಲಿ ಶಬ್ದದ ಕೊನೆಯ ಸ್ವರಕ್ಕೆ ಸಂದರ್ಭಾನುಸಾರವಾಗಿ ಎಕಾರವೋ ಅಕಾರವೋ ಆದೇಶವಾಗಿದೆ.

(ಇ) ರಾಜನ್–ರಾಜ, ಆತ್ಮನ್–ಆತ್ಮ ;
ಯಶಸ್–ಯಶಸ್ಸು, ಶಿರಸ್–ಶಿರಸ್ಸು, ಮನಸ್–ಮನಸ್ಸು,
ಜಗತ್–ಜಗತ್ತು, ಸಂಪತ್–ಸಂಪತ್ತು, ವಿಪತ್–ವಿಪತ್ತು,
ದಿಕ್–ದಿಕ್ಕು, ವಾಕ್–ವಾಕ್ಕು, ಇತ್ಯಾದಿ.

ಇಲ್ಲಿ ಶಬ್ದದ ಕೊನೆಯ ವ್ಯಂಜನವು ಲೋಪವಾಗಿದೆ ; ಅಥವಾ ಅದಕ್ಕೆ ದ್ವಿತ್ವವುಂಟಾಗಿ ಮುಂದೆ ಉಕಾರವು ಸೇರಿದೆ.

ಹೀಗೆ (೧) ರೂಪವ್ಯತ್ಯಾಸ ಹೊಂದದೆ, ಅಥವಾ (೨) ಅಂತ್ಯಭಾಗದಲ್ಲಿ ಮಾತ್ರ ವ್ಯತ್ಯಾಸಹೊಂದಿ ಕನ್ನಡದಲ್ಲಿ ಬಳಕೆಯಾಗಿರುವ ಸಂಸ್ಕೃತ ಶಬ್ದಗಳಿಗೆ ತತ್ಸಮಗಳೆಂದು ಹೆಸರು. 'ತತ್ಸಮ' ಎಂದರೆ 'ಅದಕ್ಕೆ (ಸಂಸ್ಕೃತಕ್ಕೆ) ಸಮನಾದದ್ದು' ಎಂದು ಅರ್ಥ.

೧೦. ತದ್ಭವ :

(೩) ಕನ್ನಡದಲ್ಲಿ ಬಳಕೆಯಾಗಿರುವ ಹಲವು ಸಂಸ್ಕೃತ ಶಬ್ದಗಳಿಗೆ ಅಂತ್ಯಭಾಗದಲ್ಲಿ ಮಾತ್ರವಲ್ಲದೆ ಒಳಭಾಗದಲ್ಲೂ ವ್ಯತ್ಯಾಸವುಂಟಾಗಿರುತ್ತದೆ. ಇಂಥ ಶಬ್ದಗಳಿಗೆ ತದ್ಭವಗಳೆಂದು ಹೆಸರು. 'ತದ್ಭವ' ಎಂದರೆ 'ಅದರಿಂದ (ಸಂಸ್ಕೃತದಿಂದ) ಬಂದದ್ದು' ಎಂದು ಅರ್ಥ.*

ಉದಾಹರಣೆ.

(ಅ) ಯಾತ್ರಾ–ಜಾತ್ರೆ, ಯೋಗಿನ್–ಯೋಗಿ.
ಇಲ್ಲಿ ಆದಿಯ ಯಕಾರಕ್ಕೆ ಬದಲಾಗಿ ಜಕಾರವು ಬಂದಿದೆ.

(ಆ) ಆಶಾ–ಆಸೆ, ಮಷೀ–ಮಸಿ.
ಇಲ್ಲಿ ಶಕಾರ ಷಕಾರಗಳಿಗೆ ಬದಲಾಗಿ ಸಕಾರವು ಬಂದಿದೆ.

(ಇ) ಕಂಥಾ–ಕಂತೆ, ಅಚ್ಛ–ಅಚ್ಚ.
ಇಲ್ಲಿ ಮಹಾಪ್ರಾಣಕ್ಕೆ ಬದಲಾಗಿ ಅಲ್ಪಪ್ರಾಣವು ಬಂದಿದೆ.

(ಈ) ತಟ–ದಡ, ಚತುರ–ಚದುರ.
ಇಲ್ಲಿ ವರ್ಗದ ಮೊದಲನೆಯ ವರ್ಣಕ್ಕೆ ಬದಲಾಗಿ ಮೂರನೆಯ ವರ್ಣವು ಬಂದಿದೆ.

(ಉ) ವಾಪೀ–ಬಾವಿ, ಕಬಳ–ಕವಳ, ಯಾಮ–ಜಾವ.
ಇಲ್ಲಿ ಪಕಾರ ಬಕಾರ ಮಕಾರಗಳಿಗೆ ಬದಲಾಗಿ ವಕಾರವು ಬಂದಿದೆ. ವಾಪೀ–ಬಾವಿ, ಎಂಬ ಕಡೆ ವಕಾರವು ಬಕಾರವಾಗಿರುವುದನ್ನೂ ಗಮನಿಸಿ.

(ಊ) ಶ್ರೀ–ಸಿರಿ, ಚಿತ್ರ–ಚಿತ್ತಾರ.
ಇಲ್ಲಿ ಸಂಯುಕ್ತ ವ್ಯಂಜನಗಳ ನಡುವೆ ಸ್ವರವು ಸೇರಿದೆ.

---

* ತದ್ಭವಗಳಲ್ಲಿ ಹಲವು ಪ್ರಾಕೃತದ ಮೂಲಕ ಕನ್ನಡಕ್ಕೆ ಬಂದವುಗಳು. ಆ ವಿಚಾರವನ್ನು ಇಲ್ಲಿ ನಿರೂಪಿಸುವುದು ಅನಾವಶ್ಯಕವೆಂದು ಭಾವಿಸಿ, ಸಂಸ್ಕೃತಕ್ಕೂ ಪ್ರಾಕೃತಕ್ಕೂ ಭೇದವನ್ನು ತೋರಿಸಿಲ್ಲ.

(ಋ) ಕರ್ತರೀ–ಕತ್ತರಿ, ನಿದ್ರಾ–ನಿದ್ದೆ, ಪಕ್ಷ–ಪಕ್ಕ.
ಇಲ್ಲಿ ವಿಜಾತೀಯ ಸಂಯುಕ್ತ ವ್ಯಂಜನಗಳು ಸಜಾತೀಯಗಳಾಗಿವೆ.
(ೠ) ಸ್ಫಟಿಕ–ಫಟಿಕ, ಸಂಸ್ಥಾ–ಸಂತೆ, ಕ್ಷೀರ–ಕೀರು.
ಇಲ್ಲಿ ಸಂಯುಕ್ತ ವ್ಯಂಜನಗಳಲ್ಲಿ ಒಂದು ಬಿಟ್ಟುಹೋಗಿದೆ.

ಇಂಥ ವ್ಯತ್ಯಾಸಗಳು ಇನ್ನೂ ಹಲವು ಉಂಟು. ಅವುಗಳನ್ನೆಲ್ಲಾ ದೊಡ್ಡ ವ್ಯಾಕರಣ ಗ್ರಂಥಗಳಿಂದ ತಿಳಿದುಕೊಳ್ಳಬೇಕು.

೧೧. ಒಂದು ಸಂಸ್ಕೃತ ಶಬ್ದದ ತತ್ಸಮ ತದ್ಭವ ರೂಪಗಳೆರಡೂ ಕನ್ನಡದಲ್ಲಿ ಬಳಕೆಯಲ್ಲಿರುವುದುಂಟು.

ಉದಾಹರಣೆ.

| ಸಂಸ್ಕೃತರೂಪ | ತತ್ಸಮ | ತದ್ಭವ | |
|---|---|---|---|
| ರಾಜನ್ | ರಾಜ | ರಾಯ | |
| ಯೋಗಿನ್ | ಯೋಗಿನ್ | ಜೋಗಿ | |
| ನಿದ್ರಾ | ನಿದ್ರೆ | ನಿದ್ದೆ | |
| ಘಂಟಾ | ಘಂಟೆ | ಗಂಟೆ | |
| ಯಮ | ಯಮ | ಜವ | |
| ಧ್ವನಿ | ಧ್ವನಿ | ದನಿ | ಇತ್ಯಾದಿ. |

## ೩. ಸಂಸ್ಕೃತ ಸಂಧಿ

೧೨. ಕನ್ನಡದಲ್ಲಿ ಸಂಸ್ಕೃತ ಶಬ್ದಗಳನ್ನು ಬಿಡಿಯಾಗಿ ಮಾತ್ರವಲ್ಲದೆ, ಸಮಾಸಮಾಡಿಯೂ ಉಪಯೋಗಿಸುವುದುಂಟು. ತತ್ಸಮದೊಂದಿಗೆ ತತ್ಸಮವು ಸೇರಿ ಸಮಾಸವಾದಾಗ, ಕನ್ನಡದಲ್ಲಿ ನಮಗೆ ಬಳಕೆಯಾಗಿರುವ ಲೋಪ, ಆಗಮ ಮೊದಲಾದ ಸಂಧಿಕಾರ್ಯಗಳಾಗುವುದಿಲ್ಲ : ಬೇರೆ ಬಗೆಯ ಸಂಧಿಕಾರ್ಯಗಳಾಗುತ್ತವೆ.

ಕೆಳಗಿನ ಉದಾಹರಣೆಗಳನ್ನು ನೋಡಿ :

ಅವನ ವಿದ್ಯಾಭ್ಯಾಸಕ್ಕೆ ಎಷ್ಟೋ ಅಡ್ಡಿಗಳು ಬಂದುವು.
(ವಿದ್ಯಾ + ಅಭ್ಯಾಸ)
ಕೈಲಾಸೇಶ್ವರನ ದೇವಾಲಯವನ್ನು ಜೀರ್ಣೋದ್ಧಾರ ಮಾಡುವುದಕ್ಕೆ ಹಣ ಕೂಡಿಸಬೇಕೆಂದು ನಿಶ್ಚಯವಾಗಿದೆ.
(ಕೈಲಾಸ+ಈಶ್ವರ, ದೇವ+ಆಲಯ, ಜೀರ್ಣ+ಉದ್ಧಾರ)
ಪ್ರಭೂತ್ತಮನೆ, ಚಿದಾನಂದರೆಂಬ ಯತೀಶ್ವರರು ಇಲ್ಲಿಗೆ ದಯಮಾಡಿಸುತ್ತಿದ್ದಾರೆ. (ಪ್ರಭು+ಉತ್ತಮ, ಚಿತ್+ಆನಂದ, ಯತಿ+ಈಶ್ವರ)
ದೇವೇಂದ್ರನ ಆಸ್ಥಾನದಲ್ಲಿ ಹಲವರು ಮಹರ್ಷಿಗಳಿದ್ದರು.
(ದೇವ+ಇಂದ್ರ, ಮಹಾ+ಋಷಿ)
ಈ ಮೂಲಿಕೆ ಶೀತಜ್ವರಕ್ಕೆ ಸಿದ್ಧೌಷಧ. (ಸಿದ್ಧ+ಔಷಧ)

ಆತನ ಪಿತ್ರಾರ್ಜಿತವಾದ ಆಸ್ತಿಯೆಲ್ಲ ಏನಾಯಿತು ?
(ಪಿತೃ+ಅರ್ಜಿತ)
ನನ್ನ ಮಾತಿಗೆ ಪ್ರತ್ಯುತ್ತರ ಕೊಡಲು ಅವನಿಗೆ ನಾಲಗೆಯೇ ಇರಲಿಲ್ಲ.
(ಪ್ರತಿ+ಉತ್ತರ)
ಗುರ್ವಾಜ್ಞೆಯನ್ನು ಮೀರಿದರೆ ನನಗೆ ಅಧೋಗತಿಯುಂಟಾದೀತು.
(ಗುರು+ಆಜ್ಞೆ, ಅಧಸ್+ಗತಿ)
ಷಣ್ಮುಖನೆಂದು ಕುಮಾರಸ್ವಾಮಿಗೆ ಹೆಸರು. (ಷಟ್+ಮುಖ)

೧೩. ಇಲ್ಲಿ ಹಲವು ಬಗೆಯ ಸಂಧಿ ಕಾರ್ಯಗಳು ನಡೆದಿವೆಯೆಂಬುದು ನೋಡಿದ ಕೂಡಲೆ ಗೊತ್ತಾಗುತ್ತದೆ. ಇವುಗಳಲ್ಲಿ ಮುಖ್ಯವಾದ ನಾಲ್ಕು ವಿಷಯವನ್ನು ಮುಂದೆ ಹೇಳಿದೆ.

(೧) ಸವರ್ಣಸ್ವರಗಳಿಗೆ* ಸಂಧಿಯಾದಾಗ ಎರಡಕ್ಕೂ ಒಂದೇ ದೀರ್ಘಸ್ವರವು ಆದೇಶವಾಗುತ್ತದೆ. ಇದಕ್ಕೆ **ಸವರ್ಣದೀರ್ಘಸಂಧಿ**ಯೆಂದು ಹೆಸರು.

ಉದಾಹರಣೆ.

ದೇವ+ಆಲಯ=ದೇವಾಲಯ (ಅ+ಆ=ಆ)
ವಿದ್ಯಾ+ಅಭ್ಯಾಸ=ವಿದ್ಯಾಭ್ಯಾಸ (ಆ+ಅ=ಆ)
ಯತಿ+ಈಶ್ವರ=ಯತೀಶ್ವರ (ಇ+ಈ=ಈ)
ಪ್ರಭು+ಉತ್ತಮ=ಪ್ರಭೂತ್ತಮ (ಉ+ಉ=ಊ)
ಇತ್ಯಾದಿ.

(೨) ಅ ಆ ಕಾರಗಳಲ್ಲಿ ಒಂದರ ಮುಂದೆ, ಇ ಕಾರವಾಗಲಿ ಈ ಕಾರವಾಗಲಿ ಬಂದರೆ ಏಕಾರವೂ, ಉ ಕಾರವಾಗಲಿ ಊ ಕಾರವಾಗಲಿ ಬಂದರೆ ಓಕಾರವೂ, ಋಕಾರವಾಗಲಿ ೠಕಾರವಾಗಲಿ ಬಂದರೆ ಅರ್ ಎಂಬುದೂ ಎರಡಕ್ಕೂ ಆದೇಶವಾಗಿ ಬರುತ್ತವೆ. ಇದಕ್ಕೆ **ಗುಣಸಂಧಿ**ಯೆಂದು ಹೆಸರು.

ಉದಾಹರಣೆ.

ದೇವ+ಇಂದ್ರ=ದೇವೇಂದ್ರ (ಅ+ಇ=ಏ)
ಕೈಲಾಸ+ಈಶ್ವರ=ಕೈಲಾಸೇಶ್ವರ (ಅ+ಈ=ಏ)
ಜೀರ್ಣ+ಉದ್ಧಾರ=ಜೀರ್ಣೋದ್ಧಾರ (ಅ+ಉ=ಓ)
ಮಹಾ+ಋಷಿ=ಮಹರ್ಷಿ (ಅ+ಋ=ಅರ್)
ಇತ್ಯಾದಿ.

* ಅಕಾರಕ್ಕೆ ಅಕಾರವಾಗಲಿ ಆಕಾರವಾಗಲಿ ಸವರ್ಣಸ್ವರ; ಆಕಾರಕ್ಕೂ ಹಾಗೆಯೇ ಇದರಂತೆಯೇ ಇಈ, ಉಊ, ಋೠ, ಇವು ಸವರ್ಣಸ್ವರಗಳ ಜೋಡಿಗಳು.

(೩) ಅ ಆ ಕಾರಗಳಲ್ಲಿ ಒಂದರಮುಂದೆ, ಏಕಾರವಾಗಲಿ ಐಕಾರ ವಾಗಲಿ ಬಂದರೆ ಐಕಾರವೂ, ಓಕಾರವಾಗಲಿ ಔಕಾರವಾಗಲಿ ಬಂದರೆ ಔಕಾರವೂ ಎರಡಕ್ಕೂ ಆದೇಶವಾಗಿ ಬರುತ್ತವೆ. ಇದಕ್ಕೆ ವೃದ್ಧಿಸಂಧಿ ಯೆಂದು ಹೆಸರು.

ಉದಾಹರಣೆ.

ಸಿದ್ಧ+ಔಷಧ=ಸಿದ್ಧೌಷಧ. (ಅ+ಔ=ಔ)

ಹೀಗೆಯೇ—

ಲೋಕ+ಏಕವೀರ=ಲೋಕೈಕವೀರ (ಅ+ಏ=ಐ)

ಇತ್ಯಾದಿ.

(೪) ಇ ಈ, ಉ ಊ, ಋ ೠ, ಕಾರಗಳಲ್ಲೊಂದರ ಮುಂದೆ ಅದಕ್ಕೆ ಸವರ್ಣವಲ್ಲದ ಸ್ವರವಿದ್ದರೆ, ಇ ಈ ಕಾರಗಳಿಗೆ ಯಕಾರವೂ, ಉ ಊ ಕಾರಗಳಿಗೆ ವಕಾರವೂ, ಋ ೠ ಕಾರಗಳಿಗೆ ರೇಫವೂ (=ರ್) ಆದೇಶವಾಗಿ ಬರುತ್ತವೆ. ಇದಕ್ಕೆ **ಯಣ್** ಸಂಧಿಯೆಂದು ಹೆಸರು.

ಉದಾಹರಣೆ.

ಪ್ರತಿ+ಉತ್ತರ=ಪ್ರತ್ಯುತ್ತರ (ಇ+ಉ=ಯ್+ಉ)
ಗುರು+ಆಜ್ಞೆ=ಗುರ್ವಾಜ್ಞೆ (ಉ+ಆ=ವ್+ಆ)
ಪಿತೃ+ಆರ್ಜಿತ=ಪಿತ್ರಾರ್ಜಿತ (ಋ+ಆ=ರ್+ಆ)

ಇತ್ಯಾದಿ.

## ಇಪ್ಪತ್ತನಾಲ್ಕನೆಯ ಅಧ್ಯಾಯ

### ಕರ್ತೃ ಕರ್ಮ ಕ್ರಿಯಾಪದಗಳು

### ೧. ಕರ್ತೃಪದ ಕ್ರಿಯಾಪದಗಳ ಹೊಂದಿಕೆ

೧. ವಾಕ್ಯವೆಂದರೆ ಪೂರ್ಣವಾದ ಅರ್ಥವನ್ನು ಕೊಡುವಂತೆ ಸೇರಿದ ಪದಗಳ ಗುಂಪಷ್ಟೆ. ಈ ಪೂರ್ಣವಾದ ಅರ್ಥ ಬರಬೇಕಾದರೆ, ವಾಕ್ಯದಲ್ಲಿ ಒಂದು ಪೂರ್ಣಕ್ರಿಯಾಪದ, ಅದರ ಕರ್ತೃ ಇಷ್ಟಾದರೂ ಇರಬೇಕು.

ಉದಾಹರಣೆ.

ಹುಡುಗನು ಓಡಿದನು. ಅನ್ನ ಸಾಕು.

ಈ ವಾಕ್ಯಗಳಲ್ಲಿ 'ಓಡಿದನು' ಎಂಬುದು 'ಓಡು' ಧಾತುವಿನಿಂದ ಉಂಟಾದ ಪೂರ್ಣ ಕ್ರಿಯಾಪದ; 'ಸಾಕು' ಎಂಬುದು ಪೂರ್ಣ ಕ್ರಿಯಾಪದದ ಅರ್ಥವನ್ನು ಕೊಡುವ ಅವ್ಯಯ. 'ಹುಡುಗ', 'ಅನ್ನ' ಎಂಬುವು ಕ್ರಮವಾಗಿ ಇವುಗಳ ಕರ್ತೃಪದಗಳು.

೨. ಆ ತುಂಟ ಹುಡುಗನು ಹಸುವನ್ನು ಅಟ್ಟಿಸಿಕೊಂಡು. . . . .
ನನಗೆ ಇನ್ನು . . . ಸಾಕು

ಈ ವಾಕ್ಯಗಳಲ್ಲಿ ಬೇರೆ ಪದಗಳು ಎಷ್ಟಿದ್ದರೂ, ಮೊದಲನೆಯದರಲ್ಲಿ ಪೂರ್ಣ ಕ್ರಿಯಾಪದವೂ ಎರಡನೆಯದರಲ್ಲಿ ಕರ್ತೃಪದವೂ ಇಲ್ಲದಿರುವುದರಿಂದ ವಾಕ್ಯಗಳು ಪೂರ್ಣವಾಗಿಲ್ಲ. ಅವು ಪೂರ್ಣವಾಗಬೇಕಾದರೆ ಕ್ರಮವಾಗಿ 'ಓಡಿದನು', 'ಅನ್ನ' ಎಂಬ ಪದಗಳನ್ನು ಸೇರಿಸಬೇಕು.

೩. ರಾಮನೂ ಸೀತೆಯೂ ಲಕ್ಷ್ಮಣನೂ ಪಂಚವಟಿಯಲ್ಲಿ ವಾಸಮಾಡಿಕೊಂಡಿದ್ದರು.
ನೀನಾಗಲಿ ಗೋವಿಂದನಾಗಲಿ ಈ ಕೆಲಸವನ್ನು ಮಾಡಿರಬೇಕು.

ಮೇಲಿನ ಎರಡು ವಾಕ್ಯಗಳಲ್ಲೂ ಕ್ರಿಯಾಪದಕ್ಕೆ ಒಂದಕ್ಕಿಂತ ಹೆಚ್ಚು ಕರ್ತೃಗಳಿವೆ. ಇವನ್ನು ಊ—ಊ, ಆಗಲಿ—ಆಗಲಿ ಎಂಬ ಸಂಬಂಧಸೂಚಕಾವ್ಯಯಗಳು ಕೂಡಿಸಿವೆ. ಹೀಗೆ ಒಂದು ಕ್ರಿಯಾಪದಕ್ಕೆ ಒಂದಕ್ಕಿಂತ ಹೆಚ್ಚು ಕರ್ತೃಪದಗಳಿರಬಹುದು.

೪. ಕ್ರಿಯಾಪದಕ್ಕೂ ಅದರ ಕರ್ತೃವಿಗೂ ಹಲವು ಅಂಶಗಳಲ್ಲಿ ಹೊಂದಿಕೆಯಿರುತ್ತದೆ. ಇದು ಹೇಗೆಂಬುದನ್ನು ನೋಡೋಣ.

೫. **ಲಿಂಗವಚನಗಳು :**

(೧) ಕ್ರಿಯಾಪದದ ಲಿಂಗವಚನಗಳು ಕರ್ತೃವಿನ ಲಿಂಗವಚನಗಳನ್ನೇ ಅನುಸರಿಸುತ್ತವೆ.

ಉದಾಹರಣೆ.

ಅಕ್ಕ ಬಂದಳು, ಮಗು ಬಂದಿತು, ಭಾವನೇಕೆ ಬರಲಿಲ್ಲ ?
ನಮ್ಮ ಉಪಾಧ್ಯಾಯರು ರಜ ತೆಗೆದುಕೊಂಡಿದ್ದಾರೆ.
ಅಂಕೆಯಿಲ್ಲದ ಕಪಿ ಲಂಕೆಯನ್ನು ಸುಟ್ಟಿತು.

(೨) ಗೌರವವನ್ನು ಸೂಚಿಸುವಾಗ ಕರ್ತೃ ಏಕವಚನದಲ್ಲಿದ್ದರೂ ಕ್ರಿಯಾಪದವು ಬಹುವಚನದಲ್ಲಿರುವುದುಂಟು.

ಉದಾಹರಣೆ.

ನಿಮ್ಮ ತಂದೆ ನಿನ್ನೆಯು ಬೆಳಿಗ್ಗೆ ನನಗೆ ಸಿಕ್ಕಿದರು.

(೩) ಹಸು, ಆನೆ, ಕುದುರೆ ಮೊದಲಾದ ನಪುಂಸಕ ಲಿಂಗದ ಜಾತಿವಾಚಕ ಶಬ್ದಗಳು ಕರ್ತೃಪದವಾಗಿ ಏಕವಚನದಲ್ಲಿದ್ದರೂ ಬಹುವಚನದ ಅರ್ಥವನ್ನು ಕೊಡುವುದುಂಟು ; ಆಗ ಕ್ರಿಯಾಪದವು ಬಹುವಚನದಲ್ಲಿರುತ್ತದೆ.

ಉದಾಹರಣೆ.

ಹುಲಿಯ ಅರ್ಭಟಕ್ಕೆ ಬೆದರಿ ಹಸು ಚದರಿದುವು. (ಹಸು = ಹಸುಗಳು)
ಈ ಕಾಡಿನಲ್ಲಿ ಆನೆ ಹಿಂಡುಹಿಂಡಾಗಿ ಅಲೆಯುತ್ತವೆ. (ಆನೆ = ಆನೆಗಳು)

(೪) ಬೇರೆ ಬೇರೆ ಲಿಂಗದ ಹಲವು ಕರ್ತೃಗಳಿದ್ದರೆ ಕೊನೆಯಲ್ಲಿರುವ ಕರ್ತೃವಿನ ಲಿಂಗವೇ ಕ್ರಿಯಾಪದಕ್ಕೂ ಬರುತ್ತದೆ.

ಉದಾಹರಣೆ.

ಬಂಡಿಯೂ ಆಳುಗಳೂ ಬಂದರು
ಆಳುಗಳೂ ಬಂಡಿಯೂ ಬಂದುವು.
ಜಾಂಕೆಮಾರಿಯೂ ಸೀತೆಯೂ ಹೊಳೆಗೆ ಹೋದರು.

ಈ ವಾಕ್ಯಗಳಲ್ಲಿ ಕರ್ತೃಗಳು ಒಂದಕ್ಕಿಂತ ಹೆಚ್ಚಾಗಿರುವುದರಿಂದ ಕ್ರಿಯಾಪದಗಳು ಬಹುವಚನದಲ್ಲಿವೆ.

೬. **ಪುರುಷ :**

(೧) ಕರ್ತೃವಿನ ಪುರುಷವನ್ನೇ ಕ್ರಿಯಾಪದವೂ ಹೊಂದುತ್ತದೆ.

ಉದಾಹರಣೆ.

ಅವನು ಸುತ್ತಾಟದಲ್ಲೇ ದಿನವನ್ನೆಲ್ಲಾ ಕಳೆದನು.
ನೀವು ಸಂಜೀವಕನನ್ನು ಎಲ್ಲಿ ಕಂಡಿರಿ?
ನಾನು ಕಾಗದವನ್ನು ಈಗಲೇ ಬರೆಯುತ್ತೇನೆ.

೨) ಮಧ್ಯಮ ಪುರುಷದ ಸರ್ವನಾಮವೂ ಪ್ರಥಮ ಪುರುಷದ ಶಬ್ದಗಳೂ ಸೇರಿ ಕರ್ತೃಗಳಾದಾಗ ಕ್ರಿಯಾಪದವು ಮಧ್ಯಮಪುರುಷದಲ್ಲಿರುತ್ತದೆ.

ಉದಾಹರಣೆ.

ನೀನೂ ಅವನೂ ನಿಮ್ಮ ಪುಸ್ತಕಗಳನ್ನು ಮರೆಯದೆ ತನ್ನಿ.
ಪ್ರಭುಗಳೂ ನೀವೂ ಅಲ್ಲಿಗೆ ಯಾವಾಗ ದಯಮಾಡಿಸುತ್ತೀರಿ?

(೩) ಕರ್ತೃಗಳು ಒಂದಕ್ಕಿಂತ ಹೆಚ್ಚಾಗಿದ್ದು ಅವುಗಳಲ್ಲಿ ಉತ್ತಮ ಪುರುಷದ ಸರ್ವನಾಮವೂ ಸೇರಿದ್ದರೆ ಕ್ರಿಯಾಪದವು ಉತ್ತಮಪುರುಷದಲ್ಲಿರುತ್ತದೆ.

ಉದಾಹರಣೆ.

ನಾನೂ ಶಂಕರನೂ ನಿನ್ನೆಯದಿನ ತೋಟಕ್ಕೆ ಹೋಗಿದ್ದೆವು.
ನೀವೂ ನಾವೂ ಇನ್ನುಮೇಲೆ ಸ್ನೇಹದಿಂದ ಇರೋಣ.
ಒಂದು ಸಣ್ಣ ತಪ್ಪಿಗಾಗಿ ನೀನೂ ನಾನೂ ಈ ಹುಡುಗರೂ ಎಷ್ಟೊಂದು ಕಷ್ಟಪಡುತ್ತಿದ್ದೇವೆ?

## ೨. ಅಕರ್ಮಕ ಸಕರ್ಮಕ ಕ್ರಿಯಾಪದಗಳು

೭. ಈ ಕೆಳಗಿನ ವಾಕ್ಯಗಳನ್ನು ನೋಡಿ :

೧. ಮಗು ಹುಟ್ಟಿತು.
೨. ನಾಯಿ ಓಡುತ್ತದೆ.
೩. ಹುಡುಗಿ ಪಾತ್ರೆಗಳನ್ನು ತೊಳೆಯುತ್ತಾಳೆ.
೪. ನೀನು ಪಾಠವನ್ನು ಓದು.

೧, ೨ನೆಯ ವಾಕ್ಯಗಳಲ್ಲಿ ಕರ್ತೃಪದ ಕ್ರಿಯಾಪದಗಳು ಮಾತ್ರ ಇದ್ದರೂ ಅರ್ಥ ಪೂರ್ಣವಾಗಿದೆ. ೩, ೪ನೆಯ ವಾಕ್ಯಗಳಲ್ಲಿ 'ಪಾತ್ರೆಗಳನ್ನು, ಪಾಠವನ್ನು' ಎಂಬ ಕರ್ಮಪದಗಳನ್ನು ಬಿಟ್ಟರೆ ಕ್ರಿಯಾಪದದ ಆಕಾಂಕ್ಷೆ ಪೂರ್ಣವಾಗುವುದಿಲ್ಲ.

ಹೀಗೆ ಅರ್ಥಪೂರ್ತಿಗಾಗಿ ಕರ್ಮಪದವನ್ನು ಅಪೇಕ್ಷಿಸುವ ಕ್ರಿಯಾಪದಕ್ಕೆ **ಸಕರ್ಮಕ ಕ್ರಿಯಾಪದವೆಂದೂ**, ಕರ್ಮಪದವಿಲ್ಲದೆಯೆ ಪೂರ್ಣವಾದ ಅರ್ಥವನ್ನು ಕೊಡುವ ಕ್ರಿಯಾಪದಕ್ಕೆ **ಅಕರ್ಮಕ ಕ್ರಿಯಾಪದ**

ವೆಂದೂ ಹೆಸರು. ಕರ್ತೃವಿನ ಹುಟ್ಟು, ಸಾವು, ಸ್ಥಿತಿ, ಚಲನ ಮೊದಲಾದು ವನ್ನು ಹೇಳುವ ಕ್ರಿಯಾಪದಗಳು ಸಾಮಾನ್ಯವಾಗಿ ಅಕರ್ಮಕಗಳಾಗಿರುತ್ತವೆ.

೮. ಅಕರ್ಮಕ ಸಕರ್ಮಕ ಕ್ರಿಯಾಪದಗಳಿಗೆ ಇನ್ನು ಕೆಲವು ಉದಾಹರಣೆಗಳು:

ಅಕರ್ಮಕಕ್ಕೆ—

ನಾನು ಅಮಾವಾಸ್ಯೆಯ ದಿನ ಹುಟ್ಟಿದೆನು; ಆದರಿಂದ ನನಗೆ ಅಮಾಸೆಯೆಂಬ ಹೆಸರು ಬಂದಿತು.
ಯೂರೋಪಿನ ಮಹಾಯುದ್ಧದಲ್ಲಿ ಕೋಟಿಗಟ್ಟಳೆಯ ಜನರು ಮಡಿದರು.
ರಾಮೇಶ್ವರಕ್ಕೆ ಹೋದರೂ ಶನೀಶ್ವರನ ಕಾಟ ತಪ್ಪದು.
ಹೊಳೆ ಬೆಳಗಿ ಜಾರುವುದು.
ಗಿಳಿ ನೆಗೆದು ಹಾರುವುದು.
ಬೆಳೆದ ಹೊಲ ಬಿಸಿಲಲ್ಲಿ ಮಲಗಿರುವುದು.

ಸಕರ್ಮಕಕ್ಕೆ—

ದುರ್ಯೋಧನನು ಹೊಸದೊಂದು ಸಭಾಗೃಹವನ್ನು ಕಟ್ಟಿಸಿದ್ದಾನೆ.
ಹಿರಿಯರನ್ನು ಸೇವಿಸು; ದುಷ್ಟರ ಸಹವಾಸವನ್ನು ಬಿಡು; ಒಳ್ಳೆಯ ನಡತೆಯನ್ನು ಕಲಿ.
ವೈದ್ಯರೇ, ನನ್ನ ಕಂದನನ್ನು ಬದುಕಿಸಿ.

೯. ಕೆಲವು ಧಾತುಗಳು ಸಂದರ್ಭಾನುಸಾರವಾಗಿ ಅಕರ್ಮಕ ಸಕರ್ಮಕಗಳೆರಡೂ ಆಗುತ್ತವೆ.

ಉದಾಹರಣೆ.

ಮಳೆ ಬಂದರೆ ಪೈರು ಹುಲುಸಾಗಿ ಬೆಳೆಯುತ್ತದೆ. (ಅಕರ್ಮಕ)
ಒಳ್ಳೆಯ ಕೃಷಿಯಿಂದ ಈ ನೆಲದಲ್ಲ ಚಿನ್ನವನ್ನು ಬೆಳೆಯಬಹುದು. (ಸಕರ್ಮಕ)
ಮಕ್ಕಳು ಅಳಬಾರದು, ಆಡಬೇಕು. (ಅಕರ್ಮಕ)
ನಿನಗೆ ಗೋಲಿಯನ್ನು ಆಡಲು ಬರುವುದಿಲ್ಲವೆ? (ಸಕರ್ಮಕ)

೧೦. ಕುಣಿ, ನೆಗೆ, ಓಡು ಮೊದಲಾದ ಧಾತುಗಳಿಗೆ ಅದೇ ಅರ್ಥದ ಭಾವನಾಮಗಳು ಕರ್ಮಪದಗಳಾಗಿ ಬರುವುದುಂಟು.

ಉದಾಹರಣೆ.

ರೈತರು ಸುಗ್ಗಿಯ ಕಣಿತವನ್ನು ಕಣಿಯುತ್ತಾರೆ.
ಆ ಹೋರಿ ಒಂದೇ ನೆಗೆತವನ್ನು ನೆಗೆದು ಹಳ್ಳದ ಆಚೆಯ ದಡವನ್ನು ಸೇರಿತು.
ಈ ಓಟವನ್ನು ನಾನು ಓಡಲಾರೆ.

೧೧. ಪ್ರೇರಣಾರ್ಥದಲ್ಲಿ, —ಇಸು (ಅಥವಾ—ಸು) ಪ್ರತ್ಯಯ ಸೇರಿ ಆದ ಧಾತುಗಳೆಲ್ಲ ಸಕರ್ಮಕಗಳಾಗಿರುತ್ತವೆ.

ಉದಾಹರಣೆ.

ತಾಯಿ ಮಗುವನ್ನು ತೊಟ್ಟಿಲಲ್ಲಿ ಮಲಗಿಸಿದಳು.
ತಾವು ನನ್ನನ್ನು ಸನ್ಮಾರ್ಗದಲ್ಲಿ ನಡೆಸಬೇಕು.

೧೨. ಕೆಲವು ಧಾತುಗಳಿಗೆ ಎರಡು ಕರ್ಮಪದಗಳಿರುವುದುಂಟು. ಅಂಥವಕ್ಕೆ ದ್ವಿಕರ್ಮಕಗಳೆಂದು ಹೆಸರು.

ಉದಾಹರಣೆ.

ಆಳು ಹಸುವನ್ನು ಹಾಲನ್ನು ಕರೆದನು
ವಾಮನನು ಬಲಿಚಕ್ರವರ್ತಿಯನ್ನು ಮೂರಡಿಯ ನೆಲವನ್ನು ಬೇಡಿದನು.

## ೩. ಕರ್ತರಿ ಕರ್ಮಣಿ ಪ್ರಯೋಗಗಳು

೧೩. ಕ್ರಿಯಾಪದವು ಕರ್ತೃವಿನ ಲಿಂಗ ವಚನ ಪುರುಷಗಳನ್ನು ಅನುಸರಿಸುವುದೆಂದು ಹಿಂದೆ ನೋಡಿದೆವಷ್ಟೆ. ಹೀಗಿರುವುದಕ್ಕೆ ಕರ್ತರಿ ಪ್ರಯೋಗವೆಂದು ಹೆಸರು. ಅಕರ್ಮಕ ಸಕರ್ಮಕ ಧಾತುಗಳನ್ನೆಲ್ಲಾ ನಾವು ಸಾಮಾನ್ಯವಾಗಿ ಉಪಯೋಗಿಸುವುದು ಕರ್ತರಿಪ್ರಯೋಗದಲ್ಲೇ.

ಉದಾಹರಣೆ.

ಸೂರ್ಯನು ಹುಟ್ಟಿದನು; ತಾವರೆಗಳು ಅರಳಿದುವು.
ರೈತರು ಹೊಲವನ್ನು ಉಳುತ್ತಾರೆ.
ಮಗುವನ್ನು ಯಾರು ಬೈದರು?
ನೀನು ನನಗೆ ಎರಡು ಚೆಂಡುಗಳನ್ನು ತಂದುಕೊಡು.

ಕರ್ತರಿ ಪ್ರಯೋಗದಲ್ಲಿ ಕರ್ತೃಪದವು ಪ್ರಥಮಾವಿಭಕ್ತಿಯಲ್ಲಿರುತ್ತದೆ; ಕರ್ಮಪದವಿದ್ದರೆ ಅದು ದ್ವಿತೀಯಾವಿಭಕ್ತಿಯಲ್ಲಿರುತ್ತದೆ; ಕ್ರಿಯಾಪದವು ಕರ್ತೃವಿನ ಲಿಂಗ ವಚನ ಪುರುಷಗಳನ್ನು ಅನುಸರಿಸುತ್ತದೆ.

೧೪. ಸಕರ್ಮಕ ಧಾತುಗಳಿಗೆ ಬೇರೊಂದು ರೀತಿಯ ಪ್ರಯೋಗವೂ ಉಂಟು. ಕೆಳಗಿನ ಉದಾಹರಣೆಯನ್ನು ನೋಡಿ :

| | ಕರ್ತೃಪದ | ಕರ್ಮಪದ | ಕ್ರಿಯಾಪದ |
|---|---|---|---|
| ೧. | ರೈತರು | ಹೊಲವನ್ನು | ಉಳುತ್ತಾರೆ. (ಕರ್ತರಿ ಪ್ರಯೋಗ) |
| ೨. | ರೈತರಿಂದ | ಹೊಲವು | ಉಳಲ್ಪಡುತ್ತದೆ. |

ಎರಡನೆಯ ವಾಕ್ಯದಲ್ಲಿ 'ರೈತರಿಂದ' ಎಂಬ ಕರ್ತೃಪದವು ತೃತೀಯಾ ವಿಭಕ್ತಿಯಲ್ಲೂ 'ಹೊಲವು' ಎಂಬ ಕರ್ಮಪದವು ಪ್ರಥಮಾ ವಿಭಕ್ತಿಯಲ್ಲೂ ಇವೆ ; 'ಉಳಲ್ಪಡುತ್ತದೆ' ಎಂಬ ಕ್ರಿಯಾಪದವು ಕರ್ಮಪದದ ಲಿಂಗ ವಚನ ಪುರುಷಗಳನ್ನು ಅನುಸರಿಸಿದೆ.

ಈ ಬಗೆಯ ಪ್ರಯೋಗಕ್ಕೆ ಕರ್ಮಣಿ ಪ್ರಯೋಗವೆಂದು ಹೆಸರು.

೧೫. ಕರ್ಮಣಿ ಪ್ರಯೋಗಕ್ಕೆ ಇನ್ನೆರಡು ಉದಾಹರಣೆಗಳು :

ಮಗುವನ್ನು ಯಾರು ಬೈದರು ? (ಕರ್ತರಿ ಪ್ರಯೋಗ)
ಮಗು ಯಾರಿಂದ ಬೈಯಲ್ಪಟ್ಟಿತು ? (ಕರ್ಮಣಿ ಪ್ರಯೋಗ)
ನೀನು ನನಗೆ ಎರಡು ಚೆಂಡುಗಳನ್ನು ತಂದುಕೊಡು. (ಕರ್ತರಿ ಪ್ರಯೋಗ)
ನಿನ್ನಿಂದ ನನಗೆ ಎರಡು ಚೆಂಡುಗಳು ತಂದು ಕೊಡಲ್ಪಡಲಿ. (ಕರ್ಮಣಿ ಪ್ರಯೋಗ)

೧೬. ಕರ್ಮಣಿ ಪ್ರಯೋಗದಲ್ಲಿ ಕ್ರಿಯಾಪದಕ್ಕೆ ಉಂಟಾಗುವ ರೂಪವನ್ನು ಬಿಡಿಸಿ ನೋಡೋಣ :

| | ಧಾತು | | ಕಾಲಪ್ರ. | ಆಖ್ಯಾತಪ್ರ. |
|---|---|---|---|---|
| ಉಳಲ್ಪಡುತ್ತದೆ | =ಉಳು | +ಅಲ್ಪಡು | +ಉತ್ತ | +ಅದೆ |
| ಬೈಯಲ್ಪಟ್ಟಿತು | =ಬೈ | +ಅಲ್ಪಡು | +ದ | +ಇತು |
| ತಂದುಕೊಡಲ್ಪಡಲಿ | =ತಂದುಕೊಡು | +ಅಲ್ಪಡು | + | +ಅಲಿ |

ಧಾತುವಿಗೂ ಪ್ರತ್ಯಯಗಳಿಗೂ ನಡುವೆ 'ಅಲ್ಪಡು' ಎಂಬುದು ಇಲ್ಲಿ ಸೇರಿದೆ. ('ದ' ಮೊದಲಾದ ಪ್ರತ್ಯಯಗಳು 'ಪಡು' ಧಾತುವಿಗೆ ಸೇರಿದಾಗ ಉಂಟಾಗುವ ಮಾರ್ಪಾಡುಗಳೇ 'ಅಲ್ಪಡು' ಎಂಬುದಕ್ಕೆ ಅವು ಸೇರಿದಾಗಲೂ ಉಂಟಾಗುತ್ತವೆ.)

ಹೀಗೆ ಕರ್ಮಣಿ ಪ್ರಯೋಗದಲ್ಲಿ ಕರ್ತೃಪದವು ತೃತೀಯಾವಿಭಕ್ತಿಯಲ್ಲೂ ಕರ್ಮಪದವು ಪ್ರಥಮಾವಿಭಕ್ತಿಯಲ್ಲೂ ಇರುತ್ತವೆ ; ಕ್ರಿಯಾಪದವು ಕರ್ಮಪದದ ಲಿಂಗ ವಚನ ಪುರುಷಗಳನ್ನು ಅನುಸರಿಸುತ್ತದೆ ; ಕ್ರಿಯಾಪದ

ದಲ್ಲಿ ಧಾತುವಿಗೂ ಪ್ರತ್ಯಯಕ್ಕೂ ನಡುವೆ 'ಅಲ್ಪಡು' ಎಂಬುದು ಸೇರುತ್ತದೆ.

೧೭. ಕರ್ತರಿ ಪ್ರಯೋಗದಿಂದ ಕರ್ಮಣಿ ಪ್ರಯೋಗಕ್ಕೆ ವಾಕ್ಯವನ್ನು ಮಾರ್ಪಡಿಸುವಾಗ ಕ್ರಿಯಾಪದದ ಕಾಲ ಅರ್ಥ ಮೊದಲಾದುವು ವ್ಯತ್ಯಾಸ ಹೊಂದದೆ ಇರುವುದನ್ನು ಗಮನಿಸಿ.

೧೮. ಕನ್ನಡದಲ್ಲಿ ಕರ್ಮಣಿ ಪ್ರಯೋಗದ ಬಳಕೆ ತುಂಬ ಕಡಮೆ. ಕರ್ತೃ ಯಾರೆಂಬುದು ಗೊತ್ತಿಲ್ಲದಿದ್ದಾಗ, ಅಥವಾ ಕರ್ತೃವಿಗೆ ಗಮನ ಕೊಡುವ ಉದ್ದೇಶವಿಲ್ಲದಿದ್ದಾಗ ಕ್ರಿಯಾಪದವು ಕರ್ಮಣಿ ಪ್ರಯೋಗದಲ್ಲಿರುವುದುಂಟು.

ಉದಾಹರಣೆ.

ಆ ಪುಸ್ತಕವು ಲಲಿತಾಕ್ಷರ ಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟಿದೆ.
ಮನೆ ಕಟ್ಟಲ್ಪಟ್ಟು ಹತ್ತು ವರ್ಷವಾಯಿತು.

(ಇಲ್ಲಿ, 'ಮುದ್ರಿಸಲ್ಪಟ್ಟಿದೆ, ಕಟ್ಟಲ್ಪಟ್ಟು' ಎಂಬ ಕ್ರಿಯೆಗಳ ಕರ್ತೃ ಬಿಟ್ಟು ಹೋಗಿರುವುದನ್ನು ಗಮನಿಸಿ.)

ಇಂಥ ಕಡೆಗಳಲ್ಲಿ ಕೂಡ ಕರ್ತರಿ ಪ್ರಯೋಗವನ್ನೇ ಆದಷ್ಟುಮಟ್ಟಿಗೆ ತರುವುದು ಕನ್ನಡದ ಪದ್ಧತಿ.

ಉದಾಹರಣೆ.

ಆ ಪುಸ್ತಕವನ್ನು ಲಲಿತಾಕ್ಷರ ಮುದ್ರಣಾಲಯದಲ್ಲಿ ಮುದ್ರಿಸಿದ್ದಾರೆ.
ಮನೆಯನ್ನು ಕಟ್ಟಿ ಹತ್ತು ವರ್ಷವಾಯಿತು.

೧೯. ಈ ಕೆಳಗಿನ ಪ್ರಯೋಗಗಳನ್ನು ನೋಡಿ:

ಅವನು ಪೋಲೀಸಿನವರಿಂದ ನೂಕಿಸಿಕೊಂಡನು. (=ನೂಕಲ್ಪಟ್ಟನು)
ಅಪ್ಪಣೆ ಇಲ್ಲದೆ ಪ್ರವೇಶಿಸುವವರನ್ನು ಶಿಕ್ಷೆಗೆ ಗುರಿಮಾಡಲಾಗುವುದು.
(=.......ಪ್ರವೇಶಿಸುವವರು........ ಗುರಿಮಾಡಲ್ಪಡುವರು)
ಆ ಗ್ರಂಥದಲ್ಲಿ ಪಾಕಶಾಸ್ತ್ರದ ವಿಷಯವನ್ನು ಚೆನ್ನಾಗಿ ಹೇಳಿದೆ.
(=...... ವಿಷಯವು ........ಹೇಳಲ್ಪಟ್ಟಿದೆ).

---

# ಇಪ್ಪತ್ತೈದನೆಯ ಅಧ್ಯಾಯ

## ವಿಶೇಷಗಳು

### ೧. ನಾಮವಿಶೇಷಣ

೧. ಗುಣವಾಚಕ, ಸಂಖ್ಯಾವಾಚಕ, ಕೃದಂತನಾಮ ಮೊದಲಾದುವಕ್ಕೆ ವಿಶೇಷಣರೂಪ ಕಾರಕರೂಪಗಳೆಂದು ಎರಡೆರಡು ರೂಪಗಳುಂಟೆಂದೂ, ಇವುಗಳ ವಿಶೇಷಣರೂಪಗಳು ನಾಮಪದಗಳಿಗೆ ವಿಶೇಷಣಗಳಾಗಿ ಅವುಗಳ ಹಿಂದೆ ಬರುವುವೆಂದೂ ನಾವು ಹಿಂದೆಯೇ ನೋಡಿದ್ದೇವೆ. ಹೀಗೆ ನಾಮಪದಗಳಿಗೆ ವಿಶೇಷಣವಾಗಿ ಬರತಕ್ಕವುಗಳಿಗೆಲ್ಲಾ **ನಾಮವಿಶೇಷಣ** ಗಳೆಂದು ಹೆಸರು.

೨. ಷಷ್ಠೀವಿಭಕ್ತಿಯ ನಾಮ ವಿಶೇಷಣಗಳು ತಮ್ಮ ಮುಂದಿರುವ ನಾಮಪದಗಳನ್ನು ವಿಶೇಷಿಸುವುದರಿಂದ ಅವೂ ನಾಮವಿಶೇಷಣಗಳೇ.

ಉದಾಹರಣೆ.

ತಾಮ್ರದ ಉಂಗುರಕ್ಕೆ ಚಿನ್ನದ ಮುಲಾಮು.
ನನ್ನ ಟೋಪಿ ನಿನ್ನ ಪೆಟ್ಟಿಗೆಗೆ ಹೇಗೆ ಬಂದಿತು ?

೩. ಕೆಳಗಿನ ವಾಕ್ಯಗಳನ್ನು ನೋಡಿ :

ಬುದ್ಧಿವಂತರಾದ ವಿದ್ಯಾರ್ಥಿಗಳು ಪರೀಕ್ಷೆಗಳಲ್ಲಿ ಸುಲಭವಾಗಿ ತೇರ್ಗಡೆ ಹೊಂದುತ್ತಾರೆ. (ಬುದ್ಧಿವಂತರು+ಆದ)
ಅವನು ತನ್ನ ಹೆಂಡತಿಗೆ ಒಂದು ಸೊಗಸಾದ ಸೀರೆಯನ್ನು ಕೊಂಡು ಕೊಟ್ಟನು. (ಸೊಗಸು+ಆದ)
ನನ್ನ ಬೆನ್ನಿಗೆ ಬಲವಾದ ಏಟು ಬಿದ್ದಿತು. (ಬಲ+ಆದ)
ನಿನಗೆ ಹಣವುಳ್ಳ ಗಂಡನು ಬೇಕೋ, ಗುಣವುಳ್ಳ ಗಂಡನು ಬೇಕೋ ? (ಹಣ+ಉಳ್ಳ, ಗುಣ+ಉಳ್ಳ)
ಗೊರಸುಗಳುಳ್ಳ ಪ್ರಾಣಿಗಳನ್ನೆಲ್ಲಾ ಒಂದು ಗುಂಪಾಗಿ ವಿಂಗಡಿಸಬಹುದು. (ಗೊರಸುಗಳು+ಉಳ್ಳ)
ಅಮರಾವತಿಯೆಂಬ ಪಟ್ಟಣದಲ್ಲಿ ಅಮರಶೇಖರನೆಂಬ ರಾಜನಿದ್ದನು. (ಅಮರಾವತಿ+ಎಂಬ, ಅಮರಶೇಖರನು+ಎಂಬ)
ನಿವಾತಕವಚರೆನ್ನುವ ರಾಕ್ಷಸರನ್ನು ಅರ್ಜುನನು ಜಯಿಸಿದನು. (ನಿವಾತಕವಚರು+ಎನ್ನುವ)

ಮೇಲೆ ದೊಡ್ಡ ಅಕ್ಷರದಲ್ಲಿ ಕೊಟ್ಟಿರುವ ಪದಗಳೆಲ್ಲ ನಾಮವಿಶೇಷಣಗಳು. ಪ್ರಥಮಾವಿಭಕ್ತಿಯ ನಾಮಪದಕ್ಕೆ ಆದ, ಉಳ್ಳ, ಎಂಬ (ಎನ್ನುವ) —ಈ ಮೊದಲಾದ ಕೃದಂತನಾಮಗಳು ಸೇರಿದರೆ ಹೀಗೆ ನಾಮವಿಶೇಷಣಗಳಾಗುತ್ತವೆ.

ಕೆಲವು ಕಡೆಗಳಲ್ಲಿ 'ಆದ' ಮೊದಲಾದುವನ್ನು ಸೇರಿಸದೆ ನಾಮಪದವನ್ನೇ ನಾಮವಿಶೇಷಣವಾಗಿ ಉಪಯೋಗಿಸುವುದುಂಟು.

ಉದಾಹರಣೆ.

ಕೆಂಪು ಸಾಮಾನುಗಳನ್ನು ಕಂಡರೆ ಮಕ್ಕಳಿಗೆ ಇಷ್ಟ.
(ಕೆಂಪು=ಕೆಂಪಾದ)
ಇಲ್ಲಿ ಎಲ್ಲಾ ಪದಾರ್ಥಗಳೂ ಕಡಮೆ ಬೆಲೆಗೆ ದೊರೆಯುತ್ತವೆ.
(ಕಡಮೆ=ಕಡಮೆ ಯಾದ)

೪. ನಾಮವಿಶೇಷಣಗಳ ಪ್ರಯೋಗ :

(೧) ಒಂದು ನಾಮಪದಕ್ಕೆ ಒಂದಕ್ಕಿಂತ ಹೆಚ್ಚಾಗಿ ವಿಶೇಷಣಗಳಿರಬಹುದು.

ಉದಾಹರಣೆ.

ಆ ಹಳ್ಳದಲ್ಲಿ ದೊಡ್ಡ ಪುಟ್ಟ ಮೀನುಗಳು ಹಲವು ಇದ್ದುವು.
ನೀನು ಆಡಿದ ಕೆಟ್ಟ ಮಾತನ್ನು ಅವನು ಇನ್ನೂ ಮರೆತಿಲ್ಲ.
ಆ ಮದಿಸಿದ ಆನೆಯನ್ನು ಹಿಡಿಯಲು ಯಾರಿಂದ ಆದೀತು ?
ನಮ್ಮ ಅಂಗಡಿಗೆ ಒಬ್ಬ ನಂಬಿಕೆಯುಳ್ಳ ಆಳು ಬೇಕು.

(೨) ಕೃದಂತನಾಮದ ಕೊನೆಯಲ್ಲಿ 'ಅಂಥ' ಎಂಬ ಶಬ್ದವನ್ನು ಸೇರಿಸುವುದುಂಟು. ಇದನ್ನು ಆದಷ್ಟು ಮಿತವಾಗಿ ಸೇರಿಸಬೇಕು.

ಉದಾಹರಣೆ.

ಇದು ನನ್ನೊಬ್ಬನಿಂದ ಆಗುವಂಥ ಕೆಲಸವಲ್ಲ.
ಕಡಲನ್ನು ಹಾರಿ ಲಂಕೆಗೆ ಸೇರುವಂಥ ವೀರರು ನಿಮ್ಮಲ್ಲಿ ಯಾರು ?

(೩) ಬಹುವಚನದ ಸಂಖ್ಯಾವಾಚಕವು ವಿಶೇಷಣವಾಗಿದ್ದರೆ ವಿಶೇಷ್ಯವು ಏಕವಚನರೂಪದಲ್ಲಿ ಇರುವುದುಂಟು.

ಉದಾಹರಣೆ.

ಈ ಸಾಲವನ್ನು ನೀವು ಐದು ವರ್ಷದಲ್ಲಿ ತೀರಿಸಬೇಕು.
(=ಐದು ವರ್ಷಗಳಲ್ಲಿ)
ಸುದ್ದಿ ನಾಲ್ಕು ದಿಕ್ಕಿಗೂ ಹರಡಿತು. (=ನಾಲ್ಕು ದಿಕ್ಕುಗಳಿಗೂ)

## ೨. ಕ್ರಿಯಾವಿಶೇಷಣ

೫. ಕ್ರಿಯೆಯ ಕಾಲ, ದೇಶ, ರೀತಿ, ಮೊದಲಾದುವನ್ನು ತಿಳಿಸುವ ಸಾಮಾನ್ಯಾವ್ಯಯಗಳಿಗೆ ಕ್ರಿಯಾವಿಶೇಷಣಾವ್ಯಯಗಳೆಂಬ ಹೆಸರುಂಟೆಂದು ನಾವು ಹಿಂದೆ ನೋಡಿದ್ದೇವೆ. ಇವು ಮಾತ್ರವಲ್ಲದೆ, ಕ್ರಿಯಾಪದದೊಂದಿಗೆ ನೇರವಾಗಿ ಅನ್ವಯ ಹೊಂದುವ ಪದಗಳೆಲ್ಲವೂ ಸಾಮಾನ್ಯವಾಗಿ ಕ್ರಿಯಾ ವಿಶೇಷಣಗಳೇ ಆಗುತ್ತವೆ; ಏಕೆಂದರೆ ಇವು ಬೇರೆ ಬೇರೆ ರೀತಿಗಳಲ್ಲಿ ಕ್ರಿಯೆಯ ಅರ್ಥವನ್ನು ವಿಶೇಷಿಸುತ್ತವೆ.

ಉದಾಹರಣೆ

(೧) ಆ ಮಾತನ್ನು ಕೇಳಿದ ಕೂಡಲೆ ಸೀತೆ ಧೊಪ್ಪನೆ ನೆಲಕ್ಕೆ ಬಿದ್ದಳು.
ನಿನ್ನ ಹೊರತು ಬೇರೆ ಯಾರು ನನಗೆ ಸಹಾಯಮಾಡು ತ್ತಾರೆ?

(ಇಲ್ಲಿ ಸಾಮಾನ್ಯಾವ್ಯಯ ಅನುಸರ್ಗಾವ್ಯಯಗಳು ಕ್ರಿಯಾವಿಶೇಷಣಗಳಾ ಗಿವೆ.)

(೨) ಅವರು ಕಾಶಿಗೆ ಹೋಗಿ ನೆಲಸಿದರು.
ನಮ್ಮ ಗೌರಿಯನ್ನು ಎಲ್ಲಾದರೂ ಕಂಡರೆ ಕಳುಹಿಸಿಕೊಡಿ.

(ಇಲ್ಲಿ ಸಾಪೇಕ್ಷ ಕ್ರಿಯಾರೂಪಗಳು ಕ್ರಿಯಾವಿಶೇಷಣಗಳಾಗಿವೆ.)

(೩) ಅವನು ವ್ಯಾಪಾರದಿಂದ ತುಂಬ ಹಣವನ್ನು ಗಳಿಸಿದನು.
ಪಕ್ಷಿಗಳು ಗೂಡಿಗೆ ಸೇರಿದುವು.
ಅವನಿಗೆ ಅನ್ನದಲ್ಲಿ ಕಲ್ಲು ಸಿಕ್ಕಿತು.

(ಇಲ್ಲಿ ತೃತೀಯೆ ಮೊದಲಾದ ವಿಭಕ್ತಿಗಳಲ್ಲಿರುವ ಪದಗಳು ಕ್ರಿಯಾವಿಶೇಷಣ ಗಳಾಗಿವೆ.)

೬. ಪ್ರಥಮಾವಿಭಕ್ತಿಯ ನಾಮಪದಗಳಿಗೆ 'ಆಗಿ' ಎಂಬುದು ಸೇರಿ ಕ್ರಿಯಾವಿಶೇಷಣಗಳಾಗುತ್ತವೆ.

ಉದಾಹರಣೆ

ನೀವು ಬುದ್ಧಿವಂತರಾಗಿ ಬಾಳಿ. (ಬುದ್ಧಿವಂತರು+ಆಗಿ)
ಅವನು ಹೊಸದಾಗಿ ಅಂಗಡಿಯನ್ನು ಇಟ್ಟಿದ್ದಾನೆ.
(ಹೊಸದು+ಆಗಿ)
ಯಾರನ್ನೂ ಕಠಿಣವಾಗಿ ಅನ್ನಬಾರದು. (ಕಠಿಣ+ಆಗಿ)

೭. ಮೇಲಿನ ಉದಾಹರಣೆಗಳಲ್ಲೆಲ್ಲಾ ಕ್ರಿಯಾವಿಶೇಷಣಗಳು ಪೂರ್ಣಕ್ರಿಯಾಪದದೊಂದಿಗೆ ಅನ್ವಯಿಸುತ್ತವೆ.

ಈಗ ಕೆಳಗಿನ ಉದಾಹರಣೆಗಳನ್ನು ನೋಡಿ :

(೧) ಲಕ್ಷ್ಮಿ ಮೆಲ್ಲಗೆ ಹಿಂದಿನಿಂದ ಹೋಗಿ ಲಲಿತೆಯ ಕಣ್ಣುಗಳನ್ನು ಮುಚ್ಚಿದಳು.

ಬಾವಿಯನ್ನು ಆಳವಾಗಿ ತೋಡಿದರೆ, ಬೇಸಗೆಯಲ್ಲೂ ನೀರು ಇರುತ್ತದೆ.

(ಇಲ್ಲಿ ದೊಡ್ಡ ಅಕ್ಷರದಲ್ಲಿರುವ ಕ್ರಿಯಾವಿಶೇಷಣಗಳು ಸಾಪೇಕ್ಷ ಕ್ರಿಯಾರೂಪಗಳೊಂದಿಗೆ ಅನ್ವಯಿಸುತ್ತವೆ.)

(೨) ಕಷ್ಟಪಟ್ಟು ದುಡಿಯುವವನಿಗೆ ಫಲ ದೊರೆಯದೆ ಹೋಗುವುದೇ !

ತೆಳ್ಳಗೆ ಉದ್ದವಾಗಿ ಬೆಳೆಯುವ ಒಂದು ಮರದ ಹೆಸರನ್ನು ಹೇಳು.

ಸಂಜೆಯಲ್ಲಿ ಹಿಡಿದ ಮಳೆ ಬೇಗ ನಿಲ್ಲುವುದಿಲ್ಲ.

(ಇಲ್ಲಿ ದೊಡ್ಡ ಅಕ್ಷರದಲ್ಲಿರುವ ಕ್ರಿಯಾವಿಶೇಷಣಗಳು ಕೃದಂತನಾಮಗಳೊಂದಿಗೆ ಅನ್ವಯಿಸುತ್ತವೆ )

(೩) ಸುಮ್ಮನೆ ಕಾಲ ಕಳೆಯುವುದು ವಿವೇಕಿಗಳ ಲಕ್ಷಣವಲ್ಲ.

ಹೊತ್ತು ಮೀರಿ ಪಾಠಶಾಲೆಗೆ ಬರುವುದನ್ನು ಬಾಲಕರು ಬಿಡಬೇಕು.

[ಇಲ್ಲಿ ದೊಡ್ಡ ಅಕ್ಷರದಲ್ಲಿರುವ ಕ್ರಿಯಾವಿಶೇಷಣಗಳು (–ಉದು ಪ್ರತ್ಯಯವುಳ್ಳ) ಕೃದಂತಭಾವನಾಮಗಳೊಂದಿಗೆ ಅನ್ವಯಿಸುತ್ತವೆ.]

೮. ಹೀಗೆ ಪೂರ್ಣಕ್ರಿಯಾಪದಗಳಿಗೆ ಮಾತ್ರವಲ್ಲದೆ, ಸಾಪೇಕ್ಷ ಕ್ರಿಯಾರೂಪ, ಕೃದಂತನಾಮ, (–ಉದು ಪ್ರತ್ಯಯವುಳ್ಳ) ಕೃದಂತಭಾವನಾಮ ಇವಕ್ಕೂ ಕ್ರಿಯಾವಿಶೇಷಣಗಳಿರಬಹುದು.

| | | |
|---|---|---|
| ೯. | ದೊಡ್ಡ ಹುಲಿ | ಹುಲಿ ದೊಡ್ಡದು. |
| | ಹೊಸ ನಂಟರು | ನಂಟರು ಹೊಸಬರು. |
| | ನಾನು ಬರೆದ ಕಾಗದ | ಕಾಗದ ನಾನು ಬರೆದದ್ದು. |
| | ಹಿಂದೆ ಕೇಳದ ಸುದ್ದಿ | ಸುದ್ದಿ ಹಿಂದೆ ಕೇಳದ್ದು. |
| | ಎಷ್ಟನೆಯ ಮನೆ | ಮನೆ ಎಷ್ಟನೆಯದು. |
| | ತರಗತಿಯಲ್ಲಿ ಎರಡನೆಯ ಹುಡುಗಿ. | ಹುಡುಗಿ ತರಗತಿಯಲ್ಲಿ ಎರಡನೆಯವಳು. |
| | ನನ್ನ ಪುಸ್ತಕಗಳು | ಪುಸ್ತಕಗಳು ನನ್ನವು. |
| | ಚಿನ್ನದ ಗಡಿಯಾರ | ಗಡಿಯಾರ ಚಿನ್ನದ್ದು. |

ಮೇಲೆ ಒಂದನೆಯ ಸಾಲಿನಲ್ಲೂ ಎರಡನೆಯ ಸಾಲಿನಲ್ಲೂ ಎದುರು ಬದುರಿಗೆ ದೊಡ್ಡ ಅಕ್ಷರದಲ್ಲಿರುವ ಪದಗಳನ್ನು ನೋಡಿ. ಒಂದನೆಯ ಸಾಲಿನಲ್ಲಿರುವ 'ದೊಡ್ಡ, ಹೊಸ' ಮೊದಲಾದುವು ನಾಮವಿಶೇಷಣಗಳು;

ಎರಡನೆಯ ಸಾಲಿನಲ್ಲಿರುವ 'ದೊಡ್ಡದು, ಹೊಸಬರು' ಮೊದಲಾದುವು ಈ ವಿಶೇಷಣಗಳ ಕಾರಕರೂಪಗಳು. 'ದೊಡ್ಡ ಹುಲಿ' 'ಹೊಸ ನೆಂಟರು' ಮೊದಲಾದುವು ಪದಸಮುಚ್ಚಯಗಳು; 'ಹುಲಿ ದೊಡ್ಡದು' 'ನೆಂಟರು ಹೊಸಬರು' ಮೊದಲಾದುವು ವಾಕ್ಯಗಳು. ಈ ವಾಕ್ಯಗಳಲ್ಲಿ ಬಿಟ್ಟು ಹೋಗಿರುವ ಕ್ರಿಯಾಪದಗಳನ್ನು ಸೇರಿಸಿ ಬರೆದರೆ* 'ಹುಲಿ ದೊಡ್ಡದಾಗಿ ಇದೆ' 'ನೆಂಟರು ಹೊಸಬರಾಗಿ ಇದ್ದಾರೆ' ಎಂದು ಆಗುತ್ತವೆ. ಇಲ್ಲ 'ದೊಡ್ಡದು, ಹೊಸಬರು' ಮೊದಲಾದುವು ಕ್ರಿಯಾವಿಶೇಷಣಗಳಾಗಿವೆ ಯೆಂಬುದು ಈಗ ಸ್ಪಷ್ಟವಾಗುತ್ತವೆ.

೧೦. 'ದೊಡ್ಡದು ಹೊಸಬರು, ಎರಡನೆಯವಳು, ನನ್ನವು' ಮೊದಲಾದುವುಗಳ ಲಿಂಗ ವಚನಗಳನ್ನು ಈಗ ನೋಡಿ. ಇವು ಕ್ರಮವಾಗಿ 'ಹುಲಿ, ನೆಂಟರು, ಹುಡುಗಿ, ಪುಸ್ತಕಗಳು' ಎಂಬುವುಗಳ ಲಿಂಗವಚನಗಳಿಗೆ ಅನುಸಾರವಾಗಿವೆ. ಹೀಗೆ ನಾಮವಿಶೇಷಣಗಳು ಕಾರಕರೂಪವನ್ನು ಹೊಂದಿ ವಾಕ್ಯದಲ್ಲಿ ಕ್ರಿಯಾವಿಶೇಷಣಗಳಾಗಿ ಬಂದಾಗ ಅವು ತಮ್ಮ ಹಿಂದಿನ ವಿಶೇಷ್ಯಗಳ ಲಿಂಗವಚನಗಳನ್ನೇ ಸಾಮಾನ್ಯವಾಗಿ ಅನುಸರಿಸುತ್ತವೆ.

೧೧. 'ದೊಡ್ಡ ಹುಲಿ' 'ಹೊಸ ನೆಂಟರು' 'ಎರಡನೆಯ ಹುಡುಗಿ' 'ನನ್ನ ಪುಸ್ತಕಗಳು'—ಇವನ್ನು 'ದೊಡ್ಡದಾದ ಹುಲಿ' 'ಹೊಸಬರಾದ ನೆಂಟರು' 'ಎರಡನೆಯವಳಾದ ಹುಡುಗಿ' 'ನನ್ನವಾದ ಪುಸ್ತಕಗಳು' ಎಂದು ಬೇಕಾದರೂ ಹೇಳಬಹುದು. ಆಗ 'ದೊಡ್ಡದಾದ' ಮೊದಲಾದುವೂ ನಾಮವಿಶೇಷಣಗಳಾಗುತ್ತವೆ; ಅವುಗಳ ಲಿಂಗವಚನಗಳು ವಿಶೇಷ್ಯಗಳ ಲಿಂಗವಚನಗಳಿಗೆ ಅನುಸಾರವಾಗಿರುತ್ತವೆ.

## ೩. ಉಪವಿಶೇಷಣ

೧೨. ಕೆಳಗಿನ ವಾಕ್ಯಗಳನ್ನು ನೋಡಿ :

(೧) ನಾನು ಬಲು ದೊಡ್ಡ ಹಾವನ್ನು ನೋಡಿದೆನು.
(೨) ಇದು ತುಂಬ ದಟ್ಟವಾದ ಕಾಡು.
(೩) ಸರಸ್ವತಿ ಬಲು ಚೆನ್ನಾಗಿ ವೀಣೆಯನ್ನು ನುಡಿಸುತಾಳೆ.
(೪) ನೀನು ತುಂಬ ಮೆಲ್ಲಗೆ ನಡೆಯುತ್ತೀಯೆ.

'ಬಲು, ತುಂಬ,' ಎಂಬುವು ಒಂದೆರಡನೆಯ ವಾಕ್ಯಗಳಲ್ಲಿ ನಾಮ ವಿಶೇಷಣಗಳಿಗೂ ಮೂರು ನಾಲ್ಕನೆಯ ವಾಕ್ಯಗಳಲ್ಲಿ ಕ್ರಿಯಾವಿಶೇಷಣ ಗಳಿಗೂ ವಿಶೇಷಣಗಳಾಗಿ ಬಂದಿವೆ. ಹೀಗೆ ವಿಶೇಷಣಗಳಿಗೆ ವಿಶೇಷಣ ಗಳಾಗಿರುವ ಪದಗಳಿಗೆ ಉಪವಿಶೇಷಣಗಳೆಂದು ಹೆಸರು.

*ಹೀಗೆ ವಾಕ್ಯದಲ್ಲಿ ಬಿಟ್ಟುಹೋಗಿರುವ ಪದವನ್ನು ಸೇರಿಸಿಕೊಳ್ಳುವುದಕ್ಕೆ ಅಧ್ಯಾಹಾರ ವೆಂದು ಹೆಸರು. ಇದರ ವಿಚಾರ ಮುಂದಿನ ಅಧ್ಯಾಯದಲ್ಲಿ ಬಂದಿದೆ.

## ಇಪ್ಪತ್ತಾರನೆಯ ಅಧ್ಯಾಯ

### ಅನ್ವಯಕ್ರಮ–ಅಧ್ಯಾಹಾರ–ದ್ವಿರುಕ್ತಿ

### ೧. ಅನ್ವಯಕ್ರಮ

೧. ವಾಕ್ಯದಲ್ಲಿ ಕರ್ತೃ ಕರ್ಮ ಕ್ರಿಯಾಪದಗಳೂ ಅವುಗಳ ವಿಶೇಷಣಗಳೂ ಬಂದಿರತಕ್ಕ ಕ್ರಮಕ್ಕೆ **ಅನ್ವಯಕ್ರಮ**ವೆಂದು ಹೆಸರು.

ಕೆಳಗಿನ ವಾಕ್ಯದಲ್ಲಿ ಪದಗಳು ಬಂದಿರುವ ಕ್ರಮವನ್ನು ಪರಿಶೀಲಿಸಿ:

ಸೂರ್ಯನು ಹುಟ್ಟಿದನು.
ಗಾಳಿ ಬಲವಾಗಿ ಬೀಸಿತು.
ನಿದ್ದೆಯಿಂದ ಎದ್ದ ಮಗು ಅಳುತ್ತದೆ.
ಮಗು ನಿದ್ದೆಯಿಂದ ಎದ್ದು ಅಳುತ್ತದೆ.
ಬಡಗಿ ಪೆಟ್ಟಿಗೆಯನ್ನು ಮಾಡುತ್ತಾನೆ.
ನಮ್ಮ ಬಡಗಿ ಸೊಗಸಾದ ಪೆಟ್ಟಿಗೆಯನ್ನು ಮಾಡುತ್ತಾನೆ.
ನಮ್ಮ ಬಡಗಿ ಮರದ ಪೆಟ್ಟಿಗೆಯನ್ನು ಸೊಗಸಾಗಿ ಮಾಡುತ್ತಾನೆ.

ಸಾಮಾನ್ಯವಾಗಿ, ಕರ್ತೃಪದವು ವಾಕ್ಯದ ಮೊದಲಲ್ಲಿಯೂ ಕ್ರಿಯಾಪದವು ಕಡೆಯಲ್ಲಿಯೂ ಇರುತ್ತವೆ. ಕರ್ಮಪದವಿದ್ದರೆ ಅದು ಕರ್ತೃಪದ ಕ್ರಿಯಾಪದಗಳಿಗೆ ನಡುವೆ ಬರುತ್ತದೆ. ನಾಮವಿಶೇಷಣ ಕ್ರಿಯಾವಿಶೇಷಣಗಳು ತಮ್ಮ ತಮ್ಮ ವಿಶೇಷ್ಯಗಳ ಹಿಂದೆ ಬರುತ್ತವೆ.

೨. ಈ ಕ್ರಮವು ಕೆಲವು ಸಂದರ್ಭಗಳಲ್ಲಿ ತಪ್ಪಿಹೋಗುವುದೂ ಉಂಟು.

ಉದಾಹರಣೆ.

ದಾರಿಯಲ್ಲಿ ಹೋಗುವವರನ್ನೂ ಬರುವವರನ್ನೂ ಅವನು ಕೈಬೀಸಿ ಕರೆದನು.
(ಇಲ್ಲಿ ಕರ್ತೃಪದವು ಕರ್ಮಪದಗಳಾದ ಮೇಲೆ ಬಂದಿದೆ.)

ಮೋಡಗಳ ಮರೆಯಲ್ಲಿ ಚಂದ್ರನು ಇಣಿಕಿ ನೋಡುತ್ತಿದ್ದಾನೆ.
(ಇಲ್ಲಿ 'ಮೋಡಗಳ ಮರೆಯಲ್ಲಿ' ಎಂಬ ಪದಸಮುಚ್ಚಯವು ಕ್ರಿಯಾವಿಶೇಷಣವಾಗಿ ಕರ್ತೃಪದಕ್ಕೂ ಮೊದಲೇ ಬಂದಿದೆ.

ಸಿಕ್ಕಿತು ನನ್ನ ಪುಸ್ತಕ!
(ಇಲ್ಲಿ ಕ್ರಿಯಾಪದವು ಮೊದಲಲ್ಲೂ ಕರ್ತೃಪದವು ಕೊನೆಯಲ್ಲೂ ಬಂದಿವೆ.)

ಬೊಮ್ಮನ ಹಳ್ಳಿಯ ಕಿಂದರಿ ಜೋಗಿ
ಕಿಂದರಿ ಬಾರಿಸಿದನು ಇಂತಾಗಿ!
(ಇಲ್ಲಿ ಕ್ರಿಯಾವಿಶೇಷಣವು ಕ್ರಿಯಾಪದದ ಮುಂದೆ ಬಂದಿದೆ.)

೩. ಸಂಬೋಧನ ವಿಭಕ್ತಿಯ ಪದಗಳು ಭಾವಸೂಚಕಾವ್ಯಯಗಳೂ ಸಾಮಾನ್ಯವಾಗಿ ವಾಕ್ಯದ ಮೊದಲಲ್ಲಿ ಬರುತ್ತವೆ.

ಉದಾಹರಣೆ.

ಅಮ್ಮಾ, ನನಗೆ ಹಸಿವಾಗುತ್ತದೆ.
ಬಾಲಕರೆ, ಸಾಲಾಗಿ ನಿಂತುಕೊಳ್ಳಿ.
ಛೇ, ಇಂಥ ಅನ್ಯಾಯವೂ ಉಂಟೆ!
ಭಲಾ, ನೀನೇ ಶೂರ.

## ೨. ಅಧ್ಯಾಹಾರ

೪. ವಾಕ್ಯದಲ್ಲಿ ಸಾಮಾನ್ಯವಾಗಿ ಕರ್ತೃಪದ ಕ್ರಿಯಾಪದಗಳು ಇದ್ದೇ ಇರುತ್ತವೆಂದು ಹಿಂದೆ ನೋಡಿದೆವಷ್ಟೆ.

ಈಗ ಕೆಳಗಿನ ವಾಕ್ಯಗಳನ್ನು ಪರಿಶೀಲಿಸಿ ;

(೧) ನನ್ನ ಟೋಪಿ ಎಲ್ಲಿ?
(೨) ಮನೆಗೆ ಹೊರಡು.

ಒಂದನೆಯ ವಾಕ್ಯದಲ್ಲಿ ಕ್ರಿಯಾಪದವೂ ಎರಡನೆಯದರಲ್ಲಿ ಕರ್ತೃಪದವೂ ಇಲ್ಲ. ಆದರೂ ವಾಕ್ಯಗಳು ಪೂರ್ಣವಾಗಿರುವಂತೆ ತೋರುತ್ತದೆ. ಇದಕ್ಕೆ ಕಾರಣವೇನೆಂದರೆ 'ನನ್ನ ಟೋಪಿ ಎಲ್ಲಿ (ಇದೆ)?' '(ನೀನು) ಮನೆಗೆ ಹೊರಡು' : ಈ ರೀತಿಯಾಗಿ ಕ್ರಿಯಾಪದ ಕರ್ತೃಪದಗಳನ್ನು ನಾವೇ ಇಲ್ಲಿ ಸುಲಭವಾಗಿ ಊಹಿಸಿಕೊಂಡು ವಾಕ್ಯದ ಅರ್ಥವನ್ನು ಪೂರ್ತಿ ಮಾಡಿಕೊಳ್ಳಬಹುದು.

ವಾಕ್ಯದಲ್ಲಿ ಇಲ್ಲದಿರುವ ಪದಗಳನ್ನು ಅರ್ಥಪೂರ್ತಿಗಾಗಿ ಊಹಿಸಿಕೊಂಡು ಸೇರಿಸುವುದಕ್ಕೆ ಅಧ್ಯಾಹಾರವೆಂದು ಹೆಸರು.

೫. ಕನ್ನಡ ವಾಕ್ಯಗಳಲ್ಲಿ ಕರ್ತೃಪದ ಕ್ರಿಯಾಪದಗಳನ್ನು ಹಲವು ಕಡೆಗಳಲ್ಲಿ ಅಧ್ಯಾಹಾರಮಾಡಬೇಕಾಗುತ್ತದೆ. ಅಂಥ ಸಂದರ್ಭಗಳಲ್ಲಿ ಕೆಲವನ್ನು ಉದಾಹರಣೆಗಳ ಮೂಲಕ ಕೆಳಗೆ ತೋರಿಸಿದೆ.

೬. ಕರ್ತೃಪದದ ಅಧ್ಯಾಹಾರಕ್ಕೆ—

(೧) * ˄ ಮಿಡಲ್ ಸ್ಕೂಲ್ ಪರೀಕ್ಷೆಗೆ ಐದು ರೂಪಾಯಿಗಳನ್ನು ಕಟ್ಟಬೇಕು.
(˄ 'ವಿದ್ಯಾರ್ಥಿಗಳು')
ಅಣ್ಣ, ˄ ನನಗೆ ಒಂದು ಬೊಂಬೆಯನ್ನು ತಂದುಕೊಡು.
(˄ 'ನೀನು')
ನಾಳೆಯದಿನ ˄ ಬೆಟ್ಟಕ್ಕೆ ಹೋಗೋಣ.
(˄ 'ನಾವು')

---

* ಅಧ್ಯಾಹಾರ ಮಾಡಬೇಕಾದ ಕಡೆಯನ್ನು ˄ ಈ ಗುರುತಿನಿಂದ ತೋರಿಸಿದೆ.

ಹೀಗೆ, ವಾಕ್ಯದಲ್ಲಿ ವಿಧ್ಯರ್ಥದ ಕ್ರಿಯಾಪದವಿದ್ದಾಗ ಕರ್ತೃವನ್ನು ಎಷ್ಟೋವೇಳೆ ಹೇಳಿರುವುದಿಲ್ಲ.

(೨) ^ ಮಗುವಿಗೆ ರಾಮಚಂದ್ರನೆಂದು ನಾಮಕರಣಮಾಡಿದರು.
ಇಲ್ಲಿ ಮಕ್ಕಳಿಗೆ ಹಾಲನ್ನು ^ ಉಚಿತವಾಗಿ ಕೊಡುತ್ತಾರೆ.

ಇಂಥ ಕಡೆಗಳಲ್ಲಿ ಕರ್ತೃ ಸರಿಯಾಗಿ ಗೊತ್ತಿರುವುದಿಲ್ಲ : ಅಥವಾ ಅದನ್ನು ಹೇಳಬೇಕೆಂಬ ಉದ್ದೇಶವಿರುವುದಿಲ್ಲ. 'ತಂದೆ ತಾಯಿಗಳು' 'ಅಧಿಕಾರಿಗಳು'—ಹೀಗೆ ಸಂದರ್ಭಕ್ಕೆ ತಕ್ಕಂತೆ ಅಧ್ಯಾಹಾರ ಮಾಡಬೇಕು.

(೩) ಒಬ್ಬ ಕುರುಡನು ಭಿಕ್ಷೆಗಾಗಿ ಆ ಮನೆಯ ಬಳಿಗೆ ಬರುತ್ತಿದ್ದನು. ^ ದಾರಿಯಲ್ಲಿದ್ದ ದೊಡ್ಡ ಕಲ್ಲನ್ನು ಕಾಣದೆ ಎಡವಿ ಬಿದ್ದನು.
(^ 'ಅವನು')
'ಆಳು ಅಂಗಡಿಯಿಂದ ಬಂದನೆ?' ' ^ ಬರಲಿಲ್ಲ!'
(^ 'ಅವನು')

ಇಲ್ಲಿ ಹಿಂದಿನ ವಾಕ್ಯದ ಸಹಾಯದಿಂದ ಕರ್ತೃವನ್ನು ಅಧ್ಯಾಹಾರ ಮಾಡಬೇಕು.

೭. ಕ್ರಿಯಾಪದದ ಅಧ್ಯಾಹಾರಕ್ಕೆ—

(೧) ಈ ಚಿತ್ರವನ್ನು ಬರೆದವರು ಯಾರು ^? (^ ಆಗಿದ್ದಾರೆ)
ಕೂದಲಿನ ಬಣ್ಣ ಕಪ್ಪು ^. (^ ಆಗಿದೆ)
ಈ ಊರಿನ ಹೆಸರೇನು ^? (^ ಆಗಿದೆ)
ಆಕೆ ಮಲೆನಾಡಿನವಳು ^. (^ ಆಗಿದ್ದಾಳೆ)
ಈ ನದಿಯನ್ನು ದಾಟುವುದು ಹೇಗೆ ^? (^ ಆಗುತ್ತದೆ)

'ಆಗಿ' ಎಂಬುದರ ಮುಂದೆ 'ಇರು' ಧಾತುವಿನ ರೂಪಗಳು ಬರಬೇಕಾದ ಕಡೆಗಳಲ್ಲಿ ಎರಡೂ ಬಿಟ್ಟುಹೋಗುವುದೇ ರೂಢಿ. ಅವುಗಳನ್ನು ಸಂದರ್ಭಕ್ಕೆ ತಕ್ಕಂತೆ ಅಧ್ಯಾಹಾರಮಾಡಬೇಕು.

(೨) ಅವನಿಗೆ ಕೋಪ ಬಂದದ್ದು ಏಕೆ ^? (^ ಆಯಿತು)
ಅಗೋ, ಕುದುರೆ ^! (^ ಕಾಣಿಸುತ್ತದೆ)
'ಮೇಜಿನಮೇಲೆ ಮಸಿಯನ್ನು ಯಾರು ಚೆಲ್ಲಿದರು?' 'ಶಾರದೆ ^'
(^ 'ಚೆಲ್ಲಿದಳು')

ಇಂಥ ಕಡೆಗಳಲ್ಲಿ ಬೇರೆ ಬೇರೆ ಕ್ರಿಯಾಪದಗಳನ್ನು ಸಮಯೋಚಿತವಾಗಿ ಅಧ್ಯಾಹಾರ ಮಾಡಬೇಕು.

೮. ವಾಕ್ಯದಲ್ಲಿ ಕರ್ತೃಪದ ಕ್ರಿಯಾಪದಗಳಲ್ಲದೆ ಇತರ ಪದಗಳೂ ಬಿಟ್ಟುಹೋಗಿರುವುದುಂಟು. ಅರ್ಥಪೂರ್ತಿಗೆ ಅವಶ್ಯಕವಾಗಿದ್ದರೆ ಅವನ್ನು ಅಧ್ಯಾಹಾರ ಮಾಡಬೇಕಾಗುತ್ತದೆ.

ಉದಾಹರಣೆ.

ಕಮ್ಮಾರನು ಕಬ್ಬಿಣದ ತುಂಡನ್ನು ಮೊದಲು ಕೆಂಪಗೆ ಕಾಯಿಸುತ್ತಾನೆ ; ಬಳಿಕ ೧ ಅಡಿಗಲ್ಲಿನ ಮೇಲಿಟ್ಟು ಸುತ್ತಿಗೆಯಿಂದ ಹೊಡೆಯುತ್ತಾನೆ.
(೧ 'ಅದನ್ನು' : ಕರ್ಮಪದ)

ನೀನು ಚೆನ್ನಾಗಿ ಓದಬೇಕು ; ೧ ಬರೆಯಬೇಕು,
(೧ 'ಚೆನ್ನಾಗಿ' : ಕ್ರಿಯಾವಿಶೇಷಣ)

## ೨. ದ್ವಿರುಕ್ತಿ

೯. ಕೆಳಗಿನ ಪ್ರಯೋಗಗಳನ್ನು ನೋಡಿ:

(೧) ಬಿಡು, ಬಿಡು ನನ್ನನ್ನು ತಡೆಯಬೇಡ.

(೨) ನನ್ನ ಸೀಸದಕಡ್ಡಿಯನ್ನು ಎಲ್ಲಿ ಬಚ್ಚಿಟ್ಟಿದ್ದೀಯೋ, ಹೇಳು ಹೇಳು.

ಮೊದಲನೆಯ ವಾಕ್ಯದಲ್ಲಿ 'ಬಿಡು' ಎಂಬುದೂ ಎರಡನೆಯದರಲ್ಲಿ 'ಹೇಳು' ಎಂಬುದೂ ಎರಡೆರಡು ಬಾರಿ ಬಂದು ಸಂಭ್ರಮ ತ್ವರೆ ಮೊದಲಾದುವುಗಳನ್ನು ಸೂಚಿಸುತ್ತವೆ. ಹೀಗೆ ಒಂದು ವಿಶೇಷವಾದ ಅರ್ಥವನ್ನು ಸೂಚಿಸುವುದಕ್ಕಾಗಿ ಪದವನ್ನು ಎರಡುಬಾರಿ ಪ್ರಯೋಗಿಸುವುದಕ್ಕೆ ದ್ವಿರುಕ್ತಿ ಎಂದು ಹೆಸರು.

೧೦. ದ್ವಿರುಕ್ತಿ ಹಲವು ಬಗೆಯ ಅರ್ಥಗಳನ್ನು ಸೂಚಿಸುತ್ತದೆ. ಅವುಗಳಲ್ಲಿ ಕೆಲವನ್ನು ಕೆಳಗೆ ಉದಾಹರಿಸಿದೆ.

ಹಳ್ಳ ಹಳ್ಳ ! ನೋಡಿಕೊಂಡು ಬಂಡಿಯನ್ನು ಬಿಡು.
(ಎಚ್ಚರಿಕೆ)

ಆ ಮನೆಯನ್ನು ಕೊಂಡುಕೊಳ್ಳುವುದಕ್ಕೆ ಥೈಲಿ ಥೈಲಿಯ ಹಣವನ್ನು ಸುರಿದರಂತೆ (ಹೆಚ್ಚಿಗೆ)

ಕಪಿ ಅವನನ್ನು ನೋಡಿ ನೋಡಿ ಅಣಕಿಸಿತು.
(ಆವೃತ್ತಿ)

ಮುದುಕನು ತನ್ನ ಗಂಟನ್ನು ಇಟ್ಟಿದ್ದ ಬಳಿಗೆ ಓಡಿ ಓಡಿ ಬಂದನು.
(ತ್ವರೆ)

ಉತ್ಸವದ ದಿನ ಕೇರಿ ಕೇರಿಯಲ್ಲೂ ಮನೆ ಮನೆಯಲ್ಲೂ ಸಂಭ್ರಮ.
(=ಪ್ರತಿಯೊಂದು ಕೇರಿಯಲ್ಲೂ, ಪ್ರತಿಯೊಂದು ಮನೆಯಲ್ಲೂ)

ಇವರೆಲ್ಲರಿಗೂ ನಾಲ್ಕು ನಾಲ್ಕು ಬಿಸ್ಕತ್ತುಗಳನ್ನು ಕೊಡು.
(=ಒಬ್ಬನಿಗೆ ನಾಲ್ಕರಂತೆ)

೧೧. ಕೆಲವು ವೇಳೆ ಪದಸಮುಚ್ಚಯಕ್ಕೂ ವಾಕ್ಯಕ್ಕೂ ದ್ವಿರುಕ್ತಿ ಬರುವುದುಂಟು.

ಉದಾಹರಣೆ.

ಸಮ್ಮನಿದ್ದು ಸುಮ್ಮನಿದ್ದು ನನಗೆ ಸಾಕಾಯಿತು.
(ಪದಸಮುಚ್ಚಯ)
ಅದು ಹಗ್ಗವಲ್ಲ, ಹಾವು. ಇತ್ತ ಬಾ ; ಇತ್ತ ಬಾ.
(ವಾಕ್ಯ)

೧೨. **ಕೆಲವು ವಿಶೇಷಾಂಶಗಳು** :

(೧) ಕಡೆ, ತುದಿ, ನಡು, ಬಯಲು, ಮೊದಲು ಎಂಬಿವಕ್ಕೆ ದ್ವಿರುಕ್ತಿಯಲ್ಲಿ 'ಎಲ್ಲಕ್ಕಿಂತ ಕಡೆ' 'ಎಲ್ಲಕ್ಕಿಂತ ತುದಿ' ಈ ರೀತಿಯ ಅರ್ಥವಿರುವಾಗ, ಕಟ್ಟಕಡೆ, ತುಟ್ಟತುದಿ, ನಟ್ಟನಡು, ಬಟ್ಟಬಯಲು, ಮೊಟ್ಟಮೊದಲು ಎಂಬ ರೂಪಗಳು ಬರುತ್ತವೆ.

ಉದಾಹರಣೆ.

ಕಟ್ಟಕಡೆಯಲ್ಲಿ ಮೇಯಬೇಡ
ಬೆಟ್ಟದೊತ್ತಿಗೆ ಹೋಗಬೇಡ
ದುಷ್ಟವ್ಯಾಘ್ರನು ಹೊಂಚುತಿರುವನು
ನಟ್ಟನಡುವಿರು ಕಂದನೆ !

ಅವನು ಬೆಟ್ಟದ ತುಟ್ಟತುದಿಗೆ ಹತ್ತಿದನು.
ನಿನ್ನ ಗುಟ್ಟೆಲ್ಲಾ ಬಟ್ಟಬಯಲಾಯಿತು.
ದಕ್ಷಿಣಧ್ರುವಕ್ಕೆ ಮೊಟ್ಟಮೊದಲು ತಲಪಿದ ಸಾಹಸಿ ಯಾರು ?

(೨) ಕೆಳಗಿನ ವಾಕ್ಯಗಳನ್ನು ನೋಡಿ :

ಮೊದಮೊದಲು ಅವನು ತುಂಬಾ ಉತ್ಸಾಹದಿಂದ ಪಾಠಗಳನ್ನು ಓದುತ್ತಿದ್ದನು ; ಬರುಬರುತ್ತಾ ಅವನ ಶ್ರದ್ಧೆ ತಗ್ಗಿತು ; ಕಡೆ ಕಡೆಗೆ ಅವನು ದೊಡ್ಡ ಸೋಮಾರಿಯಾದನು.

ಊಟಮಾಡುವಾಗ ನಡುನಡುವೆ ನೀರು ಕುಡಿಯುವುದು ಒಳ್ಳೆಯದಲ್ಲ ವೆನ್ನುತ್ತಾರೆ.

ಹೀಗೆ ಕಡೆಕಡೆ, ನಡುನಡುವೆ, ಮೊದಮೊದಲು—ಈ ಬಗೆಯ ರೂಪಗಳೂ ಉಂಟು.

(೩) ಮೆಲ್ಲಗೆ, ಬೇಗನೆ ಮೊದಲಾದ ಸಾಮಾನ್ಯಾವ್ಯಯಗಳಿಗೆ ದ್ವಿರುಕ್ತಿ ಬಂದಾಗ ಮೊದಲ ಶಬ್ದದ ಕೊನೆಯ ಅಕ್ಷರವು ಲೋಪವಾಗುತ್ತದೆ.

ಉದಾಹರಣೆ.

ಹೀಗೆ ಮೆಲ್ಲಮೆಲ್ಲಗೆ ಹೆಜ್ಜೆಯಿಟ್ಟರೆ ಊರನ್ನು ಸೇರುವುದು ಎಂದಿಗೆ?
ಮಳೆ ಬರುವಹಾಗಿದೆ; ಸಾಮಾನುಗಳನ್ನೆಲ್ಲಾ ಬೇಗಬೇಗನೆ ಒಳಕ್ಕೆ ಇರಿಸು.

(೪) ನರಳು, ಹೆದರು, ನಡುಗು, ಮುಳುಗು— ಈ ರೀತಿ ಮೂರು ಸ್ವರಗಳನ್ನುಳ್ಳ ಧಾತುಗಳಿಗೆ ದ್ವಿರುಕ್ತಿ ಬಂದಾಗ ಮೊದಲ ಶಬ್ದದ ಕೊನೆಯ ಅಕ್ಷರವು ಲೋಪವಾಗುವುದುಂಟು.

ಉದಾಹರಣೆ.

ಅವನು ಹೊಟ್ಟೇನೋವಿನಿಂದ ನರನರಳಿ ಬೇಸತ್ತನು.
ಬೇಟೆಗಾರನು ಹುಲಿಗೆ ಹೆದಹೆದರಿ ತನ್ನ ಕೋವಿಯನ್ನೇ ಕೆಳಕ್ಕೆ ಬೀಳಿಸಿದನು.

ಇಲ್ಲಿ ನರಳಿ ನರಳಿ, ಹೆದರಿ ಹೆದರಿ, ಎಂದೂ ಹೇಳಬಹುದು.

ಹೀಗೆಯೇ—ನಡುಗುನಡುಗು, ನಡುನಡುಗು; ಮುಳುಗುಮುಳುಗು, ಮುಳುಮುಳುಗು, ಇತ್ಯಾದಿ.

(೫) ದ್ವಿರುಕ್ತಿಯಲ್ಲಿ ಮೊದಲ ಶಬ್ದದ ಕೊನೆಯ ಅಕ್ಷರಕ್ಕೆ ಇನ್ನೂ ಕೆಲವು ಕಡೆಗಳಲ್ಲಿ ಲೋಪ ಬರುತ್ತದೆ.

ಉದಾಹರಣೆ.

ಭೂಮಿಯ ಮಟ್ಟದಿಂದ ಕೆಳಕೆಳಗೆ ಹೋದಂತೆಲ್ಲಾ ಕಾವು ಹೆಚ್ಚುತ್ತದೆ.
ಅವರು ಹೊರಹೊರಗೇ ಕಾದಾಡುತ್ತಿರಲಿ.

---

## ಇಪ್ಪತ್ತೇಳನೆಯ ಅಧ್ಯಾಯ

### ವಾಕ್ಯಭೇದಗಳು

### ೧. ಸಾಮಾನ್ಯ-ಸಂಯೋಜಿತ-ಮಿಶ್ರ ವಾಕ್ಯಗಳು

೧. ಕೆಳಗಿನ ವಾಕ್ಯಗಳನ್ನು ನೋಡಿ:

(೧) ನದಿ ಹರಿಯುತ್ತದೆ.
(೨) ಮನೆಗೆ ಹೋಗು.
(೩) ಬೆಕ್ಕು ಅಡಿಗೆಯಮನೆಗೆ ನುಗ್ಗಿ, ಪಾತ್ರೆಯಲ್ಲಿದ್ದ ಹಾಲನ್ನೆಲ್ಲಾ ಕುಡಿಯಿತು.
(೪) ನರಸಜ್ಜನ ಬಾಯಲ್ಲಿ ಒಂದು ಹಲ್ಲೂ ಇಲ್ಲ.
(೫) ಹುಲಿಯನ್ನು ಕಂಡರೆ ಜಿಂಕೆಗಳಿಗೆ ಭಯ.
(೬) ಆತನ ಮಕ್ಕಳೆಲ್ಲ ಬುದ್ಧಿವಂತರು.

ಇಲ್ಲಿ ೧, ೨, ೩ನೆಯ ವಾಕ್ಯಗಳಲ್ಲಿ ಒಂದೊಂದರಲ್ಲೂ ಒಂದೊಂದು ಪೂರ್ಣಕ್ರಿಯಾಪದವಿದೆ. ೪ನೆಯದರಲ್ಲಿ 'ಇಲ್ಲ' ಎಂಬ ಪೂರ್ಣಕ್ರಿಯೆಯ ಅರ್ಥವನ್ನು ಕೊಡುವ ಅವ್ಯಯವಿದೆ. ೫, ೬ನೆಯ ವಾಕ್ಯಗಳಲ್ಲಿ ಕ್ರಮವಾಗಿ 'ಆಗುತ್ತದೆ', 'ಆಗಿದ್ದಾರೆ' ಎಂದು ಪೂರ್ಣ ಕ್ರಿಯಾ ಪದಗಳನ್ನು ಅಧ್ಯಾಹಾರ ಮಾಡಬೇಕಾಗುತ್ತದೆ. ಈ ವಾಕ್ಯಗಳಲ್ಲಿ ಒಂದೊಂದೂ ಪೂರ್ಣವಾದ ಅರ್ಥವನ್ನು ಒಳಕೊಂಡು ಸ್ವತಂತ್ರವಾಗಿ ನಿಂತಿದೆ.

ಹೀಗೆ ಒಂದು ಪೂರ್ಣಕ್ರಿಯಾಪದವನ್ನುಳ್ಳ ಸ್ವತಂತ್ರ ವಾಕ್ಯಕ್ಕೆ **ಸಾಮಾನ್ಯ ವಾಕ್ಯವೆಂದು** ಹೆಸರು.

೨. ಸಾಮಾನ್ಯವಾಕ್ಯದಲ್ಲಿ ಒಂದೇ ಪೂರ್ಣಕ್ರಿಯಾಪದವಿರಬೇಕು; ಸಾಪೇಕ್ಷಕ್ರಿಯಾರೂಪಗಳು ಎಷ್ಟಾದರೂ ಇರಬಹುದು. ಉದಾಹರಣೆಗೆ ಕೆಳಗಿನ ಸಾಮಾನ್ಯವಾಕ್ಯವನ್ನು ನೋಡಿ:

ಆ ಮುದುಕಿಗೆ ವಯಸ್ಸು ಹೆಚ್ಚಿ, ಶಕ್ತಿ ಕುಂದುತ್ತಾ ಬಂದದ್ದರಿಂದ ಅವಳು ಒಂಟಿಯಾಗಿರುವುದಕ್ಕೆ ಇಷ್ಟಪಡದೆ ಆರು ತಿಂಗಳು ತನ್ನ ಹಿರಿಯಮಗಳ ಮನೆಯಲ್ಲೂ ಆರು ತಿಂಗಳು ಕಿರಿಯಮಗಳ ಮನೆಯಲ್ಲೂ ವಾಸಮಾಡುತ್ತಾ ಕಾಲಕಳೆಯುತ್ತಿದ್ದಳು.

ಇಲ್ಲಿ, 'ಕಾಲಕಳೆಯುತ್ತಿದ್ದಳು' ಎಂಬುದೊಂದೇ ಪೂರ್ಣಕ್ರಿಯಾ ಪದ. ಮಿಕ್ಕವೆಲ್ಲಾ ಸಾಪೇಕ್ಷಕ್ರಿಯಾರೂಪಗಳು.

೩. ಕೆಳಗಿನ ವಾಕ್ಯಗಳನ್ನು ನೋಡಿ :

(೧) ಭರತನು ರಾಮನನ್ನು ರಾಜ್ಯಭಾರಮಾಡುವಂತೆ ಕೇಳಿಕೊಂಡನು ; ಆದರೆ ರಾಮನು ಒಪ್ಪಲಿಲ್ಲ.

(೨) ಆಗ ಮಳೆ ಸಣ್ಣಗೆ ಹನಿಯುತ್ತಿತ್ತು ; ಆದಕಾರಣ ಕೊಡೆ ಹಿಡಿದು ಕೊಂಡು ಪೇಟೆಯ ಕಡೆಗೆ ಹೊರಟೆನು.

(೩ ಆ ಕೊಳದಲ್ಲಿದ್ದ ಕೆಲವರು ಸ್ನಾನಮಾಡುತ್ತಿದ್ದರು ; ಕೆಲವರು ಬಟ್ಟೆಗಳನ್ನು ಒಗೆಯುತ್ತಿದ್ದರು.

(೪) ಕೋತಿ ಮರದಿಂದ ಇಳಿಯಿತು ; ಮೆಲ್ಲನೆ ಮಗುವಿನ ಹತ್ತಿರಕ್ಕೆ ಬಂದಿತು ; ಆದರ ಕೈಯಲ್ಲಿದ್ದ ತಿಂಡಿಯನ್ನು ಥಟ್ಟನೆ ಕಸಿದು ಕೊಂಡು ಓಡಿಹೋಯಿತು.

೧ನೆಯ ವಾಕ್ಯದಲ್ಲಿ, 'ಭರತನು . . . ಕೇಳಿಕೊಂಡನು,' 'ರಾಮನು ಒಪ್ಪಲಿಲ್ಲ' ಎಂಬ ಎರಡು ವಾಕ್ಯಗಳಿವೆ. ಇವು ಇಲ್ಲಿ ಬಿಡಿಯಾಗಿ ನಿಂತಿಲ್ಲ ; 'ಆದರೆ' ಎಂಬ ಸಂಬಂಧಸೂಚಕಾವ್ಯಯವು ಇವುಗಳನ್ನು ಕೂಡಿಸಿದೆ.

೨ನೆಯ ವಾಕ್ಯದಲ್ಲಿ, 'ಆಗ . . . ಹನಿಯುತ್ತಿತ್ತು,' 'ಕೊಡೆ . . ಹೊರಟೆನು' ಎಂಬ ಎರಡುವಾಕ್ಯಗಳನ್ನು 'ಆದಕಾರಣ' ಎಂಬ ಸಂಬಂಧಸೂಚಕಾವ್ಯಯವು ಕೂಡಿಸಿದೆ.

೩ನೆಯ ವಾಕ್ಯದಲ್ಲಿ, 'ಆ ಕೊಳದಲ್ಲಿ . . . ಸ್ನಾನಮಾಡುತ್ತಿದ್ದರು,' 'ಕೆಲವರು . . . ಒಗೆಯುತ್ತಿದ್ದರು' ಎಂಬ ಎರಡು ವಾಕ್ಯಗಳು ಸೇರಿವೆ. ಸಂಬಂಧಸೂಚಕಾವ್ಯಯ ಯಾವುದೂ ಇಲ್ಲದಿದ್ದರೂ, ಇವೆರಡು ವಾಕ್ಯಗಳಿಗೂ ಸಂಬಂಧವಿರುವುದು ಅರ್ಥದಿಂದಲೇ ಸ್ಪಷ್ಟವಾಗುತ್ತದೆ.

೪ನೆಯ ವಾಕ್ಯದಲ್ಲಿ, 'ಕೋತಿ . . . ಇಳಿಯಿತು,' 'ಮೆಲ್ಲನೆ . . . ಬಂದಿತು,' 'ಆದರ . . . ಓಡಿಹೋಯಿತು' ಎಂಬ ಮೂರು ವಾಕ್ಯಗಳು ಸೇರಿವೆ. ಇಲ್ಲಿಯೂ ಸಂಬಂಧಸೂಚಕಾವ್ಯಯಗಳಿಲ್ಲ. ಅಷ್ಟೇ ಅಲ್ಲ ; 'ಮೆಲ್ಲನೆ . . . ಬಂದಿತು,' 'ಅದರ . . ಓಡಿಹೋಯಿತು' ಎಂಬ ವಾಕ್ಯಗಳಲ್ಲಿ ಕರ್ತೃಪದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕು.

ಈ ನಾಲ್ಕು ಕಡೆಗಳಲ್ಲೂ, ಎರಡು ಅಥವಾ ಅದಕ್ಕೂ ಹೆಚ್ಚಿನ ಬೇರೆ ಬೇರೆ ವಾಕ್ಯಗಳು ಸೇರಿ ಒಂದೊಂದು ದೊಡ್ಡ ವಾಕ್ಯವಾಗಿದೆಯಷ್ಟೆ. ಹೀಗೆ ದೊಡ್ಡದೊಂದು ವಾಕ್ಯದ ಅಂಗಗಳಾಗಿ ಸೇರುವ ವಾಕ್ಯಗಳಿಗೆ ಉಪವಾಕ್ಯಗಳೆಂದು ಹೆಸರು. ಪ್ರತಿಯೊಂದು ಉಪವಾಕ್ಯದಲ್ಲೂ ಪೂರ್ಣ ಕ್ರಿಯಾಪದವಿರಬೇಕು.

ಮೇಲೆ ನಾವು ಬಿಡಿಸಿನೋಡಿದ ಉಪವಾಕ್ಯಗಳನ್ನು ಮತ್ತೊಮ್ಮೆ ಪರಿಶೀಲಿಸಿ. ಇದನ್ನು ಬೇರೆ ಬೇರೆಯಾಗಿ ತೆಗೆದುಕೊಂಡರೆ ಒಂದೊಂದೂ ಸ್ವತಂತ್ರ ವಾಕ್ಯವಾಗಿ ನಿಲ್ಲಬಲ್ಲದು.

ಹೀಗೆ, ಸ್ವತಂತ್ರವಾಗಿ ನಿಲ್ಲಬಲ್ಲ ಎರಡು ಅಥವಾ ಅನೇಕ ಉಪವಾಕ್ಯಗಳು ಸೇರಿ ಒಂದು ವಾಕ್ಯವಾಗಿದ್ದರೆ ಅದಕ್ಕೆ **ಸಂಯೋಜಿತವಾಕ್ಯ**ವೆಂದು ಹೆಸರು. ಮೇಲೆ ಉದಾಹರಿಸಿರುವ ನಾಲ್ಕು ವಾಕ್ಯಗಳೂ ಸಂಯೋಜಿತ ವಾಕ್ಯಗಳು.

೪. ಕೆಳಗಿನ ವಾಕ್ಯಗಳನ್ನು ನೋಡಿ :

(೧) ತನ್ನ ಹಡಗು ಬಂಡೆಗೆ ತಗುಲಿ ಒಡೆಯಿತೆಂದು ಆ ವರ್ತಕನಿಗೆ ತಿಳಿಯಿತು.
(೨) ಗೋವಿಂದನಿಗೆ ಮದುವೆಯಾಯಿತೆಂಬುದನ್ನು ಅವನ ಬಾಯಿಂದಲೇ ಕೇಳಿದೆನು.
(೩) ಕೋಟೆಯೊಳಕ್ಕೆ ಶತ್ರುಗಳು ನುಗ್ಗಿದರೆಂಬ ಸುದ್ದಿಯನ್ನು ಕೇಳಿ ಜನಗಳು ತಲ್ಲಣಗೊಂಡರು.
(೪) ಅಕ್ಕಸಾಲೆ ಸುಳ್ಳುನೆವಗಳನ್ನು ಹೇಳಿದನೇ ಹೊರತು ಯನ್ನು ಮಾಡಿಕೊಡಲಿಲ್ಲ.

ಈ ನಾಲ್ಕು ಕಡೆಗಳಲ್ಲೂ ಎರಡೆರಡು ಉಪವಾಕ್ಯಗಳಿವೆ. ಇವುಗಳೊಳಗೆ, ದೊಡ್ಡ ಅಕ್ಷರದಲ್ಲಿ ತೋರಿಸಿರುವ ಉಪವಾಕ್ಯಗಳನ್ನು ಪರಿಶೀಲಿಸಿ.

೧ನೆಯ ವಾಕ್ಯದಲ್ಲಿ, 'ತನ್ನ . . . ಒಡೆಯಿತೆಂದು' ಎಂಬ ಉಪವಾಕ್ಯವು ಇನ್ನೊಂದು ಉಪವಾಕ್ಯದ 'ತಿಳಿಯಿತು' ಎಂಬ ಕ್ರಿಯಾಪದಕ್ಕೆ ಕರ್ತೃವಾಗಿದೆ.

೨ನೆಯ ವಾಕ್ಯದಲ್ಲಿ, 'ಗೋವಿಂದನಿಗೆ . . . ಎಂಬುದನ್ನು' ಎಂಬ ಉಪವಾಕ್ಯವು ಇನ್ನೊಂದು ಉಪವಾಕ್ಯದ 'ಕೇಳಿದೆನು' ಎಂಬ ಕ್ರಿಯಾಪದಕ್ಕೆ ಕರ್ಮವಾಗಿದೆ.

೩ನೆಯ ವಾಕ್ಯದಲ್ಲಿ, ಕೋಟೆಯೊಳಕ್ಕೆ . . . ನುಗ್ಗಿದರೆಂಬ' ಎಂಬುದು ಇನ್ನೊಂದು ಉಪವಾಕ್ಯದಲ್ಲಿರುವ 'ಸುದ್ದಿಯನ್ನು' ಎಂಬ ನಾಮಪದಕ್ಕೆ ವಿಶೇಷಣವಾಗಿದೆ.

೪ನೆಯ ವಾಕ್ಯದಲ್ಲಿ, 'ಅಕ್ಕಸಾಲೆ . . . ಹೊರತು' ಎಂಬುದು ಇನ್ನೊಂದು ಉಪವಾಕ್ಯದ 'ಮಾಡಿಕೊಡಲಿಲ್ಲ' ಎಂಬ ಕ್ರಿಯಾಪದಕ್ಕೆ ವಿಶೇಷಣವಾಗಿದೆ.

ಹೀಗೆ ನಾಲ್ಕು ಕಡೆಗಳಲ್ಲೂ ಒಂದು ಉಪವಾಕ್ಯವು ಮತ್ತೊಂದು ಉಪವಾಕ್ಯಕ್ಕೆ ಕರ್ತೃವೋ, ಕರ್ಮವೋ ಅದರಲ್ಲಿರುವ ನಾಮಪದ ಕ್ರಿಯಾ

ಪದಗಳಿಗೆ ವಿಶೇಷಣವೋ ಆಗಿ, ಅದಕ್ಕೆ ಅಧೀನವಾಗಿ ಬಂದಿದೆ. ಇಂಥ ಉಪವಾಕ್ಯವನ್ನು **ಅಧೀನವಾಕ್ಯ**ವೆಂದೂ, ಯಾವುದಕ್ಕೆ ಅದು ಅಧೀನವಾಗಿದೆಯೋ ಆ ಉಪವಾಕ್ಯವನ್ನು **ಪ್ರಧಾನವಾಕ್ಯ**ವೆಂದೂ ಕರೆಯುತ್ತಾರೆ.

ಪ್ರಧಾನವಾಕ್ಯವೊಂದಕ್ಕೆ ಒಂದು ಅಥವಾ ಅನೇಕ ಉಪವಾಕ್ಯಗಳು ಅಧೀನವಾಗಿ ಸೇರಿದ್ದರೆ **ಮಿಶ್ರವಾಕ್ಯ**ವಾಗುತ್ತದೆ. ಮೇಲೆ ಉದಾಹರಿಸಿರುವ ನಾಲ್ಕು ವಾಕ್ಯಗಳೂ ಮಿಶ್ರವಾಕ್ಯಗಳು.

೫. ಮಿಶ್ರವಾಕ್ಯದಲ್ಲಿ ಒಂದಕ್ಕಿಂತ ಹೆಚ್ಚಾಗಿ ಅಧೀನವಾಕ್ಯಗಳಿರುವುದಕ್ಕೆ ಉದಾಹರಣೆ:

> ಅವನನ್ನು ಎಲ್ಲಿಯೋ ನೋಡಿದ್ದೆನೆಂಬ ಸಂಗತಿ ನನಗೆ ಜ್ಞಾಪಕಬಂದಿತೇ ಹೊರತು ಅವನ ಹೆಸರು ಏನೆಂಬುದು ಎಷ್ಟು ಯೋಚಿಸಿದರೂ ಹೊಳೆಯಲಿಲ್ಲ.

ಇಲ್ಲಿ, (೧) ಅವನನ್ನು ಎಲ್ಲಿಯೋ ನೋಡಿದ್ದನೆಂಬ, (೨) . . . ಸಂಗತಿ ನನಗೆ ಜ್ಞಾಪಕ ಬಂದಿತೇ ಹೊರತು. (೩) ಅವನ ಹೆಸರು ಏನೆಂಬುದು, (೪) . . . ಎಷ್ಟು ಯೊ ಚಿಸಿದರೂ ನನಗೆ ಹೊಳೆಯಲಿಲ್ಲ —ಈ ನಾಲ್ಕು ಉಪವಾಕ್ಯಗಳಿವೆ, ಇವುಗಳಲ್ಲಿ ೪ನೆಯದು ಪ್ರಧಾನವಾಕ್ಯ' ಇದರ 'ಹೊಳೆಯಲಿಲ್ಲ' ಎಂಬ ಕ್ರಿಯಾಪದಕ್ಕೆ ೨ನೆಯ ಉಪವಾಕ್ಯವು ಕ್ರಿಯಾ ವಿಶೇಷಣ ; ೩ನೆಯ ಉಪವಾಕ್ಯವು ಕರ್ತೃ, ೧ನೆಯ ಉಪವಾಕ್ಯವು ೨ನೆಯ ಉಪವಾಕ್ಯದಲ್ಲಿರುವ 'ಸಂಗತಿ' ಎಂಬುದಕ್ಕೆ ವಿಶೇಷಣ.

೬. ಮಿಶ್ರವಾಕ್ಯದಲ್ಲಿ ಸಂಯೋಜಿತವಾಕ್ಯವೂ ಸಂಯೋಜಿವಾಕ್ಯದಲ್ಲಿ ಮಿಶ್ರವಾಕ್ಯವೂ ಉಪವಾಕ್ಯವಾಗಿರಬಹುದು.

ಉದಾಹರಣೆ.

> (೧) 'ಮಾತುಬಲ್ಲವನಿಗೆ ಜಗಳವಿಲ್ಲ ; ಊಟ ಬಲ್ಲವನಿಗೆ ರೋಗವಿಲ್ಲ' ಎಂಬ ಗಾದೆ ನಿನಗೆ ತಿಳಿಯದೆ ?

(ಈ ಮಿಶ್ರವಾಕ್ಯದಲ್ಲಿ, 'ಮಾತು . . . ರೋಗವಿಲ್ಲ' ಎಂಬ ಸಂಯೋಜಿತ ವಾಕ್ಯವು ಪ್ರಧಾನವಾಕ್ಯದ 'ಗಾದೆ' ಎಂಬ ನಾಮಪದಕ್ಕೆ ವಿಶೇಷಣವಾಗಿದೆ.)

> (೨) ಶಿವಾಜಿ ಸೆರೆಮನೆಯಿಂದ ತಪ್ಪಿಸಿಕೊಂಡನೆಂದು ಕೇಳಿ ಔರಂಗ್ ಜೇಬನು ತುಂಬ ಸಿಟ್ಟಾದನು ? ಆದರೆ ಮತ್ತೆ ಶಿವಾಜಿಯನ್ನು ಹಿಡಿಯುವುದು ಅವನಿಂದ ಸಾಗಲಿಲ್ಲ.

(ಈ ಸಂಯೋಜಿತ ವಾಕ್ಯದಲ್ಲಿ, 'ಶಿವಾಜಿ . . . ಸಿಟ್ಟಾದನು' ಎಂಬ ಮಿಶ್ರವಾಕ್ಯವು ಮೊದಲನೆಯ ಉಪವಾಕ್ಯವಾಗಿದೆ.)

## ೨. ವಾಕ್ಯಪರಿವರ್ತನೆ.

೭. ಸಾಮಾನ್ಯ, ಸಂಯೋಜಿತ, ಮಿಶ್ರ ಎಂಬ ಮೂರು ಬಗೆಯ ವಾಕ್ಯಗಳಲ್ಲಿ ಒಂದನ್ನು ಕೊಟ್ಟರೆ, ಅದರಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಿ ಮತ್ತೊಂದು ಬಗೆಯ ವಾಕ್ಯವಾಗಿ ಅನೇಕ ಸಂದರ್ಭಗಳಲ್ಲಿ ಮಾರ್ಪಡಿಸಬಹುದು. ಹೀಗೆ ಮಾರ್ಪಡಿಸುವುದಕ್ಕೆ **ವಾಕ್ಯಪರಿವರ್ತನ**ವೆಂದು ಹೆಸರು.

೮. ಸಾಮಾನ್ಯ_ಸಂಯೋಜಿತ, ಸಾಮಾನ್ಯ_ಮಿಶ್ರ ಇವುಗಳ ಪರಿವರ್ತನಕ್ಕೆ ಕೆಲವು ಉದಾಹರಣೆಗಳನ್ನು ಕೆಳಗೆ ಕೊಟ್ಟಿದೆ ;

ಸಂಯೋಜಿತ : ಅವನು ಕಾಶಿಗೆ ಹೋದನು ; ಆದರೂ ಕೆಟ್ಟ ಬುದ್ಧಿಯನ್ನು ಬಿಡಲಿಲ್ಲ.
ಸಾಮಾನ್ಯ ; ಅವನು ಕಾಶಿಗೆ ಹೋದರೂ ಕೆಟ್ಟ ಬುದ್ಧಿಯನ್ನು ಬಿಡಲಿಲ್ಲ.
ಸಂಯೋಜಿತ : ಮಳೆ ಬಂದಿತು ; ಹೊಳೆ ಹೆಚ್ಚಿತು.
ಸಾಮಾನ್ಯ : ಮಳೆ ಬಂದು (ಬಂದದ್ದರಿಂದ) ಹೊಳೆ ಹೆಚ್ಚಿತು.
ಸಂಯೋಜಿತ : ಶಂಕರನು ನನ್ನ ಜೊತೆಗೆ ಬರಲು ಒಪ್ಪಿಕೊಂಡನು ; ಅದರಿಂದ ನನಗೆ ಧೈರ್ಯವುಂಟಾಯಿತು.
ಸಾಮಾನ್ಯ : ಶಂಕರನು ನನ್ನ ಜೊತೆಗೆ ಬರಲು ಒಪ್ಪಿಕೊಂಡದ್ದರಿಂದ ನನಗೆ ಧೈರ್ಯವುಂಟಾಯಿತು.
ಮಿಶ್ರ : ಅವನು ಮನೆಯನ್ನು ಮಾರಿಬಿಟ್ಟನೆಂಬುದು ನಿಮಗೆ ಗೊತ್ತಿಲ್ಲವೆ ?
ಸಾಮಾನ್ಯ : ಅವನು ಮನೆಯನ್ನು ಮಾರಿಬಿಟ್ಟದ್ದು ನಿಮಗೆ ಗೊತ್ತಿಲ್ಲವೆ ;
ಮಿಶ್ರ : ನಿನಗೆ ಹೇಗೆ ತೋರುವುದೋ ಹಾಗೆ ಮಾಡು.
ಸಾಮಾನ್ಯ : ನಿನಗೆ ತೋರುವ ಹಾಗೆ ಮಾಡು.
ಮಿಶ್ರ : ಸಂಪತ್ತು ಹೇಗೆ ಬರುತ್ತದೋ ಹೇಗೆ ಹೋಗುತ್ತದೋ ಯಾರು ಬಲ್ಲರು ?
ಸಾಮಾನ್ಯ : ಸಂಪತ್ತು ಬರುವ ರೀತಿಯನ್ನೂ ಹೋಗುವ ರೀತಿಯನ್ನೂ ಯಾರುಬಲ್ಲರು ?

೯. ಸಂಯೋಜಿತವಾಕ್ಯ ಮಿಶ್ರವಾಕ್ಯಗಳ ಉಪವಾಕ್ಯಗಳಲ್ಲಿರುವ ಪೂರ್ಣ ಕ್ರಿಯಾಪದಗಳಿಗೆ ಬದಲಾಗಿ ಸಾಪೇಕ್ಷಕ್ರಿಯಾರೂಪ, ಕೃದಂತಭಾವನಾಮ, ಕೃದಂತನಾಮ ಇವುಗಳನ್ನು ಸಮಯೋಚಿತವಾಗಿ ಉಪಯೋಗಿಸಿದರೆ ಸಾಮಾನ್ಯವಾಕ ಗಳಾಗುತ್ತವೆ.

## ವಾಕ್ಯ ವಿಭಜನೆ.

೧೦. ವಾಕ್ಯವು ಸಂಯೋಜಿತವೋ ಮಿಶ್ರವೋ ಆದರೆ ಅದರಲ್ಲಿ ಹಲವು ಉಪವಾಕ್ಯಗಳಿರುತ್ತವೆ. ಪ್ರತಿಯೊಂದು ಉಪವಾಕ್ಯದಲ್ಲೂ ಕರ್ತೃ ಕ್ರಿಯೆಗಳೂ, ಸಂದರ್ಭಕ್ಕೆ ತಕ್ಕಂತೆ ಕರ್ಮಪದ, ಕರ್ತೃವಿಶೇಷಣ,

ಕರ್ಮವಿಶೇಷಣ, ಕ್ರಿಯಾಪಿಶೇಷಣ ಮೊದಲಾದುವೂ ಇರುತ್ತವೆ; ಈ ಮಾತು ಸಾಮಾನ್ಯವಾಕ್ಯಕ್ಕೂ ಅನ್ವಯಿಸುತ್ತದೆ. ಹೀಗೆ ವಾಕ್ಯದಲ್ಲಿ ಜೋಡಣೆ ಹೊಂದಿರುವ ಅಂಗಗಳನೆಲ್ಲಾ ಬೇರ್ಪಡಿಸಿ ಅವುಗಳ ಸಂಬಂಧ ವನ್ನು ತೋರಿಸುವುದಕ್ಕೆ **ವಾಕ್ಯವಿಭಜನೆ** ಎಂದು ಹೆಸರು. ಒಂದು ವಾಕ್ಯವನ್ನು ವಿಭಜನೆ ಮಾಡುವುದರಿಂದ ಅದರ ರಚನೆ ನಮಗೆ ಸ್ಪಷ್ಟವಾಗಿ ತಿಳಿಯುತ್ತದೆ.

೧೧. 'ವಾಕ್ಯವಿಭಜನೆ' ಯನ್ನು ಒಂದು ಪಟ್ಟಿಯ ರೂಪದ ಮಾಡುವುದು ಪದ್ಧತಿಯಾಗಿದೆ. ಅದರ ನಮೂನೆ ಕೆಳಗೆ ಕೊಟ್ಟಿರುವಂ ಇರುತ್ತದೆ.

| ವಾಕ್ಯ ಅಥವಾ ಉಪವಾಕ್ಯ | ಕರ್ತೃ ವಿಶೇಷಣ | ಕರ್ತೃ | ಕರ್ಮ ವಿಶೇಷಣ | ಕರ್ಮ | ಕ್ರಿಯಾ ವಿಶೇಷಣ | ಕ್ರಿಯಾ ಪದ | ಸಂಬಂಧ ಸೂಚಕ ವೆ ೂದಲಾದುವು |
|---|---|---|---|---|---|---|---|

೧೨. ಮೊದಲು ಉಪವಾಕ್ಯಗಳನ್ನು ವಿಂಗಡಿಸಿಕೊಂಡು ಅವುಗಳಲ್ಲಿ ಒಂದೊಂದಕ್ಕೆ ಇರುವ ಸಂಬಂಧವನ್ನು ತಿಳಿಸಬೇಕು. ಬಳಿಕ ಪ್ರತಿ ಯೊಂದು ಉಪವಾಕ್ಯದಲ್ಲೂ ಕರ್ತೃ ಕ್ರಿಯಾಪದಗಳನ್ನು ಕಂಡುಹಿಡಿದು ಗುರುತಿಸಿ, ಕರ್ಮ, ವಿಶೇಷಣ ಮೊದಲಾದುವು ಇದ್ದರೆ ಅವನ್ನೂ ಕಾಣಿಸ ಬೇಕು. ಸಂಬಂಧಸೂಚಕ ಶಬ್ದ, ಭಾವಸೂಚಕ ಶಬ್ದ, ಸಂಬೋಧನ ವಿಭಕ್ತಿಯ ಪದ—ಇಂಥವನ್ನು ಪ್ರತ್ಯೇಕವಾಗಿ ತೋರಿಸಬೇಕು. ಅರ್ಥ ಪೂರ್ತಿಗೆ ಯಾವುದಾದರೂ ಒಂದು ಪದವು ಅವಶ್ಯಕವಾಗಿದ್ದರೆ ಅದನ್ನು ಅಧ್ಯಾಹಾರಮಾಡಿ ಆವರಣ ಚಿಹ್ನೆಗಳಲ್ಲಿ ತೋರಿಸಬೇಕು.

೧೩. ಸಾಮಾನ್ಯವಾಕ್ಯ, ಸಂಯೋಜಿತವಾಕ್ಯ, ಮಿಶ್ರ ವಾಕ್ಯ—ಈ ಮೂರಕ್ಕೂ ಎರಡೆರಡು ಉದಾಹರಣೆಗಳನ್ನು ವಿಭಜನೆಮಾಡಿ ಮುಂದೆ ಕೊಟ್ಟಿದೆ :

## ಸಾಮಾನ್ಯವಾಕ್ಯ

೧. ನಾನು ಈ ವಿಷಯವನ್ನು ಕುರಿತು ಯೋಚನೆಮಾಡುವಂತೆ ಈಚೆಗೆ ಒಂದು ಸಂಗತಿ ನಡೆಯಿತು.

೨. ನಿನಗೆ ಅಪಯಶಸ್ಸಿನ ಮೇಲೆ ಆಸೆಯಿದ್ದರೆ ನಮ್ಮ ಹೆಸರನ್ನೇಕೆ ಇದರಲ್ಲಿ ತೊಡರಿಸಿದೆ ?

| ವಾಕ್ಯ | ಕರ್ತೃವಿಶೇಷಣ | ಕರ್ತೃ | ಕರ್ಮವಿಶೇಷಣ | ಕರ್ಮ | ಕ್ರಿಯಾ ವಿಶೇಷಣ | ಕ್ರಿಯಾಪದ | ಸಂಬಂಧ ಸೂಚಕ ಭಾವಸೂಚಕ, ಇತ್ಯಾದಿ |
|---|---|---|---|---|---|---|---|
| ೧. ನಾನು...... ನಡೆಯಿತು | ಒಂದು | ಸಂಗತಿ | ... | ... | ೧. ನಾನು ಈ ವಿಷಯವನ್ನು ಕುರಿತು ಯೋಚನೆ ಮಾಡುವಂತೆ<br>೨. ಈಚೆಗೆ | ನಡೆಯಿತು | |
| ೨. ನಿನಗೆ...... ತೊಡರಿಸಿದೆ | ... | (ನೀನು) | ನಮ್ಮ | ಹೆಸರನ್ನು | ೧. ನಿನಗೆ ಅಪಯಶಸ್ಸಿನ ಮೇಲೆ ಆಸೆಯಿದ್ದರೆ<br>೨. ಏಕೆ<br>೩. ಇದರಲ್ಲಿ | ತೊಡರಿಸಿದೆ | |

## ಸಂಯೋಜಿತವಾಕ್ಯ

೧ ಈ ಕೋಣೆಯಲ್ಲಿ ಬೆಳಕೂ ಬೀಳುವುದಿಲ್ಲ. ಗಾಳಿಯೂ ಬೀಸುವುದಿಲ್ಲ.

೨. ಎಷ್ಟೆಷ್ಟೋ ಜನ ಆಪ್ತರು ಬಂದು 'ಈ ಕೆಲಸವನ್ನು ಖಂಡಿತವಾಗಿ ಮಾಡಬೇಡ' ಎಂದು ಅವನಿಗೆ ಹೇಳಿದರು ; ಆದರೆ ಅವನು ಒಬ್ಬರ ಮಾತಿಗೂ ಕಿವಿಗೊಡದೆ ತನ್ನ ದಾರಿಯನ್ನೇ ಹಿಡಿದನು.

| | ಉಪವಾಕ್ಯ | ಕರ್ತೃವಿಶೇಷಣ | ಕರ್ತೃ | ಕರ್ಮವಿಶೇಷಣ | ಕರ್ಮ | ಕ್ರಿಯಾವಿಶೇಷಣ | ಕ್ರಿಯಾಪದ | ಸಂಬಂಧಸೂಚಕ. ಇತ್ಯಾದಿ |
|---|---|---|---|---|---|---|---|---|
| ೧. | ೧ನೆಯ ಉಪವಾಕ್ಯ, ಈ ಕೋಣೆಯಲ್ಲಿ......ಬೀಳುವುದಿಲ್ಲ | ... | ಬೆಳಕು | ... | ... | ಈ ಕೋಣೆಯಲ್ಲಿ | ಬೀಳುವುದಿಲ್ಲ | ಊ.ಊ |
| | ೨ನೆಯ ಉಪವಾಕ್ಯ: ಗಾಳಿಯೂ ಬೀಸುವುದಿಲ್ಲ | ... | ಗಾಳಿ | ... | ... | (ಈ ಕೋಣೆಯಲ್ಲಿ) | ಬೀಸುವುದಿಲ್ಲ | |
| ೨. | ೧ನೆಯ ಉಪವಾಕ್ಯ: ಎಷ್ಟೆಷ್ಟೋ...... ಹೇಳಿದರು. | ಎಷ್ಟೆಷ್ಟೋ ಜನ | ಆಪ್ತರು | ... | 'ಈ ಕೆಲಸ...... ಎಂದು | ೧. ಬಂದು ೨. ಅವನಿಗೆ | ಹೇಳಿದರು | ಎಂದು, ಆದರೆ |
| | ಇದರ ಅಧೀನ ವಾಕ್ಯ: ಈ ಕೆಲಸವನ್ನು......ಬೇಡ' ಎಂದು | ,, | (ನೀನು) | ಈ | ಕೆಲಸವನ್ನು | ಖಂಡಿತವಾಗಿ | ಮಾಡಬೇಡ | |
| | ೨ನೆಯ ಉಪವಾಕ್ಯ: ಅವನು...... ಹಿಡಿದನು | ,, | ಅವನು | ತನ್ನ | ದಾರಿಯನ್ನೇ | ಒಬ್ಬರ ಮಾತಿಗೂ ಕಿವಿಗೊಡದೆ | ಹಿಡಿದನು | |

## ಮಿಶ್ರವಾಕ್ಯ

೧. ಅಶೋಕನು ತನ್ನ ಶಿಲಾಶಾಸನಗಳಲ್ಲಿ ಮತದ್ವೇಷವು ಮಹಾ ಪಾಪವೆಂದೂ ಅನ್ಯಮತದವರ ವಿಷಯದಲ್ಲಿ ಸಹನೆಯಿಂದ ಇರಬೇಕೆಂದೂ ಬೋಧಿಸಿದ್ದಾನೆ.

| ಉಪವಾಕ್ಯ | ಕರ್ತೃ ವಿಶೇಷಣ | ಕರ್ತೃ | ಕರ್ಮ ವಿಶೇಷಣ | ಕರ್ಮ | ಕ್ರಿಯಾವಿಶೇಷಣ | ಕ್ರಿಯಾಪದ | ಸಂಬಂಧ ಸೂಚಕ ಮೊದಲಾದುವು |
|---|---|---|---|---|---|---|---|
| ಪ್ರಧಾನ ವಾಕ್ಯ: ಅಶೋಕನು ತನ್ನ ಶಿಲಾಶಾಸನಗಳಲ್ಲಿ ಬೋಧಿಸಿದ್ದಾನೆ. | ... | ಅಶೋಕನು | ... | [೧. ೨ನೆಯ ಅಧೀನ ವಾಕ್ಯ]ಗಳು | ತನ್ನ ಶಿಲಾಶಾಸನಗಳಲ್ಲಿ | ಬೋಧಿಸಿದ್ದಾನೆ | ... |
| ಅಧೀನವಾಕ್ಯಗಳು: (ಪ್ರಧಾನವಾಕ್ಯಕ್ಕೆ ಕರ್ಮಗಳು) | | | | | | | |
| ೧. ಮತದ್ವೇಷವು ಮಹಾಪಾಪವೆಂದೂ | ... | ಮತದ್ವೇಷವು | ... | ... | ಮಹಾಪಾಪ (ವಾಗಿ) | (ಇದೆ) | ಎಂದೂ |
| ೨. ಅನ್ಯಮತದವರ .........ಇರಬೇಕೆಂದೂ | ... | (ಜನರು) | ... | ... | ಅನ್ಯಮತದವರ ವಿಷಯದಲ್ಲಿ ಸಹಾನುಭೂತಿಯಿಂದ | ಇರಬೇಕು | ಎಂದೂ |

೨. ನಾವು ಯಾವುದನ್ನು ಎಣಿಸಿ, 'ಥೆ, ಇದು ಕೆಟ್ಟದು ಇದನ್ನೆಣಿಸಬಾರದು' ಎನ್ನುವೆವೋ ಅದು ನಿಜವಾಗಬೇಕೆ ?

| ಉಪವಾಕ್ಯ | ಕರ್ತೃವಿಶೇಷಣ | ಕರ್ತೃ | ಕರ್ಮವಿಶೇಷಣ | ಕರ್ಮ | ಕ್ರಿಯಾವಿಶೇಷಣಗಳು | ಕ್ರಿಯಾಪದ | ಸಂಬಂಧ ಸೂಚಕ ಮೊದಲಾದುವು |
|---|---|---|---|---|---|---|---|
| ಪ್ರಧಾನವಾಕ್ಯ: ಅದು ನಿಜವಾಗಬೇಕೆ ? | [ಅಧೀನ ವಾಕ್ಯ] | ಅದು | ... | ... | ... | ನಿಜವಾಗ ಬೇಕು | —೬ |
| ಅಧೀನವಾಕ್ಯ: ನಾವು ಯಾವುದನ್ನು......ಎಣಿಸಿ ಎನ್ನುವೆವೋ | ... | ನಾವು | ... | [ಥೆ...ಬಾರದು] | ಯಾವುದನ್ನು ಎಣಿಸಿ | ಎನ್ನುವೆವು | —೬ |
| ಅಧೀನವಾಕ್ಯದ ಕರ್ಮವಾಗಿರುವ ಉಪವಾಕ್ಯಗಳು: | | | | | | | |
| ೧. ಥೆ, ಇದು ಕೆಟ್ಟದು | ... | ಇದು | ... | ... | ಕೆಟ್ಟದು (ಆಗಿ) | (ಇದೆ) | ೬ |
| ೨. ಇದನ್ನೆಣಿಸಬಾರದು | ... | (ನಾವು) | ... | ಇದನ್ನು | ... | ಎಣಿಸಬಾರದು | ... |

# ಪರಿಶಿಷ್ಟ

ಧಾತುಗಳಿಗೆ '—ದ' ಮೊದಲಾದ ಕೆಲವು ಪ್ರತ್ಯಯಗಳು ಸೇರಿದಾಗ ಆಗುವ ರೂಪಗಳನ್ನು ಕೆಳಗೆ ಕೊಟ್ಟಿದೆ.

| ಧಾತು | ಭೂತಕಾಲ (ಪ್ರ.ಪು.ಪು.ಏಕ.) | (ನಪುಂ.ಏಕ.) | ಸಂಭಾವನಾರ್ಥ (ಪು. ಏಕ.) | ಭೂತನ್ಯೂನ | ಪಕ್ಷಾರ್ಥ |
|---|---|---|---|---|---|
| I. ತಿಳಿ | ತಿಳಿದನು | ತಿಳಿಯಿತು | ತಿಳಿದಾನು | ತಿಳಿದು | ತಿಳಿದರೆ |
| ನಡೆ | ನಡೆದನು | ನಡೆಯಿತು | ನಡೆದಾನು | ನಡೆದು | ನಡೆದರೆ |

ಹೀಗೆಯೇ—ಅಗಿ, ಸಿಡಿ, ಕುಣಿ, ಉರಿ, ಒಲಿ, ತಿವಿ, ಉಳಿ, ಬಗೆ, ಹೊಡೆ, ಹಣಿ, ಒದೆ, ನೆನೆ, ಮರೆ, ಸವೆ, ಹೊಸೆ, ಬೆಳೆ—ಮೊದಲಾದ (ಹೆಚ್ಚುಕಡಮೆ ಎಲ್ಲಾ) ಇಕಾರಾಂತ ಎಕಾರಾಂತ ಧಾತುಗಳು.

| | | | | | |
|---|---|---|---|---|---|
| II. ಮಾಡು | ಮಾಡಿದನು | ಮಾಡಿತು | ಮಾಡಿಯಾನು | ಮಾಡಿ | ಮಾಡಿದರೆ |
| ಹೆಚ್ಚು | ಹೆಚ್ಚಿದನು | ಹೆಚ್ಚಿತು | ಹೆಚ್ಚಿಯಾನು | ಹೆಚ್ಚಿ | ಹೆಚ್ಚಿದರೆ |
| ನಡುಗು | ನಡುಗಿದನು | ನಡುಗಿತು | ನಡುಗಿಯಾನು | ನಡುಗಿ | ನಡುಗಿದರೆ |
| ಕಳವಳಿಸು | ಕಳವಳಿಸಿದನು | ಕಳವಳಿಸಿತು | ಕಳವಳಿಸಿಯಾನು | ಕಳವಳಿಸಿ | ಕಳವಳಿಸಿದರೆ |

ಹೀಗೆಯೇ—ನೂಕು, ಕೂಗು, ಈಜು, ದಾಟು, ನೋಡು, ಓದು, ಸೇರು, ಹೋಲು, ಹಾಸು, ಬಾಳು, ಇಕ್ಕು, ತಗ್ಗು, ಮುಚ್ಚು, ಉಜ್ಜು, ಅಂಜು, ಕಟ್ಟು, ಒಡ್ಡು, ಬಿತ್ತು, ಅದ್ದು, ತಪ್ಪು, ಉಬ್ಬು, ಹೊಮ್ಮು, ತಳ್ಳು, ಕಲಕು, ಹೆಣಗು, ಹಳಚು, ಉರುಟು, ಹರಡು, ತಲಪು, ಹಲುಬು, ಅದುಮು, ದದರು, ಆಗಲು, ಹರವು, ಕಲಸು, ಅರಳು, ತಿಳಿಸು, ದಡಬಡಿಸು, ಆಡಿಸು, ದುಃಖಿಸು, ಭುಗಭುಗಿಸು—ಮೊದಲಾದ ಹಲವು ಉಕಾರಾಂತ ಧಾತುಗಳು.

III. ವಿಶೇಷಧಾತುಗಳು:

| | | | | | |
|---|---|---|---|---|---|
| ಈ | ಇತ್ತನು | ಇತ್ತಿತು | ಇತ್ತಾನು | ಇತ್ತು | ಇತ್ತರೆ |
| ಕೀ | ಕೀತನು | ಕೀತಿತು | ಕೀತಾನು | ಕೀತು | ಕೀತರೆ |
| ಆಗು | ಆದನು | ಆಯಿತು | ಆದಾನು | ಆಗಿ | ಆದರೆ |

ಹೀಗೆಯೆ—ಹೋಗು,

| | | | | | |
|---|---|---|---|---|---|
| ನಗು | ನಕ್ಕನು | ನಕ್ಕಿತು | ನಕ್ಕಾನು | ನಕ್ಕು | ನಕ್ಕರೆ |

ಹೀಗೆಯೇ—ಮಿಗು, ಹೋಗು.

| | | | | | |
|---|---|---|---|---|---|
| ಕೆಡು | ಕೆಟ್ಟನು | ಕೆಟ್ಟಿತು | ಕೆಟ್ಟಾನು | ಕೆಟ್ಟು | ಕೆಟ್ಟರೆ |

ಹೀಗೆಯೇ—ಇಡು, ಉಡು, ಕೊಡು, ಕೂಡು, ನಡು, ಪಡು, ಬಿಡು, ಸುಡು, ಒಡಂಬಡು, ಏರ್ಪಡು, ಮಾರ್ಪಡು, ಇತ್ಯಾದಿ.

| | | | | | |
|---|---|---|---|---|---|
| ಹೊರಡು | ಹೊರಟನು | ಹೊರಟಿತು | ಹೊರಟಾನು | ಹೊರಡು | ಹೊರಟರೆ |

ಹೀಗೆಯೆ—ಬಿಸುಡು.

| ಧಾತು | ಭೂತಕಾಲ (ಪ್ರ.ಪು.ಪು.ಏಕ.) | ಸಂಭಾವನಾರ್ಥ (ನಪುಂ.ಏಕ.) | (ಪು.ಏಕ.) | ಭೂತನ್ಯೂನ | ಪಕ್ಷಾರ್ಥ |
|---|---|---|---|---|---|
| ಕಾಣು | ಕಂಡನು | ಕಂಡಿತು | ಕಂಡಾನು | ಕಂಡು | ಕಂಡರೆ |
| ಉಣ್ಣು | ಉಂಡನು | ಉಂಡಿತು | ಉಂಡಾನು | ಉಂಡು | ಉಂಡರೆ |
| ಕದಿ | ಕದ್ದನು | ಕದ್ದಿತು | ಕದ್ದಾನು | ಕದ್ದು | ಕದ್ದರೆ |
| ಸೀನು | ಸೀತನು | ಸೀತಿತು | ಸೀತಾನು | ಸೀತು | ಸೀತರೆ |
| ತಿನ್ನು | ತಿಂದನು | ತಿಂದಿತು | ತಿಂದಾನು | ತಿಂದು | ತಿಂದರೆ |

ಹೀಗೆಯೇ—ಅನ್ನು, ಎನ್ನು.

| | | | | | |
|---|---|---|---|---|---|
| ನೋ | ನೊಂದನು | ನೊಂದಿತು | ನೊಂದಾನು | ನೊಂದು | ನೊಂದರೆ |
| ಬಾ | ಬಾತನು | ಬಾತಿತು | ಬಾತಾನು | ಬಾತು | ಬಾತರೆ |
| ಬೆ | ಬೆಂದನು | ಬೆಂದಿತು | ಬೆಂದಾನು | ಬೆಂದು | ಬೆಂದರೆ |
| ಬೈ | ಬೈದನು | ಬೈದಿತು | ಬೈದಾನು | ಬೈದು | ಬೈದರೆ |
| ಮಿ | ಮಿಂದನು | ಮಿಂದಿತು | ಮಿಂದಾನು | ಮಿಂದು | ಮಿಂದರೆ |
| ಕೊಯ್ | ಕೊಯ್ದನು | ಕೊಯ್ದಿತು | ಕೊಯ್ದಾನು | ಕೊಯ್ದು | ಕೊಯ್ದರೆ |

ಹೀಗೆಯೇ—ಅಯ್, ಒಯ್, ತೊಯ್, ನೆಯ್, ಬಯ್, ಹೊಯ್.

| | | | | | |
|---|---|---|---|---|---|
| ಅರಿ | ಅರಿತನು | ಅರಿಯಿತು | ಅರಿತಾನು | ಅರಿತು | ಅರಿತರೆ |

ಹೀಗೆಯೇ—ಕುರಿ, ಬೆರೆ, ಮರೆ.

| | | | | | |
|---|---|---|---|---|---|
| ಇರು | ಇದ್ದನು | ಇದ್ದಿತು | ಇದ್ದಾನು | ಇದ್ದು | ಇದ್ದರೆ |
| ಬರು | ಬಂದನು | ಬಂದಿತು | ಬಂದಾನು | ಬಂದು | ಬಂದರೆ |

ಹೀಗೆಯೇ—ತರು.

| | | | | | |
|---|---|---|---|---|---|
| ತೆರು | ತೆತ್ತನು | ತೆತ್ತಿತು | ತೆತ್ತಾನು | ತೆತ್ತು | ತೆತ್ತರೆ |

ಹೀಗೆಯೇ—ಹೆರು, ಹೊರು, ಎಚ್ಚರು, ಬೇಸರು.

| | | | | | |
|---|---|---|---|---|---|
| ಬೆವರು | ಬೆವತನು (ಬೆವರಿದನು) | ಬೆವತಿತು (ಬೆವರಿತು) | ಬೆವತಾನು (ಬೆವರಿಯಾನು) | ಬೆವತು (ಬೆವರಿ) | ಬೆವತರೆ (ಬೆವರಿದರೆ) |

ಹೀಗೆಯೇ—ಚಿಗುರು.

| | | | | | |
|---|---|---|---|---|---|
| ಕಲಿ | ಕಲಿತನು | ಕಲಿಯಿತು | ಕಲಿತಾನು | ಕಲಿತು | ಕಲಿತರೆ |

ಹೀಗೆಯೇ—ಒಲಿ.

| | | | | | |
|---|---|---|---|---|---|
| ಸೋಲು | ಸೋತನು | ಸೋತಿತು | ಸೋತಾನು | ಸೋತು | ಸೋತರೆ |
| ಕೊಲ್ಲು | ಕೊಂದನು | ಕೊಂದಿತು | ಕೊಂದಾನು | ಕೊಂದು | ಕೊಂದರೆ |

ಹೀಗೆಯೇ—ಸಲ್ಲು.

| | | | | | |
|---|---|---|---|---|---|
| ಗೆಲ್ಲು | ಗೆದ್ದನು | ಗೆದ್ದಿತು | ಗೆದ್ದಾನು | ಗೆದ್ದು | ಗೆದ್ದರೆ |
| ನಿಲ್ಲು | ನಿಂತನು | ನಿಂತಿತು | ನಿಂತಾನು | ನಿಂತು | ನಿಂತರೆ |
| ನೂಲು | ನೂತನು | ನೂತಿತು | ನೂತಾನು | ನೂತು | ನೂತರೆ |
| ಸಾ | ಸತ್ತನು | ಸತ್ತಿತು | ಸತ್ತಾನು | ಸತ್ತು | ಸತ್ತರೆ |
| ಹುಳಿ | ಹುಳಿತನು | ಹುಳಿತಿತು (ಹುಳಿಯಿತು) | ಹುಳಿತಾನು | ಹುಳಿತು | ಹುಳಿತರೆ |

ಹೀಗೆಯೇ—ಕಳಿ, ಕೊಳೆ, ಮೊಳೆ.

| ಧಾತು | ಭೂತಕಾಲ (ಪ್ರ.ಪು.ಪು.ಏಕ.) | (ನಪುಂ.ಏಕ.) | ಸಂಭಾವನಾರ್ಥ (ಪು.ಏಕ.) | ಭೂತನ್ಯೂನ | ಪಕ್ಷಾರ್ಥ |
|---|---|---|---|---|---|
| ಅಳು | ಅತ್ತನು | ಅತ್ತಿತು | ಅತ್ತಾನು | ಅತ್ತು | ಅತ್ತರೆ |
| | ಹೀಗೆಯೇ—ಉಳು | | | | |
| ಏಳು | ಎದ್ದನು | ಎದ್ದಿತು | ಎದ್ದಾನು | ಎದ್ದು | ಎದ್ದರೆ |
| ಕೀಳು | ಕಿತ್ತನು | ಕಿತ್ತಿತು | ಕಿತ್ತಾನು | ಕಿತ್ತು | ಕಿತ್ತರೆ |
| ಬೀಳು | ಬಿದ್ದನು | ಬಿದ್ದಿತು | ಬಿದ್ದಾನು | ಬಿದ್ದು | ಬಿದ್ದರೆ |
| ಹೂಳು | ಹೂತನು | ಹೂತಿತು | ಹೂತಾನು | ಹೂತು | ಹೂತರೆ |
| | (ಹೂಳಿದನು) | (ಹೂಳಿತು) | (ಹೂಳಿಯಾನು) | (ಹೂಳಿ) | (ಹೂಳಿದರೆ) |
| ಕೊಳ್ಳು | ಕೊಂಡನು | ಕೊಂತಿತು | ಕೊಂಡಾನು | ಕೊಂಡು | ಕೊಂಡರೆ |

---

WD 2490—GPB—40,000—3-12-45

